॥ ಓಂ ॥

॥ ಶ್ರೀಮನ್ಮಧ್ವಾಂತರ್ಗತಶ್ರೀಲಕ್ಷ್ಮೀವೇಂಕಟೇಶಾಯನಮಃ ॥



# ಷಾಷ್ಟಿಕವಂಶಪ್ರದೀಪ

ಶ್ರೀ ಹರಿವಿಠಲ ಪ್ರಕಾಶನ

2-3, ಮೊದಲನೆ ಮುಖ್ಯರಸ್ತೆ

ನರಸಿಂಹರಾಜ ಕಾಲೊನಿ, ಬೆಂಗಳೂರು-19

॥ ಓಂ ॥

॥ ಶ್ರೀಮನ್ಮಧ್ವಾಂತರ್ಗತ ಶ್ರೀಲಕ್ಷ್ಮೀವೇಂಕಟೇಶಾಯನಮಃ ॥



# ಷಾಷ್ಟಿಕವಂಶ ಪ್ರದೀಪ

ಶ್ರೀ ಹರಿವಿಠಲ ಪ್ರಕಾಶನ

2-3, ಮೊದಲನೆ ಮುಖ್ಯ ರಸ್ತೆ

ನರಸಿಂಹರಾಜ ಕಾಲೋನಿ, ಬೆಂಗಳೂರು-19

# ಷಾಷ್ಟಿಕವಂಶ ಪ್ರದೀಪ
# SHASHTIKAVAMSHA PRADEEPA

ಮೊದಲನೆ ಮುದ್ರಣ ೧೨೫೦ ಪ್ರತಿಗಳು

ದುರ್ಮತಿ ಸಂವತ್ಸರ, ಆಷಾಢ ಕೃಷ್ಣ ಪಂಚಮಿ — 22-7-1981
(ಶ್ರೀ ಷಾಷ್ಟೀಕ ಕೃತ್ಸ್ಪಪರ ಪುಣ್ಯದಿನ)

ಕರ್ನಾಟಕ ಪಬ್ಲಿಷರ್ಸ್ ಮತ್ತು ಬುಕ್‌ಸೆಲ್ಲರ್ಸ್
ಅಸೋಸಿಯೇಷನ್ ಬೆಂಗಳೂರು, ಇವರಿಂದ
ಈ ಪುಸ್ತಕದ ಮುದ್ರಣಕ್ಕೆ ಬೇಕಾದ ಕಾಗದವು
ರಿಯಾಯಿತಿ ದರದಲ್ಲಿ ದೊರೆತಿದೆ

ಆನಂದನಿಲಯ ಪ್ರಿಂಟರ್ಸ್
2, ವಿನಾಯಕ ಬಡಾವಣೆ
ಗವೀಪುರ, ಗುಟ್ಟಹಳ್ಳಿ ಮುಖ್ಯ ರಸ್ತೆ
ಬೆಂಗಳೂರು-19

# ಸಮರ್ಪಣೆ

ವಿಷ್ಣೋರ್ಧ್ಯಾನಪರಾಯಣಾಃ ಶುಭತಮಾಃ ಸಂಪ್ರಾಪ್ತಸಂಪದ್ಗಣಾಃ
ಪ್ರಜ್ಞಾಶೀಲದಯಾದಿಧರ್ಮನಿಪುಣಾ ನಿತ್ಯಾನ್ನದಾನೋತ್ಸುಕಾಃ ।
ಭಾಸ್ವತ್ಕೀರ್ತಿವಿಭೂಷಣಾಃ ಶುಭಗುಣಾ ನಿತ್ಯಾರ್ಥಿಸಂತೋಷಣಾಃ
ಧೀರಾಃ ಷಾಷ್ಟಿಕವಂಶಪಾವನಕರಾಃ ಕುರ್ವಂತು ನೋ ಮಂಗಳಮ್ ॥

ವಿಷ್ಣುಧ್ಯಾನಪರಾಯಣರೂ ಶುಭತಮರೂ ಪರಮಾತ್ಮನ
ಅನುಗ್ರಹದಿಂದ ಸಂಪಾದಿಸಲ್ಪಟ್ಟ ಐಶ್ವರ್ಯ
ವುಳ್ಳವರೂ, ಪ್ರಜ್ಞಾಶೀಲ, ದಯಾಪರರೂ
ಸುನಿಪುಣರೂ, ನಿತ್ಯಾನ್ನದಾನದಲ್ಲಿ ಉತ್ಸು
ಕರೂ, ಭಾಸ್ವತ್ಕೀರ್ತಿವಿಭೂಷಣರೂ,
ಶುಭಗುಣರೂ ಅರ್ಥಿಗಳಿಗೆ ನಿತ್ಯವೂ
ಅನ್ನದಾನದಲ್ಲಿ ಸಂತೋಷ
ವುಳ್ಳವರೂ ಷಾಷ್ಟಿಕವಂಶ
ಸಂಭೂತರೂ
ಧೀರರೂ

ಷಾಷ್ಟಿಕಕುಲಾವತಂಸರೂ ಆದ ಸಕಲ ಮಹಾನುಭಾವರು
ನಮಗೆ ಮಂಗಳವನ್ನುಂಟು ಮಾಡಲಿ.

# ಅರಿಕೆ

ಆಸತ್ಯಲೋಕಾದಾಭೂಮೇರಾಲೋಕಾಲೋಕಪರ್ವತಾತ್ ।
ಯೇ ಸಂತಿ ಪಾಷ್ಟಿಕಾಃ ಸಂತಸ್ತೇಭ್ಯೋ ನಿತ್ಯಂ ನಮೋ ನಮಃ ॥

ನಾನು ಪಾಷ್ಟಿಕಕುಲೋತ್ಪನ್ನ. ನಮ್ಮ ಪೂರ್ವಿಕರು ಚಿತ್ರದುರ್ಗದ ಪಾಳೆಯಗಾರ ಮದಕರಿನಾಯಕನ ಮಂತ್ರಿಗಳಾಗಿದ್ದು, ಕದನಗಳಲ್ಲಿ ಭಾಗ ವಹಿಸುತ್ತಿದ್ದುದರಿಂದ "ರಾಣ್ಯ"ದವರೆಂದು ಪ್ರಸಿದ್ಧರಾಗಿದ್ದರು. ನಾನು ಈಗ ಬೆಂಗಳೂರಿನಲ್ಲಿ ನೆಲಸಿರುತ್ತೇನೆ. ನನ್ನ ಕುಲಬಾಂಧವರ ಚರಿತ್ರೆಯನ್ನು ಸಂಗ್ರಹಿಸಬೇಕೆಂದು ಬಹು ಕಾಲದಿಂದಲೂ ಅಪೇಕ್ಷಿಸುತ್ತಿದ್ದೆ. ಇದಕ್ಕಾಗಿ ಹಿರಿಯರನ್ನು ಕಂಡಾಗಲೆಲ್ಲ ವಿಷಯಗಳನ್ನು ಸಂಗ್ರಹಿಸುತ್ತಿದ್ದೆ. ಇಂಥ ಸಮಯ ದಲ್ಲಿ ನನ್ನ ಸ್ನೇಹಿತರೊಬ್ಬರು ಶ್ರೀಯುತ ಬೆಟ್ಟದ ಅನಂತಕೃಷ್ಣಾಚಾರ್ಯರಿಂದ ರಚಿತವಾದ "ಷಾಷ್ಟಿಕ ಮಹಾಪುರುಷರು" ಮತ್ತು "ಪಾಷ್ಟಿಕನಾಮಾವಳಿ" ಎಂಬ ಎರಡು ಗ್ರಂಥಗಳನ್ನು ಕೊಟ್ಟರು. ಆ ಗ್ರಂಥಗಳನ್ನು ವಿಚಾರಪೂರ್ವಕ ವಾಗಿ ಪರಿಶೀಲಿಸಿದೆ. ಆ ಮಹನೀಯರು ಶ್ರಮಪಟ್ಟು ಪ್ರಾಚೀನ ಹಸ್ತ ಲಿಖಿತ ಪ್ರತಿಗಳನ್ನು ಸಂಗ್ರಹಿಸಿ, ವಿಮರ್ಶಿಸಿ. ವಿಷಯಗಳನ್ನು ಕ್ರೋಡೀ ಕರಿಸಿ ಕುಲಬಾಂಧವರಿಗೆ ಮಹದುಪಕಾರ ಮಾಡಿದ್ದಾರೆ. ನಾನು ಬೇರೆ ಗ್ರಂಥವನ್ನು ಹೊಸದಾಗಿ ರಚಿಸುವುದಕ್ಕಿಂತಲೂ, ಈ ಗ್ರಂಥಗಳನ್ನೇ ಸಂಸ್ಕರಿಸಿ ವಿಸ್ತರಿಸುವುದೇ ಒಳ್ಳೆಯದೆಂದು ಯೋಚಿಸಿ, ಈ ಎರಡು ಗ್ರಂಥಗಳ ಲ್ಲಿರುವ ವಿಷಯಗಳನ್ನೂ ಇನ್ನೂ ಇತರ ವಿಷಯಗಳನ್ನೂ ಸೇರಿಸಿ "ಷಾಷ್ಟಿಕ ವಂಶಪ್ರದೀಪ"ವೆಂಬ ಹೊಸನಾಮದಿಂದ ಪ್ರಕಟಿಸಿದ್ದೇನೆ. ಆದ್ದರಿಂದ ಈ "ಪಾಷ್ಟಿಕವಂಶಪ್ರದೀಪ"ವು, "ಪಾಷ್ಟಿಕಮಹಾಪುರುಷರು" ಮತ್ತು "ಪಾಷ್ಟಿಕ ನಾಮಾವಳಿ"ಗಳ ಸಂಸ್ಕರಿಸಿ ವಿಸ್ತರಿಸಿದ ದ್ವಿತೀಯ ಮುದ್ರಣವೆಂದೇ ಹೇಳ ಬಹುದು.

“ಷಾಷ್ಟಿಕಮಹಾಪುರುಷರು” ಎಂಬುದು 1943ರಲ್ಲಿಯೂ “ಷಾಷ್ಟಿಕ ನಾಮಾವಳಿ” ಎಂಬುದು 1950ರಲ್ಲಿಯೂ ಮುದ್ರಿತವಾಗಿ ಅವುಗಳ ಪ್ರತಿಗಳು ಈಗ ದೊರಕುತ್ತಿಲ್ಲ. ಶ್ರೀಯುತ ಬೆಟ್ಟದ ಅನಂತಕೃಷ್ಣಾಚಾರ್ಯರ ಈ ಎರಡು ಗ್ರಂಥಗಳಿಗೂ, 18ನೆ ಶತಮಾನದ ಆದಿಯಲ್ಲಿದ್ದ ತೃಣಪುರದ ರಾಘವೇಂದ್ರಕವಿಯಿಂದ ಸಂಗೃಹೀತವಾದ “ಸಾರಸ್ವತಪರಿಣಯ”ವೇ ಆಕರ ಗ್ರಂಥ.

ಶ್ರೀಯುತ ಅನಂತಕೃಷ್ಣಾಚಾರ್ಯರ ಮಕ್ಕಳು ಅವರ ತಂದೆಯವರಿಂದ ರಚಿತವಾದ ಎರಡು ಗ್ರಂಥಗಳನ್ನೂ ಆನುಪೂರ್ವಿಯಾಗಿ ಉಪಯೋಗಿಸಿಕೊಳ್ಳಲು ಅನುಮತಿಯನ್ನಿತ್ತು ಸಹಕರಿಸಿರುತ್ತಾರೆ. ಅನೇಕರು ಅನೇಕ ರೀತಿಯಲ್ಲಿ ಸಹಾಯ ಮಾಡಿರುತ್ತಾರೆ. ಇವರಲ್ಲರಿಗೂ ನಾನು ಕೃತಜ್ಞತಾಪೂರ್ವಕವಾದ ವಂದನೆಗಳನ್ನು ಅರ್ಪಿಸುತ್ತೇನೆ.

ಮುಖ್ಯವಾಗಿ ನಮ್ಮ ಕುಲಬಾಂಧವರು ಸಹಕರಿಸಿ, ಈ ಗ್ರಂಥದ ಪ್ರತಿಗಳನ್ನು ಕೊಂಡು ಉತ್ತೇಜನವನ್ನು ಕೊಡುವುದೇ ನನ್ನ ಶ್ರಮಕ್ಕೆ ತಕ್ಕ ಪ್ರತಿಫಲ. ಷಾಷ್ಟಿಕರ ವೈಭವವು ಹೃದಯಂಗಮವಾಗಿ ವರ್ಣಿತವಾಗಿದೆ. ಪ್ರಮಾದವಶದಿಂದ ಯಾವುದಾದರೂ ತಪ್ಪಿದ್ದಲ್ಲಿ ವಾಚಕರು ತಿಳಿಸಿದರೆ, ಮುಂದಿನ ಮುದ್ರಣದಲ್ಲಿ ಸರಿಪಡಿಸುವುದಕ್ಕೆ ಅನುಕೂಲವಾಗುತ್ತದೆ.

ಇದರಲ್ಲಿರುವ ದೋಷಜಾಲಗಳನ್ನು ಉಪೇಕ್ಷಿಸಿ, ಗುಣಭಾಗಗಳಿಂದಲೇ ಸಂತೋಷಪಡಬೇಕಾಗಿ ವಿನಯಪೂರ್ವಕ ಪ್ರಾರ್ಥನೆ.

ರಾಣ್ಯಕೃಷ್ಣಾರ್ಯಸಂಭೂತರಾಜಾರಾಯವಿಪಶ್ಚಿತಾ ।
ಸಂಗೃಹೀತಃ ಪ್ರದೀಪೋऽಯಂ ಭೂಯಾಚ್ಛ್ರೀಕೃಷ್ಣತುಷ್ಟಯೇ ॥

ಡಾ॥ ರಾಣ್ಯ ರಾಜಾರಾವ್
ಸಂಗ್ರಾಹಕ

ಬೆಂಗಳೂರು
17-8-1981
ಶ್ರೀರಾಘವೇಂದ್ರ ಗುರುಸಾರ್ವಭೌಮರ ಪುಣ್ಯದಿನ
ದುರ್ಮತಿನಾಮ ಸಂವತ್ಸರ ಶ್ರಾವಣ ಬಹುಳ ಬಿದಿಗೆ

ಶ್ರೀ

# ಮುನ್ನುಡಿ

"ಯೋ ವ್ಯಾಸಮುನಿದಾವಾಗ್ನಿಃ ಸಚ್ಛಾಸ್ತ್ರಮರುತಾ ಸಹ ।
ದದಾಹ ಕುಮತಾರಣ್ಯಂ ಪ್ರಕಾಶಾಯ ತಮಾಶ್ರಯೇ ॥"

ಷಾಷ್ಟಿಕರು (ಅರವತ್ತೊಕ್ಕಲು) ಅಂದರೆ ಅರವತ್ತು ಮನೆತನದವರು ಎಂದು ಆಖ್ಯಾಯಿಕೆ ಇದೆ. ಒಕ್ಕಲು ಎಂಬುದು ಮರ್ಯಾದೆ ಸೂಚಕ ಪದ ಷಾಷ್ಟಿಕರ ವಂಶವು ಪ್ರಾಚೀನವಾದುದು. ಉತ್ತರ ಭಾರತದ ಪಂಜಾಬ್ ಪ್ರಾಂತದ ಅಹಿಚ್ಛತ್ರ ಅಗ್ರಹಾರವೇ ಇವರ ಮೂಲ ಸ್ಥಳ. ಕದಂಬ ವಂಶದ ತ್ರಿಣೇತ್ರ ಕದಂಬನು ತಾನು ಕೈಗೊಂಡ ಅಶ್ವಮೇಧ ಯಾಗದ ಪೂರೈಕೆಗಾಗಿ ಕ್ರಿಸ್ತಶಕ ನಾಲ್ಕನೇ ಶತಮಾನದಲ್ಲಿ ಷಾಷ್ಟಿಕರನ್ನು ಅಹಿಚ್ಛತ್ರದಿಂದ ದಕ್ಷಿಣಾ ಪಥಕ್ಕೆ ಕರೆತಂದು ಅವರಿಗೆ ಅಗ್ರಹಾರಗಳು ಮತ್ತು ವೃತ್ತಿಗಳನ್ನು ಕಲ್ಪಿಸಿ ಕೊಟ್ಟು ಶಿಕಾರಿಪುರದತಾಲ್ಲೂಕು ತಾಳಗುಂದಗ್ರಾಮದಲ್ಲಿ ನೆಲಸುವಂತೆ ಏರ್ಪಾಟು ಮಾಡಿದನು. ಮೂಲತಃ ಅರವತ್ತುನಾಲ್ಕು ಬ್ರಾಹ್ಮಣ ಕುಟುಂಬ ಗಳನ್ನು ಕರೆಸಿಕೊಂಡನು. ಅದರಲ್ಲಿ ಮೂರು ಕುಟುಂಬದವರು ರಾಜನಿಗೆ ಸಹಾಯ ಮಾಡುತ್ತಾ ಯುದ್ಧದಲ್ಲಿ ಹತರಾಗಿ ವೀರಸ್ವರ್ಗವನ್ನು ಹೊಂದಿದರು. ಇನ್ನೊಂದು ಭಾರತ ಗೋತ್ರ ಮನೆತನದ ಸಂತತಿ ನಷ್ಟವಾಯಿತು. ಇನ್ನು ಅರವತ್ತು ಮನೆತನಗಳು ಮಾತ್ರ ಉಳಿದವು. ಇವರಿಗೆ ಷಾಷ್ಟಿಕರೆಂದು ಹೆಸರಾಯಿತು. ಮೂಲತಃ ಬಂದ 64 ವಕ್ಕಲು ಎಂಬುದು ಸಂಕೋಚದಿಂದ ಅರವತ್ತೊಕ್ಕಲು ಎಂದಾಯಿತು. ಷಾಷ್ಟಿಕರ ಚರಿತ್ರೆಯೂ ಶ್ರೀವ್ಯಾಸರಾಜರ ಚರಿತ್ರೆಯೂ ಹಾಸು ಹೊಕ್ಕಾಗಿದೆ ಶ್ರೀವ್ಯಾಸರಾಜರನ್ನು ಅನುದಿನವೂ ನೆನೆಯದ ಷಾಷ್ಟಿಕನೇ ಇಲ್ಲ. ಶ್ರೀವ್ಯಾಸರಾಜರ ಕಾಲದಲ್ಲಿ ದೊಡ್ಡಬಳ್ಳಾಪುರವು ಷಾಷ್ಟಿಕಪ್ರಚುರ ಊರಾಗಿತ್ತು.

ಷಾಷ್ಟಿಕರ ವೈಭವವನ್ನೂ, ಚರಿತ್ರೆಯನ್ನೂ ತಿಳಿಸುವ ಗ್ರಂಥಗಳು ಯಾವುವೆಂದರೆ :—

ಸಂಸ್ಕೃತ ಭಾಷೆಯಲ್ಲಿ—

1) ಶ್ರೀವ್ಯಾಸರಾಜವಿರಚಿತ "ಷಾಷ್ಟಿಕವಂಶಮುಕ್ತಾಕಲಾಪ"
2) ಶ್ರೀವಿಜಯೀಂದ್ರರಚಿತ "ಶ್ರೀವ್ಯಾಸರಾಜಾಭ್ಯುದಯ"
3) ಶ್ರೀಸುಧೀಂದ್ರರಚಿತ "ಗುರುಗುಣರತ್ನಮಾಲಾ"
4) ಗೋದಾವರೀತೀರಸ್ಥ ಕೇಶವರಚಿತ "ಷಾಷ್ಟಿಕಾನ್ವಯಮಲ್ಲಿಕಾ ಸುಮನಿಚಯ"
5) ಮರಾಠಿ ಭಾಷೆಯಲ್ಲಿ-ಗಂಗಾಧರರಚಿತ "ಷಾಷ್ಟಿಕವಂಶಾವಳಿ"
6) ಮರಾಠಿ ಭಾಷೆಯಲ್ಲಿ ಎನ್.ಜಿ. ಚಾಪೇಕರ್ ರಚಿತ "ಚಿತ್ಪಾವನ" (304 ಪುಟಗಳ ದೊಡ್ಡಗ್ರಂಥ)
7) ಕನ್ನಡ ಭಾಷೆಯಲ್ಲಿ ರುದ್ರಭಟ್ಟ ರಚಿತ "ಆರಾಧ್ಯ ವಂಶಾವಳಿ"
8) ತೃಣಪುರದ ರಾಘವೇಂದ್ರಕವಿ ರಚಿತ "ಸಾರಸ್ವತ ಪರಿಣಯ" ಈ ಕವಿಯು ಹರಿಕಥಾಮೃತಸಾರವನ್ನು ರಚಿಸಿರುವ ಶ್ರೀಜಗನ್ನಾಥ ದಾಸರ ಸಮೀಪ ಬಂಧು, ಆಪ್ತಮಿತ್ರ ಮತ್ತು ಶಿಷ್ಯ.
9) ಗಜಾನನಕವಿ ರಚಿತ "ಪಲ್ಲವರಾಜಮಿತ್ರ."
10) ಕರ್ಣಪಾರ್ಯ ಕವಿ ರಚಿತ "ಕದಂಬರಾಜವಿಜಯ"
11) ಪ್ರಾಚೀನ ಶಿಲಾಶಾಸನಗಳು—ಮುಖ್ಯವಾಗಿ ತಾಳಗುಂದ ಅಗ್ರಹಾರದ್ದು.
12) ಪ್ರಬುದ್ಧ ಕರ್ಣಾಟಕ ಮಾಸಪತ್ರಿಕೆ—1946 ಕಾಮನಸಂಚಿಕೆ ಪುಟ 25-38 ಎನ್. ಎಸ್. ರಾಜಪುರೋಹಿತರ ಲೇಖನ.
13) ಉರ್ದು ಭಾಷೆಯಲ್ಲಿ— ಮೀರ್ಆಲಂ ರಚಿತ "ಗರ್ದಂಕಹ"

ಶ್ರೀ ಬಿ. ಅನಂತಕೃಷ್ಣಾಚಾರ್ಯರು ಇವುಗಳಲ್ಲಿರುವ ವಿಷಯಗಳನ್ನು ಸಂಗ್ರಹಿಸಿ, ಕ್ರೋಢೀಕರಿಸಿ, ವಿಮರ್ಶಿಸಿ, "ಷಾಷ್ಟಿಕಮಹಾಪುರುಷರು" ಮತ್ತು "ಷಾಷ್ಟಿಕನಾಮಾವಳಿ ಎಂಬ ಎರಡು ಗ್ರಂದಗಳನ್ನು ಮೂರು ದಶಕಗಳ ಹಿಂದೆಯೇ ರಚಿಸಿದ್ದಾರೆ. ಈಗ ಅವುಗಳ ಪ್ರತಿಗಳು ದೊರಕುವುದಿಲ್ಲ.

ಇಂಥ ಸಮಯದಲ್ಲಿ ಡಾ॥ ಆರ್. ಕೆ. ರಾಜಾರಾಯರು ಮೇಲೆ ತಿಳಿಸಿರುವ ಎರಡು ಗ್ರಂಥಗಳಲ್ಲಿರುವ ವಿಷಯಗಳನ್ನೂ ತಮ್ಮಿಂದ ಈಚೆಗೆ ಸಂಗ್ರಹೀತವಾದ ಷಾಷ್ಟಿಕರಿಗೆ ಸಂಬಂಧಪಟ್ಟ ಅನೇಕ ವಿಷಯಗಳನ್ನೂ ಸೇರಿಸಿ "ಷಾಷ್ಟಿಕವಂಶ ಪ್ರದೀಪ"ವೆಂಬ ಉತ್ಕೃಷ್ಟವೂ, ಉಪಯುಕ್ತವೂ ಆದ ಗ್ರಂಥವನ್ನು ಸಂಗ್ರಹಿಸಿ ಪ್ರಕಟಿಸಿರುತ್ತಾರೆ. ರಾಘವೇಂದ್ರಕವಿಯ "ಸಾರಸ್ವತಪರಿಣಯ"ವೇ ಆಕರ ಗ್ರಂಥ. "ಷಾಷ್ಟಿಕವಂಶಪ್ರದೀಪ"ವು ಯಥಾರ್ಥ ನಾಮವುಳ್ಳದ್ದಾಗಿದೆ ಉಪಯುಕ್ತ ವಿಷಯಬೃಂಹಿತವಾಗಿದೆ. ಭಾರತದ ಇತಿಹಾಸಕ್ಕೆ ಸಂಬಂಧಿಸಿರುವ ಅನೇಕ ಹೊಸ ವಿಷಯಗಳನ್ನೊಡಗೊಂಡಿದೆ. ನಾಡಿನ ಮಹಾಪುರುಷರ ಜೀವನ ಚರಿತ್ರೆಗಳು ಉಪಪಾದಿತವಾಗಿವೆ. ಮಾಧ್ವಮಠಗಳಿಗೆ ಸಂಬಂಧಿಸಿದ ಅನೇಕ ಅಪೂರ್ವ ವಿಷಯಗಳು ಬೆಳಕಿಗೆ ಬಂದಿವೆ. ಶ್ರೀ ಡಾ। ಆರ್. ಕೆ. ರಾಜಾರಾಯರು, ಈ ಗ್ರಂಥದ ಪ್ರಕಟನೆಯಿಂದ, ತಮ್ಮ ಕುಲಬಾಂಧವರಿಗೂ, ಇತಿಹಾಸವಿಮರ್ಶಕರಿಗೂ, ಇತರ ಜಿಜ್ಞಾಸುಗಳಿಗೂ ಮಹದುಪಕಾರವನ್ನು ಮಾಡಿರುತ್ತಾರೆ ಶ್ರೀಶನು ಈ ಮಹನೀಯರಿಗೆ ಸಕಲ ಸನ್ಮಂಗಳಗಳನ್ನೂ ಅನುಗ್ರಹಿಸಲಿ ಎಂದು ಆಶಿಸುತ್ತೇನೆ.

"ದೋಷಜಾಲಮುಪೇಕ್ಷ್ಯಾತ್ರ ಗುಣಾಂಶೇನ್ಯೈವ ತೋಷಿಣಾಂ ।
ಸತಾಂ ಸದಾ ಮುದೇ ಭೂಯಾಜ್ಜೀಯಾದಾಚಂದ್ರತಾರಕಮ್ ॥

ಬೆಂಗಳೂರು
22-7-1981
ಶ್ರೀ ಟೀಕಾಕೃತ್ಪಾದರ ಪುಣ್ಯದಿನ

ಗೋಪಾಲಕೃಷ್ಣಾಚಾರ್ಯ ಗೌಡಗೆರೆ

# ಅಭಿಪ್ರಾಯಗಳು

ಶ್ರೀ

॥ ಶ್ರೀಮನ್ಮೂಲಗೋಪಾಲಕೃಷ್ಣೋ ವಿಜಯತೇ ॥

॥ ಶ್ರೀಮದ್ವ್ಯಾಸರಾಜಗುರುಸಾರ್ವಭೌಮೋ ವಿಜಯತೇ ॥

"ವ್ಯಾಸಸೂತ್ರಪದಾರ್ಥೋಪನ್ಯಾಸಪಾರೀಣವಾನ್ಯಪಿ ।
ವ್ಯಾಸರಾಜಸ್ಯ ಭಜತೇ ದಾಸತಾಂ ಕೋ ನ ಕೋವಿದಃ" ॥

"ಷಾಷ್ಟಿಕವಂಶಪ್ರದೀಪ"ವೆಂಬ ಗ್ರಂಥದ ಬಗ್ಗೆ ಎರಡು ಮಾತುಗಳು.

ಶ್ರೀಯುತ ಡಾ॥ ಆರ್. ಕೆ. ರಾಜಾರಾಯರು "ಷಾಷ್ಟಿಕವಂಶಪ್ರದೀಪ" ವೆಂಬ ಶಿರೋನಾಮೆಯ ಗ್ರಂಥವನ್ನು, ಹಿಂದಿನ ಅನೇಕ ಗ್ರಂಥಗಳನ್ನು ಪರಿಶೀಲಿಸಿ, ವಿಷಯಗಳನ್ನು ಕೂಲಂಕಷವಾಗಿ ಸಂಗ್ರಹಿಸಿ, ಬಹುಶ್ರಮವಹಿಸಿ ಬರೆದು ಅರವತ್ತೊಕ್ಕಲು ಮನೆತನದಲ್ಲಿ ಜನಿಸಿದ ಮಹಾನುಭಾವರ ಭವ್ಯ ಪರಂಪರೆಯನ್ನು ಬೆಳಕಿಗೆ ತಂದಿರುತ್ತಾರೆ. ಇಂದಿನ ಕಿರಿಯರಿಗೆ ಅಂದಿನ ಹಿರಿಯರ ಹಿರಿಮೆಯೇನೆಂಬುದನ್ನು ಅರಿಯಲು ಈ ಪುಸ್ತಕವು ಬಹು ಸಹಕಾರಿ ಯಾಗಿದೆ. ಇದರ ರಚನೆಗೆ ಕಳೆದ ಶತಮಾನಗಳ ಶಿಲಾಶಾಸನಗಳೂ, ಕೀರ್ತಿ ಶೇಷರಾದ ತೃಣಪುರದ ರಾಘವೇಂದ್ರ ಕವಿಯಿಂದ ರಚಿತವಾಗಿರುವ "ಸಾರಸ್ವತ ಪರಿಣಯ"ವೆಂಬ ಗ್ರಂಥವೂ, ಸಂಶೋಧನಾತ್ಮಕ ಲೇಖನ ರೂಪವಾದ ಬೆಟ್ಟದ ಶ್ರೀ ಅನಂತಕೃಷ್ಣಾಚಾರ್ಯರಿಂದ ರಚಿತವಾಗಿ ಪ್ರಕಟ ವಾಗಿರುವ "ಷಾಷ್ಟಿಕಮಹಾಪುರುಷರು, ಮತ್ತು ಷಾಷ್ಟಿಕನಾಮಾವಳಿ" ಎಂಬ ಗ್ರಂಥಗಳೂ ಮುಖ್ಯವಾಗಿ ಆಧಾರಗಳಾಗಿವೆ. ಸಾರಸ್ವತ ಪರಿಣಯ ಗ್ರಂಥಕರ್ತನಾದ ರಾಘವೇಂದ್ರ ಕವಿಯು ತಾನು ಶ್ರೀ ಜಗನ್ನಾಥದಾಸರ ಸಾಕ್ಷಾತ್ ಶಿಷ್ಯನೆಂದು ಹೇಳಿಕೊಂಡಿರುತ್ತಾನೆ.

ಇಂಡಿಯಾದೇಶದ ಮೊದಲನೆಯ ಸೆನ್‌ಸಸ್ ಕಮೀಷನರಾಗಿ ಕ್ರಿ. ಶ. 1801ರಲ್ಲಿ ನೇಮಕಗೊಂಡ ಕರ್ನಲ್ ಕ್ಲೋಸ್ ಸಾಹೇಬರ ಆಪ್ತ ಕಾರ್ಯದರ್ಶಿಯಾಗಿ ಕೆಲಸ ಮಾಡಿ ಇಡೀ ಭಾರತ ಭೂಮಿಯನ್ನು ಮೂರಾವರ್ತಿ ಸಂಚರಿಸಿದ ರಾಘವೇಂದ್ರ ಕವಿಯು ತಾನು ಸಂಚರಿಸಿದ ಕಡೆಗಳಲ್ಲೆಲ್ಲಾ ಸಂಗ್ರಹಿಸಿದ ತಾಳೆವಾಲೆ ಪತ್ರಗಳನ್ನೂ, ಶಿಲಾಶಾಸನಗಳನ್ನೂ, ಗೋವಾ ಪಟ್ಟಣದಲ್ಲಿ ಸಂಗ್ರಹಿಸಿದ ಲಿಸ್ಬನಸ್ ಎಂಬ ರಾಯಭಾರಿಯು ಪೋರ್ಚುಗೀಸ್ ಭಾಷೆಯಲ್ಲಿ ಬರೆದಿರುವ ಲೇಖನವನ್ನೂ, ವೆನಿಸ್ ಎಂಬ ಇಟಲಿ ರಾಯಭಾರಿಯು ರೋಮನ್ ಭಾಷೆಯಲ್ಲಿ ಬರೆದಿರುವ ವಿಜಯನಗರದ ವರ್ಣನೆಯನ್ನೂ, ಪರಿಶೀಲಿಸಿ ಪ್ರಾಚೀನಾಚಾರ್ಯರ ವಿಚಾರವನ್ನು ವಿಶೇಷವಾಗಿ ಶ್ರೀವ್ಯಾಸರಾಜರ ದಿವ್ಯ ಪ್ರಭಾವಾತಿಶಯವನ್ನು "ಸಾರಸ್ವತ ಪರಿಣಯ"ವೆಂಬ ಗ್ರಂಥದಲ್ಲಿ ಬಹು ಸುಂದರವಾಗಿ ಚಿತ್ರಿಸಿದ್ದಾನೆ ಬಹಮನಿ ರಾಜ್ಯದ ರಾಯಭಾರಿಗಳಾದ ಮೀರ್ ಆಲಂ ಎಂಬುವರು ಉರ್ದು ಭಾಷೆಯಲ್ಲಿ "ಗರ್ದಂಕಹನ" ಎಂಬ ಹೆಸರಿನಲ್ಲಿ ವಿಜಯನಗರದ ರಾಜಾಸ್ಥಾನದ ವರ್ಣನೆಯನ್ನೂ ಶ್ರೀವ್ಯಾಸರಾಜರ ಮಹಿಮಾತಿಶಯವನ್ನು ಬರೆದಿರುವುದಾಗಿಯೂ ಅದನ್ನು ಈ ರಾಘವೇಂದ್ರ ಕವಿಯು ತಂದಿರುವುದಾಗಿಯೂ ತನ್ನ ಗ್ರಂಥದಲ್ಲಿ ಉಲ್ಲೇಖಿಸಿರುತ್ತಾನೆ.

"ಸಾರಸ್ವತಪರಿಣಯ"ವೆಂಬ ಹೆಸರಿನ ಗ್ರಂಥವು ಸಮಗ್ರವಾಗಿ ಈಗ ದೊರಕದೇ ಇದ್ದಾಗ್ಯೂ ಈಗ ಉಪಲಬ್ಧವಾಗಿರುವ ಭಾಗವು ಅನೇಕ ವಿಷಯಗಳನ್ನೊಳಗೊಂಡು ಶ್ರೀವ್ಯಾಸರಾಜರ ಅದ್ಭುತ ಸಂಗತಿಗಳಿಗೆ ಕೈಗನ್ನಡಿಯಂತಿದೆ.

ಮಾದರಿಗಾಗಿ ಐದು ಪದ್ಯಗಳನ್ನು ಮಾತ್ರ ಇಲ್ಲಿ ಉದಾಹರಿಸುತ್ತೇವೆ

"ವಿಜಯನಗರದ ವಿಶ್ವವಿದ್ಯಾಲಯದೊಳನುದಿನ ಓದುತಿರ್ಪರು
ಹತ್ತು ಸಾಸಿರದೆಣಿಕೆಯುಳ್ಳ ದ್ವೀಪದ್ವೀಪಾಂತರದ ಭಾರತದ
ಹಲವು ವಿದ್ಯಾರ್ಥಿಗಳ ತಂಡವು ಅವರವರ ಪ್ರತ್ಯೇಕ ಸ್ಥಳದೊಳವಚರಿಸಿ
ಅನುಕೂಲಗೈವುತಿರ್ಪರು ವ್ಯಾಸರಾಯರು ತಾವೇ ಪ್ರತಿದಿನದಿ ॥೧॥

ವಿಜಯನಗರದ ಸಾರ್ವಭೌಮರ ರಾಜ ಗುರುವೆಂದೆನಿಸಿ
ಜಗವಿಖ್ಯಾತ ಸಾಹಸಿ ಕೃಷ್ಣದೇವನ ನಾಮಂಧರಿಸಿದ ಕೃಷ್ಣರಾಯಗೆ
ಪ್ರಾಣವೆಂದೆನಿಸಿ। ವರ್ಷತೊಂಭತ್ತೆರಡು ಪರ್ಯಂತರವು ಭೂಮಿಯೊಳ
ಗಿರ್ದು ಕೀರ್ತಿಯ ದೇಹದಿಂ ಚಿರಂಜೀವಿಯಾಗಿಹ ನನ್ನ ಗುರು
ವ್ಯಾಸರಾಯರ ಬಿಡದೇ ಕೊಂಡಾಡುವೆನು ಪ್ರತಿದಿನದಿ ||೨||

ವ್ಯಾಸರಾಯರು ಗುರುವರೇಣ್ಯರು ಬರೆದ ಚಂದ್ರಿಕೆ ಎಂಬುದತ್ಯದ್ಭುತದ
ಗ್ರಂಥವು ಟೀಕೆಯ ರಚನೆಯನು ಮಾಡದೇ ಬಿಟ್ಟಿರದನುಳಿದು ।
ಶೇಷಚಂದ್ರಿಕೆ ಎಂಬ ಪೆಸರಿಟ್ಟು ಬರೆದು ಪ್ರಖ್ಯಾತರಾದರು ರಘುನಾಥ
ಪೆಸರಿನತೀರ್ಥರೆಂಬುವರು ||೩||

ವ್ಯಾಸರಾಯರು ಗುರುವರೇಣ್ಯರು ವರುಷ ತೊಂಭತ್ತೆರಡು ಪರ್ಯಂತರವು
ಭೂಮಿಯೊಳಗಿರ್ದು ತುಂಗಭದ್ರಾನದಿಯ ಮಧ್ಯದಲಿ ಪದ್ಮನಾಭರಪುಣ್ಯ
ವೃಂದಾವನದ ಬಳಿಯೊಳು ಯೋಗಾಸನದಿ ತೆರಳಿದರು ವೈಕುಂಠಕ್ಕೆ
ಶಿಷ್ಯರ ದುಃಖ ವಿಮ್ಮಡಿಸೆ ||೪||

ವ್ಯಾಸಯೋಗಿಯ ಚರಿತೆ ಎಂಬಭಿಧಾನದಲಿ ಸೋಮನಾಥನು
ಬರೆದಿಹನು ಚಂಪೂಕಾವ್ಯ ರಾಮಾಯಣದ ತೆರದೊಳು ರಚನೆಗೈದಿಹನು।
ವ್ಯಾಸರಾಜಾಭ್ಯುದಯವೆಂಬುದು ಬರೆದಿಹರು ವಿಜಯೀಂದ್ರ ಗುರುಗಳು
ಗುರುಗುಣರತ್ನ ಮಾಲಿಕೆಯೆಂದು ಸುಧೀಂದ್ರರು ಬರೆದಿಹರು ಇವು
ಪ್ರಖ್ಯಾತವಾಗಿಹ ಗುರು ಚರಿತ್ರೆಗಳು, ||೫||

ಇವು ಸಾರಸ್ವತ ಪರಿಣಯದಿಂದ ಆರಿಸಿದ ಪದ್ಯಗಳು.

ಅನೇಕ ಆಧಾರಗಳಿಂದ ರಚಿತವಾಗಿರುವ "ಈ ಷಾಷ್ಟಿಕವಂಶಪ್ರದೀಪ" ವೆಂಬ ಗ್ರಂಥದಲ್ಲಿ ಉಕ್ತವಾಗಿರುವಂತೆ ಈ ಪವಿತ್ರ ವಂಶಪರಂಪರೆಯಲ್ಲಿ

"ದೇವ, ಋಷಿ, ಪಿತೃ, ಪಾನರಾಃ ಇತಿಮುಕ್ತ್ಯಾಸ್ತು ಪಂಚಧಾ" ಎಂಬಂತೆ ಮುಕ್ತಿ ಯೋಗ್ಯರಾದ ಐದು ಗುಂಪಿಗೆ ಸೇರಿದ ಮಹಾನುಭಾವರು, ಪೀಠಾಧಿಪತಿಗಳಾಗಿಯೋ, ಪ್ರವಚನಾಚಾರ್ಯರುಗಳಾಗಿಯೋ ಗ್ರಂಥನಿರ್ಮಾತೃಗಳಾಗಿಯೋ, ನಿರಂತರ ಶಾಸ್ತ್ರಾಭ್ಯಾಸತತ್ಪರರಾಗಿಯೋ ತಮ್ಮ ಜೀವನಯಾತ್ರೆಯನ್ನು ಶ್ರೀಹರಿವಾಯುಗಳ ಸೇವೆಗಾಗಿ ಮುಡುಪಾಗಿಟ್ಟು ಪರಮಾತ್ಮನ ಪರಮಾನುಗ್ರಹಕ್ಕೆ ಪಾತ್ರರಾಗಿ ಆದರ್ಶಪುರುಷರಾಗಿ ಬಾಳಿ, ಕೃತಕೃತ್ಯರಾಗಿರುವುದನ್ನು ಮನಗಾಣಬೇಕಾಗಿದೆ. ಈ ಗ್ರಂಥವು ಇಂದಿನ ಕಿರಿಯರಿಗೆ ಹಿಂದಿನ ಹಿರಿಯರ ಪರಿಚಯವನ್ನುಂಟುಮಾಡಿ ಮಾರ್ಗದರ್ಶಕವಾಗಿದೆ. ಹಿರಿಯರ ಹಿರಿಮೆಗೆ ಕೈಗನ್ನಡಿಯಂತಿದೆ. ಅತ್ಯದ್ಭುತಗಳಾದ ಹಿಂದಿನವರ ಅಮೋಘ ಕಾರ್ಯಗಳ ಚಿಂತನೆಯು ಇಂದಿನ ಜನತೆಗೆ ಸ್ಫೂರ್ತಿದಾಯಕವಾಗಿರುವುದು. ಇಂತಹ ಗ್ರಂಥವನ್ನು ಬರೆದು ಉಪಕರಿಸಿದ ಶ್ರೀಯುತ ಆರ್. ಕೆ ರಾಜಾರಾಯರಿಗೆ ಶ್ರೀಹರಿವಾಯುಗಳು ಇತೋಪ್ಯತಿಶಯಿತವಾದ ಆಯುರಾರೋಗ್ಯಭಾಗ್ಯಗಳನ್ನು ಕರುಣಿಸಲೆಂದು ಈ ಮೂಲಕ ಶ್ರೀಹರಿವಾಯುಗಳನ್ನು ಪ್ರಾರ್ಥಿಸುತ್ತೇನೆ.

ಇತಿ

ಪಂಡಿತರಾಜ ಮಾಗಡಿ ರಂಗನಾಥಾಚಾರ್ಯ

॥ ಶ್ರೀಗುರುರಾಜೋ ವಿಜಯತೇ ॥

# ಅರವತ್ತೊಕ್ಕಲಿನವನ ಅರಿಕೆಯ ಮಾತು

ಷಾಷ್ಟಿಕಕುಲದ ವಿಚಾರದಲ್ಲಿ ಯಾರು ಏನೇ ಅಡ್ಡಮಾತಾಡಿದರೂ, ಆ ಕುಲೋತ್ತಂಸರಾದ ಶ್ರೀಜಯತೀರ್ಥರು, ಶ್ರೀಪಾದರಾಜರು, ವ್ಯಾಸರಾಜರು ರಾಘವೇಂದ್ರಸ್ವಾಮಿಗಳು, ಪುರಂದರದಾಸರು, ಶ್ರೀ ಜಗನ್ನಾಥದಾಸರೇ ಮೊದಲಾದ ಮಹಾತ್ಮರ ವಿಷಯದಲ್ಲಿ ಸಾತ್ವಿಕಜನಕ್ಕೆ ಮಾತ್ರ ಪೂಜ್ಯ ಬುದ್ಧಿಯಿರುವುದು ಸತ್ಯ.

"ಷಾಷ್ಟಿಕವಂಶಪ್ರದೀಪ"ದಲ್ಲಿ ಬಹುಶಃ ಶಾಸನ, ಲೇಖನಗಳ ಆಧಾರವನ್ನುಳ್ಳ ವಿಷಯಗಳನ್ನು ನಂಬದೇ ಇರುವುದಕ್ಕೆ ಕಾರಣವೇನೂ ಇಲ್ಲ.

ಅಭಿಜನ ವಿದ್ಯಾಸಮುಪೇತಂ ಸಮಾಹಿತಂ" ಇತ್ಯಾದಿ ಆಪಸ್ತಂಬ ವಾಕ್ಯದಂತೆ, ಸದ್ವಂಶವೂ, ಆಚಾರವಂತನಾಗಲು ಕಾರಣವಾಗಿವೆ. ಆದ್ದರಿಂದ ಷಾಷ್ಟಿಕ ವಂಶದಲ್ಲಿ ಹುಟ್ಟಿರುವವರು, ಆ ವಂಶದ ಸಂಸ್ಕಾರ, ಆಚಾರ, ಧರ್ಮಗಳನ್ನು ಮೈಗೂಡಿಸಿಕೊಂಡು ಶ್ರೀಜಯತೀರ್ಥಾದಿ ಪುಣ್ಯಶ್ಲೋಕರ ಉಪದೇಶ ರೂಪವಾದ ಸತ್ಸಿದ್ಧಾಂತಜ್ಞಾನವನ್ನು ಸಂಪಾದಿಸಿ ಶ್ರೀಹರಿವಾಯುಗುರುಗಳ ಪ್ರಸಾದಕ್ಕೆ ಪಾತ್ರರಾಗಬೇಕಾದುದು ನಮ್ಮೆಲ್ಲರ ಕರ್ತವ್ಯವಾಗಿದೆ.

"ಷಾಷ್ಟಿಕವಂಶಪ್ರದೀಪ"ಗ್ರಂಥ ಪ್ರಕಾಶಕರಾದ ಶ್ರೀವರ್ಮಾ ರಾಜರಾಯರು ಮಾಡಿರುವ ಉಪಕಾರವು ಚಿರಸ್ಮರಣೀಯವು. ಅವರಿಗೆ ಶ್ರೀಹರಿವಾಯು ಗುರುಗಳು ಪರಮಾನುಗ್ರಹಮಾಡಲಿ ಎಂದು ವಿನಮ್ರವಾಗಿ ಪ್ರಾರ್ಥಿಸುತ್ತೇನೆ.

ಟಿ. ಕೆ. ವೇಣುಗೋಪಾಲದಾಸ್
ಷಾಷ್ಟಿಕ ವಶಿಷ್ಠ ಗೋತ್ರ ಮೈದೇವರು ಮನೆತನದವರು.

|| ಶ್ರೀ ||

## ಶ್ರೀವ್ಯಾಸರಾಜವಿರಚಿತ–

# ಶ್ರೀನಿವಾಸಸ್ತೋತ್ರಮ್

ಪ್ರಾತಃ ಸ್ಮರಾಮಿ ರಮಯಾ ಸಹ ವೇಂಕಟೇಶಮ್
ಮಂದಸ್ಮಿತಂ ಮುಖಸರೋರುಹಕಾಂತಿರಮ್ಯಮ್ ।
ಮಾಣಿಕ್ಯಕಾಂತಿವಿಲಸನ್ಮುಕುಟೋರ್ಧ್ವಪುಂಡ್ರಂ
ಪದ್ಮಾಕ್ಷಲಕ್ಷಮಣಿಕುಂಡಲಮಂಡಿತಾಂಗಮ್ ॥

ಪ್ರಾತರ್ಭಜಾಮಿ ಕರರಮ್ಯಸುಶಂಖಚಕ್ರಂ
ಭಕ್ತಾಭಯಪ್ರದಕಟಿಸ್ಥಲದತ್ತಪಾಣಿಮ್ ।
ಶ್ರೀವತ್ಸಕೌಸ್ತುಭಲಸನ್ಮಣಿಕಾಂಚನಾಢ್ಯಂ
ಪೀತಾಂಬರಂ ಮದನಕೋಟಿಸುಮೋಹನಾಂಗಮ್ ॥

ಪ್ರಾತರ್ನಮಾಮಿ ಪರಮಾತ್ಮಪದಾರವಿಂದಂ
ಆನಂದಸಾಂದ್ರನಿಲಯಂ ಮಣಿನೂಪುರಾಢ್ಯಮ್ ।
ಏತತ್ಸಮಸ್ತಜಗತಾಮಿತಿ ದರ್ಶಯಂತಂ
ವೈಕುಂಠಮತ್ರ ಭಜತಾಂ ಕರಪಲ್ಲವೇನ ॥

ವ್ಯಾಸರಾಜಯತಿಪ್ರೋಕ್ತಂ ಶ್ಲೋಕತ್ರಯಮಿದಂ ಶುಭಮ್ ।
ಪ್ರಾತಃಕಾಲೇ ಪಠೇದ್ಯಸ್ತು ಪಾಪೇಭ್ಯೋ ಮುಚ್ಯತೇ ನರಃ ॥

ಇತಿ ಶ್ರೀವ್ಯಾಸರಾಜಯತಿವಿರಚಿತ ಶ್ರೀನಿವಾಸ ಸ್ತೋತ್ರಂ ಸಂಪೂರ್ಣಂ

|| ಶ್ರೀ ||

## ಶ್ರೀವ್ಯಾಸರಾಜವಿರಚಿತ—

# ಯಂತ್ರೋದ್ಧಾರಕವಾಯುಸ್ತುತಿಃ

ನಮಾಮಿ ದೂತಂ ರಾಮಸ್ಯ ಸುಖದಂ ಚ ಸುರದ್ರುಮಮ್ ।
ಪೀನವೃತ್ತಮಹಾಬಾಹುಂ ಸರ್ವಶತ್ರುನಿವಾರಣಮ್ ॥

ನಾನಾರತ್ನಸಮಾಯುಕ್ತಕುಂಡಲಾದಿವಿರಾಜಿತಮ್ ।
ಸರ್ವದಾಭೀಷ್ಟದಾತಾರಂ ಸತಾಂ ವೈ ದೃಢಮಾಹವೇ ॥

ವಾಸಿನಂ ಚಕ್ರತೀರ್ಥಸ್ಯ ದಕ್ಷಿಣಸ್ಥೇ ಗಿರೌ ಸದಾ ।
ತುಂಗಾಂಭೋಧಿತರಂಗಸ್ಯ ವಾತೇನ ಪರಿಶೋಭಿತೇ ॥

ನಾನಾದೇಶಗತೈಃ ಸದ್ಭಿಃ ಸೇವ್ಯಮಾನಂ ನೃಪೋತ್ತಮೈಃ ।
ಧೂಪದೀಪಾದಿನೈವೇದ್ಯೈಃ ಪಂಚಖಾದ್ಯೈಶ್ಚ ಶಕ್ತಿತಃ ॥

ಭಜಾಮಿ ಶ್ರೀಹನೂಮಂತಂ ಹೇಮಕಾಂತಿಸಮಪ್ರಭಮ್ ।
ವ್ಯಾಸತೀರ್ಥಯತೀಂದ್ರೇಣ ಪೂಜಿತಂ ಚ ವಿಧಾನತಃ ॥

ತ್ರಿವಾರಂ ಯಃ ಪಠೇನ್ನಿತ್ಯಂ ಸ್ತೋತ್ರಂ ಭಕ್ತ್ಯಾ ದ್ವಿಜೋತ್ತಮಃ ।
ವಾಂಛಿತಂ ಲಭತೇಽಭೀಷ್ಟಂ ಷಣ್ಮಾಸಾನಂತರಂ ಖಲು ॥

ಪುತ್ರಾರ್ಥೀ ಲಭತೇ ಪುತ್ರಂ ಯಶೋಽರ್ಥೀ ಲಭತೇ ಯಶಃ ।
ವಿದ್ಯಾರ್ಥೀ ಲಭತೇ ವಿದ್ಯಾಂ ಧನಾರ್ಥೀ ಲಭತೇ ಧನಮ್ ॥

ಸರ್ವಥಾ ಮಾಸ್ತು ಸಂದೇಹೋ ಹರಿಃ ಸಾಕ್ಷೀ ಜಗತ್ಪತಿಃ ।
ಯಃ ಕರೋತ್ಯತ್ರ ಸಂದೇಹಂ ಸ ಯಾತಿ ನರಕಂ ಧ್ರುವಮ್ ॥

ಇತಿ ಶ್ರೀವ್ಯಾಸರಾಜಯತಿವಿರಚಿತಯಂತ್ರೋದ್ಧಾರಕ ವಾಯುಸ್ತುತಿಃ ಸಂಪೂರ್ಣಾ

|| ಓಂ ||

# ಶ್ರೀವಿಜಯೀಂದ್ರಭಿಕ್ಷುವಿರಚಿತ

# ಶ್ರೀವ್ಯಾಸರಾಜಸ್ತೋತ್ರಮ್

ವಂದೇ ಮುಕುಂದಮರವಿಂದಭವಾದಿವಂದ್ಯಂ
ಇಂದಿಂದಿರಾಪ್ರತತನೇಚಕನಾಕಟಾಕ್ಷಮ್ ।
ಬಂದೀಕೃತಾಮರಮಮಂದಮತಿಂ ವಿದಧ್ಯಾ-
ದಾನಂದತೀರ್ಥಹೃದಯಾಂಬುಜಮತ್ತಭೃಂಗಃ ॥೧॥

ಶ್ರೀವ್ಯಾಸಯೋಗೀ ಹರಿಪಾದರಾಗೀ
ಭಕ್ತಾರ್ತಿಭಂಗೀ ಹಿತದಕ್ಷಸದ್ಗೀಃ ।
ತ್ಯಾಗೀ ವಿರಾಗೀ ವಿಷಯೇಷು ಭೋಗೀ
ಮುಕ್ತ್ಯೈ ಸದಾ ಗೀತಸುರೇಂದ್ರಸಂಗೀ ॥೨॥

ಲಕ್ಷ್ಮೀಶಪಾದಾಂಬುಜಮತ್ತಭೃಂಗಃ
ಸದಾ ದಶಪ್ರಜ್ಞನಯಪ್ರಸಂಗಃ ।
ಅದ್ವೈತವಾದೇ ಕೃತಮೂಲಭಂಗಃ
ಮಹಾವ್ರತೀಶೋ ವಿಷಯೇಷ್ವಸಂಗಃ ॥೩॥

ಸದಾ ಸದಾಯತ್ತಮಹಾನುಭಾವಃ
ಭಕ್ತಾಘತೂಲೋಚ್ಚಯತೀವ್ರದಾವಃ ।
ದೌರ್ಜನ್ಯವಿಧ್ವಂಸನದಕ್ಷರಾವಃ
ಶಿಷ್ಯಾಶ್ಚ ಯೋ ಯಚ್ಛತಿ ದಿವ್ಯಗಾವಃ ॥೪॥

ಅದ್ವೈತದಾವಾನಲಕಾಲಮೇಘಃ
ರಮಾರಮಸ್ನೇಹವಿದಾರಿತಾಘಃ ।
ವಾಗ್ವೈಖರೀನಿರ್ಜಿತಸಜ್ಜನೌಘಃ
ಮಾಯಾಮತವ್ರಾತಹಿಮೇ ನಿದಾಘಃ ॥೫॥

ಮಧ್ವಸಿದ್ಧಾಂತದುಗ್ಧಾಬ್ಧಿವೃದ್ಧಿಪೂರ್ಣಕಲಾಧರಃ ।
ವ್ಯಾಸರಾಜಯತೀಂದ್ರೋ ಮೇ ಭೂಯಾದೀಪ್ಸಿತಸಿದ್ಧಯೇ ॥೬॥

ಯನ್ನಾಮಗ್ರಹಣಾದೇವ ಪಾಪರಾಶಿಃ ಪಲಾಯತೇ ।
ಸೋಽಯಂ ಶ್ರೀವ್ಯಾಸಯೋಗೀಂದ್ರೋ ನಿಹಂತು ದುರಿತಾನಿ ನಃ ॥೭॥

ಯನ್ಮೃತ್ತಿಕಾದರ್ಶನಮಾತ್ರಭೀತಃ
ಕ್ವಚಿತ್ಪಿಶಾಚಸ್ತದನುವ್ರತೇಭ್ಯಃ ।
ದತ್ವಾ ಧನಂ ವಾಂಛಿತಮಾಪ್ಯ ತಸ್ಯ
ತೈರ್ವಾ ಜಿತೋಽಯಾದಚಿರೇಣ ಮುಕ್ತಿಮ್ ॥೮॥

ಯತ್ಕೌಶಿಕಾನಾಸಿಕಾಕ್ತಜಲಾನ್ನಿಃಶಂಕಿತೇ ನರೇ ।
ವ್ಯಾಘ್ರೋ ಮಹಾನಪಿ ಸ್ಪ್ರಷ್ಟುಂ ನಾಶಕತ್ತಮಿಹಾಶ್ರಯೇ ॥೯॥

ದ್ವಾತ್ರಿಂಶತ್ಸಪ್ತಶತಕಮೂರ್ತೀರ್ಹನುಮತಃ ಪ್ರಭೋಃ ।
ಪ್ರತಿಷ್ಠಾತಾ ಸ್ಮೃತಿಖ್ಯಾತಸ್ತಂ ಭಜೇ ವ್ಯಾಸಯೋಗಿನಮ್ ॥೧೦॥

ಸೀಮಾನಂ ತತ್ರ ತತ್ರೈತ್ಯ ಕ್ಷೇತ್ರೇಷು ಚ ಮಹಾಮತಿಃ ।
ವ್ಯವಸ್ಥಾಪ್ಯಾತ್ರ ಮರ್ಯಾದಾಂ ಲಬ್ಧವಾಂಸ್ತಮಿಹಾಶ್ರಯೇ ॥೧೧॥

ಮಧ್ವದೇಶಿಕಸಿದ್ಧಾಂತಪ್ರವರ್ತಕಶಿಖಾಮಣಿಃ ।
ಸೋಽಯಂ ಶ್ರೀವ್ಯಾಸಯೋಗೀಂದ್ರೋ ಭೂಯಾದೀಪ್ಸಿತಸಿದ್ಧಯೇ ॥

ಭೂತಪ್ರೇತಪಿಶಾಚಾದ್ಯಾ ಯಸ್ಯ ಸ್ಮರಣಮಾತ್ರತಃ ।
ಪಲಾಯಂತೇ ಶ್ರೀನೃಸಿಂಹಸ್ಥಾನಂ ತಮಹಮಾಶ್ರಯೇ ॥೧೩॥

ವಾತಜ್ವರಾದಿರೋಗಾಶ್ಚ ಭಕ್ತ್ಯಾ ಯಮುಪಸೇವಿನಃ ।
ದೃಢವ್ರತಸ್ಯ ನಶ್ಯಂತಿ ಪಿಶಾಚಾಶ್ಚ ತಮಾಶ್ರಯೇ ॥೧೪॥

ತಾರಪೂರ್ಣಂ ಬಿಂದುಯುಕ್ತಪ್ರಥಮಾಕ್ಷರಪೂರ್ವಕಮ್ ।
ಚತುರ್ಥ್ಯಂತಂ ಚ ತನ್ನಾಮ ನಮಃಶಬ್ದಾಂತಭೂಷಿತಮ್ ॥೧೫॥

ಪಾರಯಂತಂ ಮಧ್ವನಯಂ ಮೇಘಗಂಭೀರಯಾ ಗಿರಾ ।
ಧ್ಯಾಯನ್ನಾವರ್ತಯೇದ್ಯಸ್ತು ಭಕ್ತ್ಯಾ ಮೇಧಾಂ ಸ ವಿಂದತೇ ॥೧೬॥

ರತ್ನಸಿಂಹಾಸನಾರೂಢಂ ಚಾಮರೈರಭಿವೀಜಿತಮ್ ।
ಧ್ಯಾಯನ್ನಾವರ್ತತೇ ಯಸ್ತು ಮಹತೀಂ ಶ್ರಿಯಮಾಪ್ನುಯಾತ್ ॥

ಪ್ರಹ್ಲಾದಸ್ಯಾವತಾರೋಽಸಾವಿಂದ್ರಸ್ಯಾನುಪ್ರವೇಶವಾನ್ ।
ತೇನ ತತ್ಸೇವಿನಾಂ ನೄಣಾಂ ಸರ್ವಮೇತದ್ಭವೇದ್ಧ್ರುವಮ್ ॥೧೮॥

ನಮೋ ವ್ಯಾಸಮುನೀಂದ್ರಾಯ ಭಕ್ತಾಭೀಷ್ಟಪ್ರದಾಯಿನೇ ।
ನಮತಾಂ ಕಲ್ಪತರವೇ ಭಜತಾಂ ಕಾಮಧೇನವೇ ॥೧೯॥

ವ್ಯಾಸರಾಜಗುರೋ ಮಹ್ಯಂ ತ್ವತ್ಪಾದಾಂಬುಜಸೇವನಾತ್ ।
ದುರಿತಾನಿ ವಿನಶ್ಯಂತು ಯಚ್ಛ ಶೀಘ್ರಂ ಮನೋರಥಾನ್ ॥೨೦॥

ಯೋ ವ್ಯಾಸತ್ರಯಸಂಜ್ಞಕಾನ್ ದೃಢತರಾನ್
ಮಧ್ವಾರ್ಯಶಾಸ್ತ್ರಾರ್ಥಕಾನ್
ರಕ್ಷದ್ವಜ್ರಶಿಲಾಕೃತೀನ್ ಬಹುಮತಾನ್
ಕೃತ್ವಾ ಪರೈರ್ದುಸ್ತರಾನ್ ।

ಪ್ರಾಯಚ್ಛನ್ನಿಜಪಾದಪದ್ಮಸರಸೀಜಾಸಕ್ತಿ
ಸ್ವಾಂತಾಂ ಮುದಾ
ಸೋಽಯಂ ವ್ಯಾಸಮುನೀಶ್ವರೋ ಭವತು ನೋ
ತಾಪತ್ರಯಕ್ಷಾಂತಯೇ ॥೨೦॥

ಮಧ್ವಭಕ್ತೋ ವ್ಯಾಸಶಿಷ್ಯಪೂರ್ಣಪ್ರಜ್ಞಮತಾನುಗಃ
ವ್ಯಾಸರಾಜಮುನಿಶ್ರೇಷ್ಠಃ ಪಾತು ನಃ ಕೃಪಯಾ ಗುರುಃ ॥೨೨॥

ವ್ಯಾಸರಾಜೋ ವ್ಯಾಸರಾಜ ಇತಿ ಭಕ್ತ್ಯಾ ಸದಾ ಜಪನ್
ಮುಚ್ಯತೇ ಸರ್ವದುಃಖೇಭ್ಯಸ್ತದಂತರ್ಯಾಮಿಣೋ ಬಲಾತ್ ॥೨೩॥

ಸ್ತುವನ್ನನೇನ ಮಂತ್ರೇಣ ವ್ಯಾಸರಾಜಾಯ ಧೀಮತೇ ।
ಅಭಿಷೇಕಾರ್ಚನಾದೀನ್ಯಃ ಕುರುತೇ ಸ ಹಿ ಮುಕ್ತಿಭಾಕ್ ॥೨೪॥

ಗುರುಭಕ್ತ್ಯಾ ಭವೇದ್ವಿಷ್ಣುಭಕ್ತಿರವ್ಯಭಿಚಾರಿಣೀ ।
ತಯಾ ಸರ್ವಂ ಲಭೇದ್ಧೀಮಾಂಸ್ತಸ್ಮಾದೇತತ್ಸದಾ ಪಠೇತ್ ॥೨೫॥

ಇತಿ ಶ್ರೀಪರಮಹಂಸಪರಿವ್ರಾಜಕಾಚಾರ್ಯಾಣಾಂ ಶ್ರೀಸುರೇಂದ್ರ
ತೀರ್ಥ ಪೂಜ್ಯಪಾದಾನಾಂ ಶಿಷ್ಯೇಣ ವಿಜಯೀಂದ್ರಭಿಕ್ಷುಣಾ
ವಿರಚಿತಂ ಶ್ರೀವ್ಯಾಸರಾಜಸ್ತೋತ್ರಂ ಸಂಪೂರ್ಣಮ್

॥ ಶ್ರೀಕೃಷ್ಣಾರ್ಪಣಮಸ್ತು ॥

॥ ಶ್ರೀ ॥

# ಶ್ರೀವ್ಯಾಸರಾಜವಿರಚಿತ–

# ಷಾಷ್ಟಿಕಮಂಗಲಾಷ್ಟಕಮ್

ಶ್ರೀಬ್ರಹ್ಮಾದಿಸಮಸ್ತನಿರ್ಜರಗಣೈಃ ಸಂವಂದ್ಯಪಾದಾಂಬುಜಃ
ಸೃಷ್ಟ್ಯಾದ್ಯಷ್ಟಕಮಾತನೋತಿ ಜಗತಾಂ ಯೋ ವೈ ಸದಾ ಶಾಶ್ವತಃ ।
ಭಕ್ತಾಭೀಷ್ಟಧುರಂಧರೋಽಯಮತುಲೋ ದೈತ್ಯೇಭಪಂಚಾನನಃ
ತಂ ವಂದೇ ಸಕಲೋರುಸದ್ಗುಣನಿಧಿಃ ಕುರ್ಯಾತ್ಸದಾ ಮಂಗಲಮ್ ॥ ೧

ಶಾಷ್ಟ್ಯಾಃ ಶ್ರೀಕರಿಕೋಣಪತ್ತನವರೇ ಶ್ರೀಕೃಷ್ಣರಾಜ್ಞಃ ಸಭಾ-
ಮಧ್ಯೇ ವ್ಯಾಸಮುನೀಶ್ವರೋ ಮುದಯುತಃ ಸಂಬಂಧಿಸಿದ್ಧೌ ಸತಾಮ್ ।
ಶ್ರೀಮಚ್ಛಾಷ್ಟಿಕದುಗ್ಧಸಿಂಧುಮಥನಂ ಕೃತ್ವಾ ತು ನಾಮಾನ್ಯಸೌ
ಗೋತ್ರಂ ವಿಸ್ತೃತವಾನ್ ಕ್ರಮೇಣಗುರುರಾಟ್ ಕುರ್ವಂತು ನೋ ಮಂಗಲಮ್

ಶ್ರೀಮತ್ಕಾಶ್ಯಪಗೋತ್ರಜಾಃ ಶವಿಸುಡಿಃ ಪ್ರಖ್ಯಾತಕೀರ್ತಿಸ್ಫುರನ್
ನಂಜೇದೇವಣಭಾರತೋಲ್ಲರಸಕಾಸ್ತ್ವಾತ್ರೇಯಗೋತ್ರೋದ್ಭವಾಃ ।
ಭಾಸ್ವಂತೋ ಹರಿವೀರಿತಾಶ್ಚ ಬುದುಡೀರೀಚಾಲುರೋಚಿಷ್ಣವಃ
ಶ್ರೀಪುದ್ಯಂದರಸಾಶ್ಚ ಹೊನ್ನರಸಕಾಃ ಕುರ್ವಂತು ನೋ ಮಂಗಲಮ್ ॥ ೩

ಭಾರದ್ವಾಜಭವಾಶ್ಚ ಕೊಚರಸಕಾ ಯೇ ಜಂಬುಖಂಡಾಹ್ವಯಾಃ
ಶ್ರೀನಿಷ್ವಗ್ರಹವಿಶ್ವರೂಪಮಣಿಪಾಲ್ಲೂಪಾಖ್ಯಹೋತೂರುಜಾಃ ।
ಶೀಘಾಗೋಪಲಮಂಕಣೀಶಿವಪುರಾ ಚಿಟ್ಟಾಧನಾಂಕಾಹ್ವಯಾಃ
ವಿಶ್ವಾಮಿತ್ರಸಗೋತ್ರಜಾಶ್ಚ ರಸಿಕಾಃ ಕುರ್ವಂತು ನೋ ಮಂಗಲಮ್ ॥ ೪

ಶ್ರೀಮದ್ಗೌತಮಗೋತ್ರಜಾಶ್ಚ ಬರಗೀ ಸದ್ವೀಗಮುದ್ರಾಭಿಧಾಃ
ವೇದಾಂತಪ್ರತಿಪಾದಿತಾಃ ಪ್ರಸಗಸಲ್ಲೂರುಪ್ರ ಸಂತೋಷಿತಾಃ ।
ಊದೀಬೊಕ್ಕಸಜಾನವಾಲತಿರಡೀಧೀರಾಶ್ಚ ತೆಂಕೂರುಜಾಃ
ಭಾಸ್ವಂತೋ ಜಮದಗ್ನಿಗೋತ್ರತಿಲಕಾಃ ಕುರ್ವಂತು ನೋ ಮಂಗಲಮ್ ॥

ವೈದೇವಾ ಬಲದೇವಬೇಟಿತೆರಟಿಚೇಹುಲ್ಲುಂಡಿಸಂಜ್ಞಾಃ ಪರೇ
ಖಂಡೇಕಾರಕಕುಂಟಿಮುದ್ದಿವಿದಿತಾಃ ಸರ್ವೇ ವಸಿಷ್ಠಾನ್ವಯಾಃ ।
ಶ್ರೀಮದ್ಭಾರತಗೋತ್ರಜಾಸ್ತ್ವ ಯರನೀವಿಪ್ರೋತ್ತಮಾಂಗಾಭಿಧಾಃ
ಸೌಜನ್ಯಪ್ರಿಯತಾಘಸತ್ವಕಲಿತಾಃ ಕುರ್ವಂತು ನೋ ಮಂಗಲಮ್ ॥ ೬

ಗುತ್ತ್ಯಾಖ್ಯಾಸ್ಸುಗುಣೋಜ್ವಲಾ ಬಡಕಿಣಾ ಹ್ಯಾಗಸ್ತ್ಯಗೋತ್ರೋದ್ಭವಾಃ
ಹಾರೀತಾನ್ವಯಜಾಶ್ಚ ಗಂಗರಸಕಾ ಆರಾಧ್ಯಚಂಡೂರುಜಾಃ ।
ಡೋಮಂತೀಘನಕೊಂಡಲೂರುಬೆನಕನ್ಹಲ್ಲೀತರಿಂ[illegible]ಕಾಃ
ಕೌಂಡಿಣ್ಯಾ ವಡಧಾಳಿಕಾಶ್ಚ ಬಹವಃ ಕುರ್ವಂತು ನೋ ಮಂಗಲಮ್ ॥ ೭

ಭಾಸ್ವಂತೋ ನಯನಾರಂಗಃ ಸಮರಸಾಃ ಶಾಂಡಿಲ್ಯಗೋತ್ರೋದ್ಭವಾಃ
ಶ್ರೀಮನ್ನಾಕರಸಾಶ್ಚ ಬೊಮ್ಮರಸಕಾಃ ಶ್ರೀಕೌಶಿಕೀಯಾನ್ವಯಾಃ ।
ಧೀರಾಃ ಕೊಮ್ಮರಸಾಃ ಘನಾಂತರಸಿಕಾಃ ಪ್ರಖ್ಯಾತಕೀರ್ತ್ಯುಜ್ವಲಾಃ
ಸರ್ವೇ ಸದ್ಗುಣಶಾಲಿನೋ ಸಮಧಿಯಃ ಕುರ್ವಂತು ನೋ ಮಂಗಲಮ್ ೮

ಶ್ರೀವತ್ಸಾನ್ವಯಸಂಭವಾಶ್ಚ ದವಸಾ ದೀಪಾ ಮಲೇಖೇಟಕಾಃ
ಕೀರ್ತ್ಯಾದ್ಯಾಸಿತಕೆಲ್ಲವಾಡಿವಿಲಸದ್ಭಾರಾಣಸೀನಾಮಕಾಃ ।
ಶ್ರುತ್ಯಂತೋಜ್ವಲಬಾದರಾಯಣಕುಲಾಃ ಶ್ರೀಯಾವನಾಲಾಭಿಧಾಃ
ನಿತ್ಯಂ ಬುಕ್ಕರಸಾಶ್ಚ ಶಾಂತಹೃದಯಾಃ ಕುರ್ವಂತು ನೋ ಮಂಗಲಮ್ ॥

ವಿಷ್ಣೋರ್ಧ್ಯಾನಪರಾಯಣಾಃ ಶುಭತಮಾಃ ಸಂಪ್ರಾಪ್ತಸಂಪದ್ಗಣಾಃ
ಪ್ರಜ್ಞಾಶೀಲದಯಾದಿಧರ್ಮನಿಪುಣಾ ನಿತ್ಯಾನ್ನದಾನೋತ್ಸುಕಾಃ ।
ಭಾಸ್ವತ್ಕೀರ್ತಿವಿಭೂಷಣಾಃ ಶುಭಗುಣಾ ನಿತ್ಯಾರ್ಥಿಸಂತೋಷಣಾಃ
ಧೀರಾಃ ಷಾಷ್ಟಿಕವಂಶಪಾವನಕರಾಃ ಕುರ್ವಂತು ನೋ ಮಂಗಲಮ್ ॥

ಇತಿ ಶ್ರೀಮದ್ವ್ಯಾಸರಾಜವಿರಚಿತ
ಷಾಷ್ಟಿಕಮಂಗಲಾಷ್ಟಕಮ್ ಸಂಪೂರ್ಣಂ.

# ಶ್ರೀಬ್ರಹ್ಮಣ್ಯತೀರ್ಥಗುರುರಾಜ
# ಪಂಚರತ್ನಮಾಲಿಕಾ ಸ್ತೋತ್ರಮ್

ವಂದೇ ಬ್ರಹ್ಮಣ್ಯತೀರ್ಥ ಶುಭತಮಚರಿತಂ ಸೇವಿತಂ ಶ್ರೀಸಮೇತಮ್
ಶಾಂತಂ ದಾಂತಂ ಮಹಾಂತಂ ಗುರುಗುಣಭರಿತಂ ಯೋಗಿಸಂಘೈರುಪೇತಮ್ ।
ಕಾಮಕ್ರೋಧಾದ್ಯತೀತಂ ಕುಮತಿಭಿರ ಜಿತಂ ಕಲ್ಮಷಾಂಬೋಧಿಪೋತಮ್
ಧೀರಂ ಭೂದೇವಗೀತಂ ಶುಭಜನಮಹಿತಂ ಧನ್ಯಮಾನ್ಯಂ ವಿನೀತಮ್ ॥

ಮಾಧ್ವಸ್ವಾಮಿಗಜೇಂದ್ರ ಪಂಚವದನಃ ಪ್ರಖ್ಯಾತಕೀರ್ತಿರ್ಮಹಾನ್
ಶ್ರೀಮದ್ವಿಟ್ಠಲಪಾದಪದ್ಮಮಧುಪಃ ಸರ್ವೇಷ್ಟಚಿಂತಾಮಣಿಃ ।
ಸರ್ವಾಬ್ಜೋರುದಯಾಕಟಾಕ್ಷಲಸಿತೋ ಜ್ಞಾನಾದಿಭಾಗ್ಯೋಜ್ಜ್ವಲಃ
ಶ್ರೀಬ್ರಹ್ಮಣ್ಯಯತೀಂದ್ರಮಸ್ತಕಮಣಿಃ ಪಾಯಾದಪಾಯಾತ್ಸ ಮಾಮ್ ॥

ಚಿತ್ರತ್ಕಾಷಾಯಚೇಲಂ ವಿಲಸಿತತುಲಸೀಪಂಕಜಾಕ್ಷಾದಿಮಾಲಮ್
ಧೂತಾಜ್ಞಾನಾಘಜಾಲಂ ಮೃದುವಚನಕಲಂ ಚಾರುಸೌಂದರ್ಯಶೀಲಮ್ ।
ಆರ್ತತ್ರಾಣೈಕಲೋಲಂ ಪ್ರಣತಮುನಿಕುಲಂ ಕೃಷ್ಣವಾಗ್ರ್ಯಾನುಕೂಲಮ್
ಬ್ರಹ್ಮಣ್ಯಾರ್ಯಂ ದಯಾಲುಂ ಸ್ಮಿತಮುಖಕಮಲಂ ಸಾದರಂ ತಂ ಭಜೇಽಲಮ್ ।

ಯದ್ವೃಂದಾವನದರ್ಶನೇನ ನಿತರಾಂ ಪಾಪಾನಿ ಯಾಂತಿ ಕ್ಷಯಮ್
ಯದ್ವೃಂದಾವನ ಮೃತ್ತಿಕಾ ಸುವಿಧೃತಾ ತಾಪತ್ರಯಧ್ವಂಸಿನೀ ।
ಯದ್ವೃಂದಾವನಸೇವಯಾ ಭುವಿ ಜನಃ ಪ್ರಾಪ್ನೋತಿ ವಿದ್ಯಾಂ ಸುಖಮ್
ಸರ್ವಾರಿಷ್ಟನಿವೃತ್ತಯೇಽಸ್ತು ಸ ಚ ಮೇ ಬ್ರಹ್ಮಣ್ಯತೀರ್ಥೋ ಗುರುಃ ॥

ಕುಷ್ಠಶ್ವೇತೋರುಗುಲ್ಮ ಕ್ಷಯಕರಿನತರ ವ್ಯಾಧಿವೃದ್ಯಾಧಿನಾಶೋ ।
ಭೂತಪ್ರೇತಗ್ರಹೋಚ್ಚಾಟನಕುಶಲಮಹಾಮಂತ್ರ ಮೂರ್ತಿರ್ಮುನೀಂದ್ರಃ
ಸರ್ವಾಭೀಷ್ಟಪ್ರದಾತಾ ಸರಸಸುಹೃದಯಃ ಪುಣ್ಯಚಾರಿತ್ರನಾಮಾ ।
ಜೀಯಾದ್ಬ್ರಹ್ಮಣ್ಯತೀರ್ಥೋ ಗುರುಕುಲತಿಲಕೋ ಭೂಯಸೇ ಶ್ರೇಯಸೇ ಮೇ ॥

ಇತಿ ಶ್ರೀಬ್ರಹ್ಮಣ್ಯತೀರ್ಥಗುರುರಾಜ ಪಂಚರತ್ನಮಾಲಿಕಾ ಸ್ತೋತ್ರಮ್

॥ ಶ್ರೀಕೃಷ್ಣಾರ್ಪಣಮಸ್ತು ॥

# ಅನುಕ್ರಮಣಿಕೆ

## ಶ್ರೀಲಕ್ಷ್ಮೀವೆಂಕಟೇಶ ದೇವರು



ಕಲ್ಯಾಣಾದ್ಭುತಗಾತ್ರಾಯ ಕಾಮಿತಾರ್ಥಪ್ರದಾಯಿನೇ ।
ಶ್ರೀಮದ್ವೇಂಕಟನಾಥಾಯ ಶ್ರೀನಿವಾಸಾಯ ತೇ ನಮಃ ॥



ಶ್ರೀಬದರೀಕಾಶ್ರಮ—ಶ್ರೀವೇದವ್ಯಾಸ ದೇವರು—ಶ್ರೀಮಧ್ವಾಚಾರ್ಯರು

## ಶ್ರೀ ಜಯತೀರ್ಥರ ವೃಂದಾವನ
(ಮಳಖೇಡ)



**ಚಿತ್ರೈಃ ಪದೈಶ್ಚ ಗಂಭೀರೈರ್ವಾಕ್ಯೈರ್ಮಾನೈರಖಂಡಿತೈಃ ।**
**ಗುರುಭಾವಂ ವ್ಯಂಜಯಂತೀ ಭಾತಿ ಶ್ರೀಜಯತೀರ್ಥವಾಕ್ ॥**

## ಶ್ರೀ ಬ್ರಹ್ಮಣ್ಯತೀರ್ಥರ ವೃಂದಾವನ
(ಅಬ್ಬೂರು–ಚನ್ನಪಟ್ಟಣ)



**ಕಂಸಧ್ವಂಸಿಪದಾಂಭೋಜಸಂಸಕ್ತೋ ಹಂಸಪುಂಗವಃ ।**
**ಬ್ರಹ್ಮಣ್ಯಗುರುರಾಜಾಖ್ಯೋ ವರ್ತತಾಂ ಮಮ ಮಾನಸೇ ॥**

## ಶ್ರೀಪಾದರಾಜರ ವೃಂದಾವನ
(ಮುಳಬಾಗಲು)



ಯದ್ವೃಂದಾವನ ಸೇವಯಾ ಸುವಿಮಲಾಂ ವಿದ್ಯಾಂ ಪಶುಂ ಸಂತತಿಮ್।
ಧ್ಯಾನಂ ಜ್ಞಾನಮನಲ್ಪಕೀರ್ತಿನಿವಹಂ ಪ್ರಾಪ್ನೋತಿ ಶೀಘ್ರಂ ಜನಃ ।
ತಂ ವಂದೇ ನರಸಿಂಹತೀರ್ಥನಿಲಯಂ ಶ್ರೀವ್ಯಾಸರಾಟ್ ಪೂಜಿತಮ್ ।
ಧ್ಯಾಯಂತಂ ಮನಸಾ ನೃಸಿಂಹಚರಣಂ ಶ್ರೀಪಾದರಾಜಂ ಗುರುಮ್ ॥

## ಶ್ರೀ ವ್ಯಾಸರಾಜರ ವೃಂದಾವನ
(ನವವೃಂದಾವನ)



ಅರ್ಥಿಕಲ್ಪಿತಕಲ್ಪೋಽಯಂ ಪ್ರತ್ಯರ್ಥಿಗಜಕೇಸರೀ ।
ವ್ಯಾಸತೀರ್ಥಗುರುರ್ಭೂಯಾದಸ್ಮದಿಷ್ಟಾರ್ಥಸಿದ್ಧಯೇ ॥

## ಶ್ರೀ ವಿಜಯೀಂದ್ರರ ವೃಂದಾವನ
(ಕುಂಭಕೋಣ)



ಭಕ್ತಾನಾಂ ಮಾನಸಾಂಭೋಜಭಾನವೇ ಕಾಮಧೇನವೇ ।
ನಮತಾಂ ಕಲ್ಪತರವೇ ಜಯೀಂದ್ರಗುರವೇ ನಮಃ ॥

## ಶ್ರೀ ರಾಘವೇಂದ್ರಗುರುಸಾರ್ವಭೌಮರು



ರಾಮನರಹರಿ ಕೃಷ್ಣ ಕೃಷ್ಣರ । ನೇಮದಿಂದೀ ಮೂರ್ತಿಗಳ ಪದ ।
ತಾಮರಸ ಭಜನೆಯನು ಮಾಳ್ಪರು । ಕೋಮಲಾಂಗರು ಕರಿಣಪರವಾದಿ ।
ಸ್ತೋಮಗಳ ಮಹಮಸ್ತಕಾದ್ರಿಗೆ । ಭೂಮಿಯೊಳು ಪವಿಯೆನಿಸಿದಾ ಯತಿ ।
ಯಾವಯಾಮಕೆ ಎಲ್ಲರಿಗೆ ಶುಭ । ಕಾಮಿತಾರ್ಥವ ಕೊಡುವ ಗುರುಗಳ ।
ನೋಡಿದೇ ಗುರುಗಳ ನೋಡಿದೇ ॥ (ಶ್ರೀವಿಜಯದಾಸರು)

|| ಶ್ರೀವ್ಯಾಸರಾಜೋ ವಿಜಯತೇ ||

# ಷಾಷ್ಟಿಕವಂಶಪ್ರದೀಪ

## ಗ್ರಂಥದ ಉದ್ದೇಶ

ಕರ್ನಾಟಕ ಸಾಮ್ರಾಜ್ಯದ ಏಳಿಗೆಗೆ ಮುಖ್ಯಕಾರಣರಾಗಿ, ಭಾರತವರ್ಷದ ಇತಿಹಾಸದಲ್ಲಿ ಭವ್ಯವಾದ ಸ್ಥಾನಗಳನ್ನು ಗಳಿಸಿದ ಕದಂಬ, ಚಾಲುಕ್ಯ, ಗಂಗ, ಹೊಯ್ಸಳ, ವಿಜಯನಗರ ಮತ್ತು ಬಹಮನಿ ಚಕ್ರಾಧಿಪತ್ಯಗಳಲ್ಲಿ ಉನ್ನತಾಧಿಕಾರ ಪದವಿಗಳನ್ನಲಂಕರಿಸಿ, ತಾತ್ತ್ವಿಕ, ಧಾರ್ಮಿಕ, ನೈತಿಕ ಮತ್ತು ಭೌತಿಕ ಕ್ಷೇತ್ರಗಳಲ್ಲಿ ಸತತ ಶ್ರಮಿಸಿ ಧವಳ ಕೀರ್ತಿಭಾಜನರಾದ ಷಾಷ್ಟಿಕ ಮಹಾಪುರುಷರ ಜೀವನ ಚರಿತ್ರೆಯ ಸೂಕ್ಷ್ಮ ಪರಿಚಯವನ್ನು, ನಮ್ಮ ಕುಲಬಾಂಧವರಿಗೆ, ಮಾಡಿಕೊಡುವುದೇ ಈ ಗ್ರಂಥದ ಮುಖ್ಯೋದ್ದೇಶ.

ಈ ಮಹಾಪುರುಷರ ಉನ್ನತಿಯ ಕಾಲವನ್ನು ಎರಡು ಭಾಗಗಳಾಗಿ ವಿಂಗಡಿಸಬಹುದು.

1) ಶ್ರೀಮನ್ಮಧ್ವಾಚಾರ್ಯರ ಅವತಾರಕ್ಕೆ ಹಿಂದಿನ ಕಾಲ.

2) ಶ್ರೀಮನ್ಮಧ್ವಾಚಾರ್ಯರ ಕಾಲ ಮತ್ತು ಅಲ್ಲಿಂದೀಚಿನ ಕಾಲ.

## ಷಾಷ್ಟಿಕ ಎಂಬ ಹೆಸರಿನ ಹಿನ್ನೆಲೆ

ಷಾಷ್ಟಿಕ ಎಂಬ ಪದವು ಸಂಖ್ಯಾಗುಣವಾಚಿಯಾಗಿ "ಅರವತ್ತು" ಎಂಬ ಅರ್ಥವನ್ನು ಹೊಂದಿರುವುದು. ಅರವತ್ತೊಕ್ಕಲು ಬ್ರಾಹ್ಮಣರಲ್ಲಿ ಮೂಲತಃ ಅರವತ್ತೇ ಮನೆತನಗಳ ಹೆಸರುಗಳೂ, ಹದಿನಾಲ್ಕೇ ಗೋತ್ರಗಳೂ ಇವೆ. ಅರವತ್ತೇ ಮನೆತನಗಳು, ಇವರ ಪಂಗಡದಲ್ಲಿರುವ ಪ್ರಯುಕ್ತ ಇವರಿಗೆ ಅರವತ್ತೊಕ್ಕಲ ಬ್ರಾಹ್ಮಣರು ಎಂಬ ಹೆಸರು ಬಂದಿದೆ. ಗೀರ್ವಾಣ ಭಾಷೆಯಲ್ಲಿ ಇವರನ್ನು "ಷಾಷ್ಟಿಕ"ರೆಂದು ಸಂಬೋಧಿಸುತ್ತಾರೆ.

ಭಗವದ್ಭಕ್ತರೂ, ಪಂಡಿತೋತ್ತಮರೂ, ಮಂತ್ರಿಪದವೀಧರರೂ, ದಂಡನಾಯಕರೂ, ಆಗಿದ್ದ 64 (ಅರವತ್ತುನಾಲ್ಕು) ಜನ ದ್ವಿಜಶ್ರೇಷ್ಠರಿದ್ದರು. ಅವರು ಯಾವಾಗಲೂ ರಾಜನಿಗೆ ಹಿತವನ್ನೇ ಬಯಸುತ್ತ ಆವನ ನೆಳಲಿನಂತೆ ವರ್ತಿಸುತಲಿದ್ದರು. ಅವರಲ್ಲಿ ಮೂರು ಮಂದಿ ಶೂರರು ಶತ್ರುಗಳೊಡನೆ ಕಾದಾಡಿ ಮಡಿದರು. ಉಳಿದವರು ತಮ್ಮ ಅಧಿಕಾರಗಳನ್ನು ದಕ್ಷತೆಯಿಂದ ಸಾಗಿಸಿಕೊಂಡು ರಾಜನ ಪ್ರೀತ್ಯಾದರಗಳಿಗೆ ಪಾತ್ರರಾಗಿದ್ದರು. ಹೀಗಿರುವಲ್ಲಿ ಕೆಲಕಾಲಾನಂತರ ತ್ರಿಣೇತ್ರಕದಂಬನು ಕಾಲವಾದನು. ತರುವಾಯ ಆವನ ಮಗ ಮಯೂರವರ್ಮನಿಗೆ ಪಟ್ಟವಾಯಿತು. ಕದಂಬರಾಜ್ಯದಲ್ಲಿ ಮಯೂರವರ್ಮನು ವೀರಾಗ್ರಣಿ. ಅವನಿಗೆ ಅನೇಕ ಸಾಮಂತ ರಾಜರಿದ್ದರು. ಹೀಗಿರಲಾಗಿ ಮಯೂರವರ್ಮನು ಒಂದು ದಿನ ಪುರಪ್ರಮುಖರಿಂದಲೂ, ಪರಿಜನರಿಂದಲೂ, ಮಿಳಿತವಾದ ಒಂದು ಸಭೆಯನ್ನು ಸೇರಿಸಿ ಆ ಸಭಿಕರಿಗೆ ಈ ರೀತಿ ಹೇಳಿದನು : "ನಾನು ಯಾವವ ಕುಲಪಯೋಬ್ಧಿಚಂದ್ರಮನಾದ ಶ್ರೀಕೃಷ್ಣ ಪರಮಾತ್ಮನ ಹಾಗೂ ಭರತಾನ್ವಯ ಕುಲದೀಪಕನಾದ ಯುಧಿಷ್ಠಿರದೇವನ ವಂಶ ಸಂಭೂತನೆಂಬುವುದು ತಮ್ಮೆಲ್ಲರಿಗೂ ವಿದಿತವಾಗಿದೆ. ಅವರಂತೆಯೇ ನಾನೂ ಅಶ್ವಮೇಧ ಯಾಗವನ್ನು ಮಾಡಿ ಕೀರ್ತಿ ಸಂಪಾದಿಸಬೇಕೆಂಬ ಹೆಬ್ಬಯಿಕೆ ನನ್ನ ಮನಸ್ಸಿನಲ್ಲಿ ಮೂಡಿದೆ. ಈ ನನ್ನ ಆಶೆಯನ್ನು ಕಾರ್ಯರೂಪಕ್ಕೆ ತರಲು ತಾವೆಲ್ಲರೂ ನನಗೆ ಸಹಾಯ ಮಾಡಿ ನನ್ನನ್ನು ಕೃತಕಾರ್ಯನನ್ನಾಗಿ ಮಾಡಬೇಕು." ಚಕ್ರವರ್ತಿಯ ಈ ಹೇಳಿಕೆಯನ್ನು ಸಭಿಕರೆಲ್ಲರೂ ಅನುಮೋದಿಸಿದರಾದರೂ ಮೇಲೆ ಹೇಳಿದ 61 ಮಂದಿ ಬ್ರಾಹ್ಮಣರು ಏಕವಾಕ್ಯತೆಯಿಂದ ತಮ್ಮ ಭಿನ್ನಾಭಿಪ್ರಾಯವನ್ನು ಚಕ್ರವರ್ತಿಯ ಮುಂದಿಟ್ಟರು. ಹೇಗೆಂದರೆ : "ಕಲಿಯುಗದಲ್ಲಿ ಪ್ರಾಣಿವಧೆಯನ್ನು ಶಾಸ್ತ್ರಕಾರರು ನಿಷೇಧಿಸಿದ್ದಾರೆ. ಈ ಕಾರಣದಿಂದ ಪ್ರತ್ಯಕ್ಷಪಶುವಧೆ ಮಾಡುವುದು ಶ್ರೇಯಸ್ಕರವಲ್ಲ. ಆದರೆ ಪಿಷ್ಟಪಶುವನ್ನು ಮಾಡಿ ಯಾಗ ಮಾಡುವುದಾದರೆ ಮಾತ್ರ ನಾವು ಅದರಲ್ಲಿ ಭಾಗವಹಿಸುತ್ತೇವೆ." ಇವರ ಈ ಅಭಿಪ್ರಾಯವು ಸಾರ್ವಭೌಮನಿಗೆ ಸರಿತೋರಲಿಲ್ಲ. ಇದನ್ನರಿತ ಆ ಬ್ರಾಹ್ಮಣರು ರಾಜನ ಸಭೆಯನ್ನು ಪರಿತ್ಯಾಗ ಮಾಡಿ ಸಂಸಾರ ಸಮೇತರಾಗಿ ಚಾಲುಕ್ಯರ ರಾಜಧಾನಿಯಾಗಿದ್ದ ದೇವಗಿರಿಗ ಹೊರಟು ಹೋದರು. ಮಯೂರವರ್ಮನು ಇದರಿಂದ ಧೈರ್ಯಗೆಡದೆ

ಉತ್ತರ ಹಿಂದೂಸ್ಥಾನದ ಅಹಿಚ್ಛತ್ರ (ಈಗಿನ ಪಂಜಾಬ್) ದಿಂದ ಬ್ರಾಹ್ಮಣರನ್ನು ಕರೆಯಿಸಿ ಯಾಗವನ್ನು ಪೂರ್ತಿ ಮಾಡಿದನು.

ಆ ಸಮಯದಲ್ಲಿ ಆಗಿ ಹೋದ ಪ್ರಾಣಿವಧೆಯು ಚಕ್ರವರ್ತಿಯ ಮನಸ್ಸನ್ನು ವಿಷಾದ ಮಡುವಿನಲ್ಲಿ ಮುಳುಗಿಸಿತು. ಆ ಪ್ರಯುಕ್ತ ಅವನು ಚಿಂತಾಮಗ್ನನಾದನು ; ಅಲ್ಲದೆ ಜೈನಧರ್ಮವನ್ನವಲಂಬಿಸಿದನು. ಆಗ ಅವನಿಗೆ ತಮ್ಮ ಹಿರಿಯರ ಕಾಲದಿಂದಲೂ ಹಿತವನ್ನೇ ಕೋರುತ್ತ, ರಾಜ್ಯದ ಏಳಿಗೆಗೆ ವಿವಿಧ ಮಾರ್ಗಗಳಲ್ಲಿ ಸೇವೆಯನ್ನು ಸಲ್ಲಿಸಿದ್ದ 61 ಮಂದಿ ಬ್ರಾಹ್ಮಣರ ಹಿತೋಪದೇಶವು ನೆನಪಿಗೆ ಬಂದಿತು. ಅವನು ಆಗ ಅವರಿಗೆ "ಆಗಿಹೋದ ವಿಷಾದಾಂತ ಕಾರ್ಯಕ್ಕಾಗಿ ನಾನು ವ್ಯಥೆ ಪಡುತ್ತೇನೆ. ನೀವು ಪುನಃ ನಮ್ಮ ರಾಜಧಾನಿಗೆ ಹಿಂತಿರುಗಿ ನಿಮ್ಮ ಕುಲಕ್ರಮಾಗತವಾದ ಅಧಿಕಾರಗಳನ್ನು ವಹಿಸಿಕೊಳ್ಳುವುದು" ಎಂಬುದಾಗಿ ಪತ್ರ ಬರೆದನು. ಅದಕ್ಕೆ ಅವರು "ನಮಗೆ ಇಲ್ಲಿ ಗಣ್ಯಾಧಿಕಾರಗಳು ದೊರೆತಿವೆ. ಇಲ್ಲಿದ್ದುಕೊಂಡೇ ನಾವು ನಿಮ್ಮ ಹಿತವನ್ನು ಕೋರುತ್ತೇವೆ. ನೀವು ಸುಖದಿಂದ ರಾಜ್ಯಭಾರ ಮಾಡಿಕೊಂಡು ಬರುವುದು. ಇದೇ ನಮ್ಮ ಆಶೀರ್ವಾದ" ಎಂದು ಉತ್ತರ ಬರೆದು ಕಳುಹಿಸಿದರು. ಈ 61 ಮನೆಗಳಲ್ಲಿ ಒಂದಾದ "ಭಾರತ" ಮನೆತನಕ್ಕೆ ಕಾಲಕ್ರಮದಲ್ಲಿ ಸಂತತಿ ನಷ್ಟವಾದುದರಿಂದ ಉಳಿದ 60 ಸಂಸಾರದವರಿಗೆ ಷಾಷ್ಟಿಕರು (ಅರವತ್ತೊಕ್ಕಲು) ಎಂಬ ಹೆಸರು ಬಂದಿತು.

## ಕರ್ಣಪಾರ್ಯ

"ಕದಂಬರಾಜವಿಜಯ"ವನ್ನು ರಚಿಸಿದ ಕರ್ಣಪಾರ್ಯನು ಕ್ರಿ. ಶ. 1140ನೆಯ ಸಂವತ್ಸರದಲ್ಲಿದ್ದನು. ಈತನು ಮೊದಲು ವೈದಿಕ ಧರ್ಮಾವಲಂಬಿಯಾಗಿದ್ದು ಅನಂತರ ಜೈನಧರ್ಮವನ್ನು ಕೈಗೊಂಡನು. ಈ ಕವಿಯ ವಿಷಯವಾಗಿ "ಜೀಮೂತವಾಹನ, ವಿದ್ಯಾಧರ ಚಕ್ರವರ್ತಿತಿಲಕ ಶ್ರೀಭೂಷಣ, ವಿಜಯಾದಿತ್ಯ, ಲಕ್ಷ್ಮೀಧರ ಬರ್ಹಿವರ್ಮ ಯಶಃಕಾಯ ಪೊಂಬೆಟ್ಟಮನ್ನೇದರ್ಮ ಕದಂಬ ರಾಜ ವಿಜಯಾದಿತ್ಯವಂ ಕಂಡುದಾಯ್ತು" ಎಂದು ಹೇಳಿರುವುದರಿಂದ ಜೀಮೂತವಾಹನಾದಿಯಾಗಿ ಮಯೂರವರ್ಮ ಕದಂಬ ಚಕ್ರವರ್ತಿವರೆಗಿನ ಇತಿಹಾಸವನ್ನೊಳಗೊಂಡ "ಕದಂಬರಾಜವಿಜಯ"ವೆನ್ನುವ ಗ್ರಂಥವನ್ನು

ಈ ಕವಿಯು ರಚಿಸಿರುವನೆಂದು ಗೊತ್ತಾಗುವುದು. ಈ ಕವಿಯು ಮಾಳವೀ ಮಾಧವ, ವೀರೇಶ ಚರಿತೆ ಮುಂತಾದ ಬೇರೆ ಗ್ರಂಥಗಳನ್ನೂ ರಚಿಸಿರುವುದಾಗಿ ತಿಳಿದು ಬರುವುದು ಇವನು ಜೈನ ಮತಾವಲಂಬಿಯಾಗಿದ್ದರೂ ಬ್ರಾಹ್ಮಣ ರಲ್ಲಿ ಭಕ್ತಿಯನ್ನಿಟ್ಟಿದ್ದನೆಂದು ಇವನ ಗ್ರಂಥಾವಲೋಕನದಿಂದ ಕಂಡುಬರುತ್ತದೆ ಕರ್ಣಪಾರ್ಯನು ಷಾಷ್ಟಿಕರಲ್ಲಿ ಆದ್ಯ ಅಥವಾ ಆರಾಧ್ಯ ಮನೆತನಕ್ಕೆ ಸೇರಿದ ನಾಗಚಂದ್ರನನ್ನು" ಅದ್ಯತನಾಗಿ ಯುಂನೆಗಳ್ದಾದ್ಯರ ದೊರೆ ಎನಿಸಿ ಮೆರೆದು ಸಾಹಿತ್ಯಕಲಾಹೃದ್ಯತೆಯಿಂನಗಳ್ದನಾಸಿರವದ್ಯ ಗುಣಸಂದ ನಾಗಚಂದ್ರ ಕವೀಂದ್ರ" ಎಂದು ಹೊಗಳಿದ್ದಾನೆ ಇದರಿಂದ "ಷಾಷ್ಟಿಕರು ೧೨ ನೆಯ ಶತಮಾನದ ಆದಿ ಭಾಗದಲ್ಲಿಯೇ ಪ್ರಬಲರಾಗಿದ್ದರೆಂದು ಗೊತ್ತಾಗುವುದು. (ಶಿವಮೊಗ್ಗ ಜಿಲ್ಲೆಯ ಷಿಕಾರಿಪುರದ ತಾಲ್ಲೂಕು ತಾಳಗುಂದ ಗ್ರಾಮದ 186ನೇ ನಂಬರು ಶಾಸನವನ್ನು ನೋಡಿ).

ಸೋಮಭಟ್ಟನ ಮಗ ರುದ್ರಭಟ್ಟ ಇವನ ಮಗ ಗಂಗಭಟ್ಟ ಈತನಿಗೆ ಭಾಸ್ಕರಭಟ್ಟನೆಂಬ ಪುತ್ರನಿದ್ದನು. ಭಾಸ್ಕರಭಟ್ಟನು ದೇವಗಿರಿ ಯಾದವರ ದಂಡನಾಯಕರಲ್ಲೊಬ್ಬನು. ಮುಸಲ್ಮಾನರು ದೇವಗಿರಿಯನ್ನು ಮುತ್ತಿದ ಕಾಲದಲ್ಲಿ ಭಾಸ್ಕರಭಟ್ಟನು ವೀರಾವೇಶದಿಂದ ಶತ್ರುಗಳೊಡನೆ ಕಾದಾಡಿ ವೀರ ಸ್ವರ್ಗವನ್ನು ಹೊಂದಿದನು. ಆಗ ಅವನ ಅರ್ಧಾಂಗಿಯು ಅಂತರ್ವತ್ನಿಯಾ ಗಿದ್ದಳು. ಆಕೆಯ ಗರ್ಭಸುಧಾಂಬುಧಿಯಲ್ಲಿ ಸುರಾಚಾರ್ಯರಂತೆ ಜ್ಯೋತಿ ಶ್ಯಾಸ್ತ್ರದಲ್ಲಿ ಪಾರದರ್ಶಿಯಾದ ಗಂಗಾಧರಭಟ್ಟನು ಜನಿಸಿದನು. ಈತನಿಗೆ ಈರ್ವರು ಗಂಡು ಮಕ್ಕಳು. ಭಟ್ಟೋತ್ಪಲ, ಭಾಸ್ಕರಭಟ್ಟ. ಗಂಗಭಟ್ಟನು ಪರೀಕ್ಷಿತ ರಾಜನು ಹೇಗೋ ಹಾಗೆ ತನ್ನ ತಾಯಿಯ ಮೂಲಕ, ತನ್ನ ಹಿರಿ ಯರು ಯಾವ ರೀತಿ ದೇಶೋನ್ನತಿಯ ಕಾರ್ಯಕಲಾಪಗಳಲ್ಲಿ ತಮ್ಮ ಜೀವ ಮಾನವನ್ನು ಸವೆಸಿ ಪ್ರಖ್ಯಾತರಾಗಿದ್ದರೆಂಬುದನ್ನು ಕೇಳಿ ತಿಳಿದುಕೊಂಡಿದ್ದನು. ಆಕೆಯು ತನ್ನ ವಂಶೀಯರ ಸಮೀಚೀನವಾದ ನಡೆನುಡಿಗಳನ್ನೂ, ಪಾಂಡಿತ್ಯ ವನ್ನೂ, ದೃಢಕರವಾದ ಹರಭಕ್ತಿಯನ್ನೂ ಮಗನಿಗೆ ಮನಮುಟ್ಟುವಂತೆ ಬೋಧಿಸಿದ್ದಳು. ಮಾತೆಯ ಈ ಉಪದೇಶ ವಾಕ್ಯಗಳು ಗಂಗಭಟ್ಟನಿಗೆ ಮಾರ್ಗದರ್ಶಕವಾಯಿತಲ್ಲದೆ ತಾನೂ, ತನ್ನ ಹಿರಿಯರು ಹೇಗೋ ಹಾಗೆ ಒದುಕಿ

ಬಾಳಬೇಕೆಂಬುವ ಬಯಕೆಯ ಬೀಜವೂ ಅವನ ಹೃದಯಾಂತರಾಳದಲ್ಲಿ ನೆಲಸಿ, ಅಂಕುರವಾಗಿ ಕಾಲಕ್ರಮದಲ್ಲಿ ಫಲದಾಯಕವಾಯಿತು.

## ರುದ್ರಭಟ್ಟ

ಪ್ರಸಕ್ತ 60 ಮನೆಗಳ ಪೈಕಿ ಹರಿತ್ಸಗೋತ್ರಕ್ಕೆ ಸೇರಿದ ಆರಾಧ್ಯ ಮನೆತನವೂ ಒಂದಾಗಿದೆ. ರುದ್ರಭಟ್ಟನು ಈ ಮನೆತನದ ಪ್ರಖ್ಯಾತವ್ಯಕ್ತಿ. ಈತನ ತಂದೆಯ ಹೆಸರು ಸೋಮಭಟ್ಟ ರುದ್ರಭಟ್ಟನು ಬಾಲ್ಯದಿಂದಲೂ ಹಟಮಾರಿ ಸ್ವಭಾವದವನಾಗಿದ್ದನು. ಈತನು ಶಿವಸರ್ವೋತ್ತಮನೆಂಬ ಏಕೈಕ ಶ್ರದ್ಧೆಯುಳ್ಳವನಾಗಿದ್ದನು. ಈತನ ಈ ನಂಬಿಕೆಯು ಬಂಧು ವರ್ಗದವರಿಗೆ ಬೇಸರವನ್ನುಂಟುಮಾಡಿತು. ಈ ಕಾರಣದಿಂದ ಅವರು ಇವನಲ್ಲಿ ಅವಿಶ್ವಾಸವನ್ನು ತೋರಿಸಲು ಮೊದಲು ಮಾಡಿದರು ಸಮಾಜದಲ್ಲಿ ಮನ್ನಣೆಯು ದೊರೆಯದೆ ಹೋದುದಕ್ಕಾಗಿ ಈತನು ವ್ಯಥಿತಾಂತಃಕರಣನಾಗಿ ಕಾಶೀಯಾತ್ರೆಗೆ ಹೊರಡಲು ನಿರ್ಧರಿಸಿದನು. ಕಾಶೀಕ್ಷೇತ್ರಕ್ಕೆ ಪ್ರಯಾಣ ಮಾಡುತ್ತಿರುವಾಗ ಮಾರ್ಗಮಧ್ಯದಲ್ಲಿ ಪಂಡರಾಪುರಕ್ಕೆ ಬಂದನು. ಆದರೆ ದೇವಾಲಯಕ್ಕೆ ಹೋಗಿ ಪಾಂಡುರಂಗಸ್ವಾಮಿಯ ದರ್ಶನವನ್ನು ತೆಗೆದುಕೊಳ್ಳಲು ಈತನು ಒಡಂಬಡಲಿಲ್ಲ. ಆ ದಿನ ರಾತ್ರಿ ರುದ್ರಭಟ್ಟನ ಬಿಡಾರಕ್ಕೆ ಒಬ್ಬ ಮಹಾಪುರುಷನು ಬಂದು ಆತನಿಗೆ ದರ್ಶನ ಕೊಟ್ಟು ಅಲ್ಲಿ ನಿಲ್ಲದೆ ಹೊರಟು ಹೋದನು ಆ ಮಾರನೆಯ ದಿವಸ ರುದ್ರಭಟ್ಟನು ನಿದ್ರೆಯಿಂದೆಚ್ಚೆತ್ತು ನೋಡಲಾಗಿ ತಾನು ಶ್ರೀಪಾಂಡುರಂಗಸ್ವಾಮಿಯ ದೇವಾಲಯದ ಮಹಾದ್ವಾರದ ಬಳಿ ಮಲಗಿದ್ದುದೂ ತಿಳಿಯಿತು ಈ ರೀತಿ ಮೂರು ದಿನಗಳು ತಪ್ಪದೆ ನಡೆಯಲು ರುದ್ರಭಟ್ಟನು ಭೀತನಾಗಿ ಈ ವೃತ್ತಾಂತವನ್ನು ತನ್ನ ಬಿಡಾರಕ್ಕೆ ಬರುತ್ತಲಿದ್ದ ಆ ಮಹಾಪುರುಷನ ಸಂಗಡ ಪ ಸ್ತಾಪ ಮಾಡಿದನು. ಅದಕ್ಕೆ ಆ ಯೋಗೀಶ್ವರನು ರುದ್ರಭಟ್ಟನನ್ನು ಕುರಿತು "ಅಯ್ಯಾ ನೀನು ಪುಣ್ಯಾತ್ಮನು ; ಭಕ್ತಪರಾಧೀನನಾದ ಪಾಂಡುರಂಗನು ನಿನ್ನಲ್ಲಿ ಪೂರ್ಣಾನುಗ್ರಹ ಮಾಡಿದ್ದಾನೆ. ನೀನು ದಯಾಮಯನಾದ ಶ್ರೀಕೃಷ್ಣಪರಮಾತ್ಮನನ್ನು ಆರಾಧಿಸಿ ಪುನೀತನಾಗು" ಎಂದು ಹೇಳಿದನು. ರುದ್ರಭಟ್ಟನು ಆ ಮಹಾಪುರುಷನ ಉಪದೇಶ ವಾಕ್ಯಗಳನ್ನು ಕೈಗೊಂಡು ಅವನನ್ನು ಹೃದಯಪೂರ್ವಕ

ವಾಗಿ ಪಂಎಸಿದನು ರುದ್ರಭಟ್ಟನ ನಿರ್ಮಲವಾದ ನಡೆ ನುಡಿಗಳಿಂದ ಸಂತು ಷ್ಟನಾದ ಮಹಾತ್ಮನು ಅವನನ್ನುದ್ದೇಶಿಸಿ "ನಾನು ಈ ಪುಣ್ಯಕ್ಷೇತ್ರದಲ್ಲಿ ಬಹು ಕಾಲದಿಂದ ವಾಸವಾಗಿದ್ದೇನೆ. ನನ್ನ ಹೆಸರು ನಾರಾಯಣಭೂತ. ನೀನು ಶ್ರೀಪಾಂಡುರಂಗಸ್ವಾಮಿಯನ್ನು ಸೇವಿಸು. ಇದರಿಂದ ನಿನಗೆ ಮಂಗಳ ವಾಗುವುದು ನಾನು ನಿನಗೆ ಬೇಕಾದ ಎಲ್ಲ ಸಹಾಯಗಳನ್ನು ನೀಡುತ್ತೇನೆ" ಎಂದು ವಚನಕೊಟ್ಟು ಅಲ್ಲಿ ನಿಲ್ಲದೆ ಹೊರಟುಹೋದನು. ಅನಂತರ ರುದ್ರಭಟ್ಟನು ಪತ್ನಿ ಮತ್ತು ಪರಿವಾರ ಸಮೇತನಾಗಿ ಫಂಡರಾಪುರದಲ್ಲಿ ಒಂದು ಸಂವತ್ಸರ ಕಾಲ ವಾಸವಾಗಿದ್ದು ಶ್ರೀಪಾಂಡುರಂಗಸ್ವಾಮಿಯನ್ನು ಆರಾಧಿಸಿ ಅಲ್ಲಿಂದ ಮುಂದಕ್ಕೆ ಕಾಶೀಯಾತ್ರೆಗೆ ತೆರಳಿದನು. ಪೂರ್ವಕಾಲದಲ್ಲಿ ಪ್ರಯಾಣಿಕರಿಗೆ ಈಗಿನಂತೆ ಮಾರ್ಗ ಸೌಕರ್ಯಗಳಾಗಲಿ, ವಾಹನಗಳ ಸಹಾಯ ವಾಗಲಿ ಇರಲಿಲ್ಲ. ಆದುದರಿಂದ ಕಾಶೀಯಾತ್ರೆ ಮಾಡುವುದು ಈಗಿನಂತೆ ಸುಲಭ ಸಾಧ್ಯವಾಗಿರಲಿಲ್ಲ. ಆದರೆ ರುದ್ರಭಟ್ಟನು ಹಿಡಿದ ಕೆಲಸವನ್ನು ಬಿಡದೆ ಸಾಧಿಸತಕ್ಕ ಸ್ವಭಾವದವನಾಗಿದ್ದುದರಿಂದ ಅತ್ಯಂತ ಪ್ರಯಾಸದಿಂದ ಮಾರ್ಗ ಕ್ರಮಣ ಮಾಡಿ ಬಂಧುಬಾಂಧವಸಮೇತನಾಗಿ ಕಾಶಿಯನ್ನು ಸೇರಿ ಶ್ರೀವಿಶ್ವೇಶ್ವರ ಸ್ವಾಮಿಯನ್ನು ಆರಾಧಿಸಿದನು.

ರುದ್ರಭಟ್ಟನ ದೃಢ ನಿಶ್ಚಯ. ಭಕ್ತಿ ಮುಂತಾದ ಅನನ್ಯಸಾಧಾರಣ ಗುಣಗಳಿಗೆ ಭಕ್ತಪರಾಧೀನನಾದ ವಿಶ್ವೇಶ್ವರನು ಪ್ರಸನ್ನನಾಗಿ ದರ್ಶನವನ್ನು ದಯಪಾಲಿಸಿದನೆಂದೂ, ಅದಾದ ಬಳಿಕ ರುದ್ರಭಟ್ಟನು ಸ್ವದೇಶಕ್ಕೆ ಹಿಂತಿರು ಗಿದನೆಂದೂ ಒಬ್ಬ ಪ್ರಾಚೀನ ಕವಿಯು ಉಲ್ಲೇಖಿಸಿದ್ದಾನೆ.

## ರುದ್ರಭಟ್ಟನ ಮಂತ್ರಿತ್ವ

ವಿಷ್ಣುವರ್ಧನನ ಮೊಮ್ಮಗನಾದ ವೀರಬಲ್ಲಾಳನು ದ್ವಾರಸಮುದ್ರದಲ್ಲಿ ಕ್ರಿ. ಶ. 1173 ರಿಂದ 1220 ರವರೆಗೆ ರಾಜ್ಯಭಾರ ಮಾಡಿದನು. ಇವನಿಗೆ ಅನೇಕ ಮಂದಿ ಸಚಿವರಿದ್ದರೆಂತಲೂ, ಇವರಲ್ಲಿ ಪೂರ್ವೋಕ್ತ ಷಾಷ್ಟಿಕಮನೆ ತನದ ರುದ್ರಭಟ್ಟನೂ ಒಬ್ಬನಾಗಿದ್ದನೆಂತಲೂ ಇತಿಹಾಸ ಸಂಶೋಧನೆಯಿಂದ ಬೆಳಕಿಗೆ ಬಂದಿದೆ. ಈತನು ರಚಿಸಿದ "ಜಗನ್ನಾಥ ವಿಜಯ"ವೆಂಬ ಕಾವ್ಯದಲ್ಲಿ

ವೃ॥ ಪತಿಭಕ್ತಂ ವರಮಂತ್ರಿ ಶಕ್ತಿಯುತ ನಿಂದ್ರಂಗೆಂತು
ಭಾಸ್ವದ್ಬೃಹಸ್ಪತಿ ಮಂತ್ರೀಶ್ವರನಾದಂತೆ ವಿಲಸದ್ಬಲ್ಲಾಳ
ದೇವಾವನೀಪತಿಗೀ ವಿಶ್ರುತ ಚಂದ್ರಮೌಳಿ ಸದ್ಭಕ್ತಂ
ಮಂತ್ರಿಯಾದಂ ಸಮುನ್ನತ ತೇಜೋನಿಲಯಂ
ವಿರೋಧಿ ಸಚಿವೋನ್ಮತ್ತೇಭಪಂಚಾನನಂ ರುದ್ರಭಟ್ಟಂ

ಎಂದು ಹೇಳಿಕೊಂಡಿದ್ದಾನೆ. ಪರಶಿವನು ಈತನಿಗೆ ಸಾಕ್ಷಾತ್ಕಾರವನ್ನಿತ್ತ ವಿಚಾರವನ್ನೂ ಈತನು ತನ್ನ ಕಾವ್ಯದಲ್ಲಿ

ಕ॥ ಪುರಮಥನ ರೂಪದಿಂ ನೀ
ಮರುಳ್ಗಳನೊಡನಾಡಿದ್ದೈ ಕ।
ವಿ ರುದ್ರಾಂಕನ ಬಳಿಗೆ
ವಿರೂಪಾಕ್ಷ ನೀ ಬಂದಂ ॥

ಎಂಬುದಾಗಿ ಚಿತ್ರಿಸಿರುವನು. ಈ ಕಾವ್ಯ ಭಾಗಗಳಿಂದ ಈತನು ಹಿಂದೆ ದ್ವಾಪರ ಯುಗದಲ್ಲಿ ಕೃಷ್ಣಭಕ್ತನಾದ ಅರ್ಜುನನು ಹೇಗೋ ಹಾಗೆ ಹರಿಹರರಿಬ್ಬರ ಸಾಕ್ಷಾತ್ಕಾರವನ್ನು ಪಡೆದಿದ್ದನೆಂದು ಸ್ಪಷ್ಟಪಟ್ಟಿದೆಯಾಗಿ ಈತನ ಅಮೋಘವಾದ ಯೋಗ್ಯತೆಯನ್ನರಿಯಲು ಇದಕ್ಕಿಂತಲೂ ಬೇರೆ ನಿದರ್ಶನಗಳು ಬೇಕಾಗಿಲ್ಲ. ವೀರಬಲ್ಲಾಳರಾಯನ ಮುಖ್ಯಮಂತ್ರಿ ಚಂದ್ರಮೌಳಿಯ ಮಗಳನ್ನು ಈತನು ವಿವಾಹವಾಗಿದ್ದನು.

## ಜಗನ್ನಾಥ ವಿಜಯ

ಕನ್ನಡ ಭಾಷೆಯಲ್ಲಿ ಪುರಾಣವನ್ನು ಕಾವ್ಯ ರೂಪವಾಗಿ ರಚಿಸಿದ ಕವಿಗಳಲ್ಲಿ ರುದ್ರಭಟ್ಟನೇ ಮೊದಲಿಗನು. ಈತನು ಕರ್ಣಾಟಕಸಾಮ್ರಾಜ್ಯದ ಮಹೋನ್ನತಿಯ ಕಾಲದಲ್ಲಿದ್ದು ಜನರಿಂದ ಮಾನಿತನಾಗಿದ್ದನು. ಈತನ ಕೃತಿಯನ್ನು ವಿಮರ್ಶೆ ಮಾಡಿ ನೋಡಿದಲ್ಲಿ ಈತನು ಉಭಯ ಭಾಷಾಕವಿತಾವಿಶಾರದರನಾಗಿದ್ದನೆಂಬುವ ಅಂತ್ಯ ತೀರ್ಮಾನಕ್ಕೆ ಧಾರಾಳವಾಗಿ ಬರಬಹುದಾಗಿದೆ. ಕೆಲ ಜೈನಕವಿಗಳು ಈತನನ್ನು "ಕೃತಿಶಾರದಾಭ್ರಚಂದ್ರಾತಪರುದ್ರ" ಕಾವ್ಯಾಕಾಶದ ಚಂದ್ರನ ಬಿಸಲಿಗೆ ರುದ್ರನೋಪಾದಿಯಲ್ಲಿರುವವನು ಎಂಬುದಾಗಿ

ವರ್ಣಿಸಿದ್ದಾರೆ. ಇದು ಈತನಿಗೆ ರಾಜನಿಂದ ದೊರೆತ ಅನೇಕ ಬಿರುದಾವಳಿ ಗಳಲ್ಲಿ ಒಂದಾಗಿರಬೇಕು. ಜಗನ್ನಾಥವಿಜಯವು ಚಂಪೂಕಾವ್ಯ. ಇದನ್ನು 18 ಆಶ್ವಾಸಗಳಾಗಿ ವಿಂಗಡಿಸಿದ್ದಾನೆ ವಿಷ್ಣುಪುರಾಣದ ಕೊನೆಯ ಎರಡಾದ ಪಂಚಮ ಮತ್ತು ಷಷ್ಟಾಂಶಗಳಲ್ಲಿ ಸಂಕ್ಷಿಪ್ತವಾಗಿರುವ ಶ್ರೀಕೃಷ್ಣಪರಮಾತ್ಮನ ಚರಿತ್ರೆಯನ್ನು ಅವನ ಜನನದಿಂದ ಸಾಳ್ವವಧೆಯವರಿಗಿನ ವಿಚಾರವನ್ನು ವಿಸ್ತೃತವಾಗಿ ತಿಳಿಸುತ್ತಾ

ಕಂ॥ ಕಥೆ ವಿಷ್ಣುಪುರಾಣಂ ಸತ್ಕೃತಿ ಪೇಳ್ದಂ ಸುಕವಿರುದ್ರ
ನೀ ಕಥಾಪತಿ ಕೃಷ್ಣಂ ಕೃತಿಯಂಭೂನುತ ಜಗನ್ನಾಥವಿಜಯ
ಮೆನೆ ಮೆಚ್ಚದರಾರ್ ॥

ಎಂದು ತನ್ನ ಹೆಚ್ಚಳದ ವಿಚಾರವನ್ನು ಬರೆಯುತ್ತಾ

ವೃ॥ ವನಜಾಕ್ಷ ಖ್ಯಾತಪೂತಂ ಕಥೆ ಕವಿಕವಿರಾಜಂ ನಭಸ್ಸುಂದರೀ
ನೃತ್ಯನಿವಾಸಂ ।
ಚಂದ್ರಮೌಳಿಪ್ರಮುಖನಿಖಿಲವಿದ್ವಜ್ಜನಂ ಮೆಚ್ಚೆ ರುದ್ರಾಂ
ಕನೇ ಪೇಳ್ದಂ ।
ದೇವಚೂಡಾಮಣಿಮಣಿಮುಕುರಂ ವಿಷ್ಣು ಕೈಕೊಳ್ವನೆಂದಂ
ದನವದ್ಯಂ ರೀತಿ ಚೋದ್ಯಂ ಸಕಳವಿಬುಧಹೃದ್ಯಂ ಸುಮಂತೀ
ಪ್ರಪದ್ಯಂ ॥

ಎಂದು ಹೇಳಿರುವುದು ವಿಚಾರಾರ್ಹವಾಗಿದೆ. ಈ ಗ್ರಂಥದ ಪ್ರತಿಆಶ್ವಾಸದ ಕೊನೆಯಲ್ಲೂ ಗದ್ಯಭಾಗ ಈ ರೀತಿಯಾಗಿದೆ: "ಇದು ಸಮಸ್ತ ಕಮಲ ಭವಾಂಡಮಾಲಾಘಟಿತಾರಘಟ್ಟಘಟನಾಸ್ವತಂತ್ರ ನಿಜರೂಪಣ ಚಕಿತಸ ಕಳಾಮ್ನಾಯತಂತ್ರ ಲಕ್ಷ್ಮೀಕಾಂತಶ್ರೀಪಾದಭಕ್ತಿಯುಕ್ತ ಸುಕವೀಂದ್ರ ರುದ್ರ ಪ್ರಣೀತ ಶ್ರೀಜಗನ್ನಾಥವಿಜಯ ಮಹಾಪ್ರಬಂಧದೊಳ್." ಈ ಆಶ್ವಾಸಾಂತ್ಯಗದ್ಯದಿಂದ ರುದ್ರಭಟ್ಟನಿಗೆ ಶ್ರೀಕೃಷ್ಣಪರಮಾತ್ಮನಲ್ಲಿ ಅನನ್ಯ ಸಾಧಾರಣ ಭಕ್ತಿಭಾವಗಳಿದ್ದವೆಂದು ವ್ಯಕ್ತವಾಗುತ್ತದೆ. ಈತನು ವೀರ ಬಲ್ಲಾಳರಾಯನ ಮುಖ್ಯಮಂತ್ರಿ ಚಂದ್ರಮೌಳಿಯ ಮಗಳನ್ನು ಮದುವೆ

ಯಾಗಿದ್ದನೆಂದು ಗ್ರಂಥಾಧಾರಗಳಿಂದ ಖಚಿತವಾಗಿ ಗೊತ್ತಾಗುವುದು. ಈತನು ರಾಷ್ಟ್ರಕೂಟದ ಕನ್ನರನನ್ನು ಮೆಚ್ಚಿಸಿ ಜಮಖಂಡಿಗೆ ಸಮೀಪವಿರುವ ಬನಹಟ್ಟಿ ಮುಂತಾದ ೧೮ ಗ್ರಾಮಗಳನ್ನು ಜಹಗೀರಾಗಿ ಪಡೆದಿದ್ದನೆಂದು ಶಾಸನಾಧಾರ ಗಳಿಂದ ತಿಳಿಯಬಂದಿದೆ ರುದ್ರಭಟ್ಟನ ಹಿರಿಯ ಸಹೋದರ ಭಾಸ್ಕರ ಭಟ್ಟನು "ಸಿದ್ಧಾಂತ ಶಿರೋಮಣಿ" ಎಂಬ ಉದ್ಗ್ರಂಥವನ್ನು ರಚಿಸಿದ್ದಾನೆ. ಈತನು ಸಿದ್ಧಾಂತ ಗಣಿತಶಾಸ್ತ್ರಕ್ಕೆ ಗುರುಸ್ಥಾನದಲ್ಲಿರುವನು. ಇವನು ಅಂಕ ಗಣಿತ, ಬೀಜಗಣಿತ ಮತ್ತು ರೇಖಾಗಣಿತಗಳನ್ನು ಬರೆದು ಕೀರ್ತಿ ಸಂಪಾದಿಸಿದನು. ಇವನಿಂದ ಗಣಿತಶಾಸ್ತ್ರವನ್ನು ಕಲಿತವರಲ್ಲಿ ಪಾರ್ಸಿಗಳು ಮೊದಲಿಗರು ಅನಂತರ ಗ್ರೀಕರೂ, ಯವನರೂ ಅಭ್ಯಾಸ ಮಾಡಿದರು. ಇವನ ಈ ಗ್ರಂಥಗಳು ಆಂಗ್ಲೇಯರ ಮನ್ನಣೆಗೂ ಪಾತ್ರವಾಗಿವೆ,

ಹೀಗೆ ಷಾಷ್ಟಿಕಮನೆತನಕ್ಕೆ ಸೇರಿದವನಾಗಿ ರಾಜಕೀಯ, ಧಾರ್ಮಿಕ, ಸಾಹಿತ್ಯ ರಂಗಗಳಲ್ಲಿ ವರ್ಚಸ್ಸಿನಿಂದ ಮೆರೆದ ರುದ್ರಭಟ್ಟನ ಪ್ರಸಿದ್ಧ ಜೀವನ ಚರಿತ್ರೆಯು ಆತನ ಕುಲಬಾಂಧವರಿಗೆ ಮಾತ್ರವೇ ಏಕೆ, ಇಡೀ ಭಾರತ ಜನತೆಗೆ ಆದರ್ಶವೂ ಅನುಕರಣೀಯವೂ ಆಗಿದೆ. ಈ ಮಹಾಪುರುಷನ ಜೀವಿತದ ಘಟನೆಗಳಲ್ಲಿ ಕೆಲವನ್ನು ಮಾತ್ರ ಇಲ್ಲಿ ತಿಳಿಸಲಾಗಿದೆ ಮಹನೀ ಯರ ಜೀವನವೆಂದರೆ ಅದು ಚಿರಕಾಲ ತಲೆ–ತಲಾಂತರಗಳವರೆಗೆ ಮಾರ್ಗದರ್ಶಿ ಯಾದುದು. ಅವರ ಕಾರ್ಯಕಲಾಪಗಳೂ ಅವರಿಂದಾಗಿರುವ— ಆಗಲಿರುವ ಉಪಕಾರವೂ ಚಿರಸ್ಮರಣೀಯವಾದುವು. ಪ್ರಕೃತ ಷಾಷ್ಟಿಕಮನೆತನದ ರುದ್ರ ಭಟ್ಟ—ಕವಿಯೂ, ಮಂತ್ರಿಪರ್ಯನೂ, ಭಗವದ್ಭಕ್ತನೂ ಆಗಿ, ಮಹನೀಯರ ಅಗ್ರ ಪಂಕ್ತಿಯಲ್ಲಿರುವನೆಂಬುದನ್ನು ತಿಳಿಸಿ ಈ ಪ್ರಕರಣವನ್ನು ಮುಗಿಸುತ್ತೇವೆ.

# ಶ್ರೀಮನ್ಮಧ್ವಾಚಾರ್ಯರ ಕಾಲ ಮತ್ತು ಅಲ್ಲಿಂದೀಚಿನ ಕಾಲ

## ಶ್ರೀಅಕ್ಷೋಭ್ಯತೀರ್ಥರು

ಅರವತ್ತೊಕಲು ಮಂಗಡದವರಲ್ಲಿ ಸ್ವರ್ಣಭಂಡಾರವೆಂಬ ಅಂಕಿತವುಳ್ಳ

ಒಂದು ಮನೆತನವಿದೆ. ಇವರು ಭಾರಧ್ವಾಜಗೋತ್ರಕ್ಕೆ ಸೇರಿದವರು. ಇವರ ಪೂರ್ವಿಕರು ಬನವಾಸಿಯ ಕದಂಬಚಕ್ರಾಧಿಪತ್ಯವು ವೈಭವದ ಶಿಖರವನ್ನು ಮುಟ್ಟಿದ್ದ ದಿನಗಳಲ್ಲಿ ಕೋಶಾಧ್ಯಕ್ಷಪದವಿಯಲ್ಲಿದ್ದರು. ಇವರ ರಾಜಕಾರ್ಯ ಕುಶಲತೆ, ಸ್ವಾಮಿನಿಷ್ಠೆ, ಧಾರ್ಮಿಕತೆ ಮುಂತಾದ ಉಚ್ಚ-ಉಚ್ಚತರ ಉಚ್ಚತಮಗುಣಗಳು ಸಾರ್ವಭೌಮರ ಮೆಚ್ಚುಗೆಗೆ ಪಾತ್ರವಾಗಿದ್ದುವು ತ್ರಿಣೇತ್ರ ಕದಂಬನು ಇವರ ಸದ್ಗುಣಗಳನ್ನು ಗಣನೆಗೆ ತಂದುಕೊಂಡು ಈಗಿನ ಶಿವಮೊಗ್ಗ ಜಿಲ್ಲೆಗೆ ಸಮೀಪವಾಗಿರುವ ಭಂಡಾರಕೇರಿ ಪ್ರಾಂತ್ಯವನ್ನು ಇವರಿಗೆ ಜಹಗೀರಾಗಿ ಕೊಟ್ಟಿದ್ದನು. ಇವರ ಮನೆತನದವರಿಗೆ ಭಟ್ಟರೆಂತಲೂ ನಾಯಕರೆಂತಲೂ ಸ್ವರ್ಣಭಂಡಾರದವರೆಂತಲೂ, ಗ್ರಾಮ್ಯ ಭಾಷೆಯಲ್ಲಿ ಚಿನ್ನ ಭಂಡಾರಿಗಳೆಂತಲೂ ಹೆಸರಿವೆ ಮಯೂರವರ್ಮಕದಂಬಚಕ್ರವರ್ತಿಯ ಕಾಲದಲ್ಲಿ ಈ ಗ್ರಂಥಾರಂಭದಲ್ಲಿ ತಿಳಿಸಿರುವ ಕಾರಣಗಳಿಗಾಗಿ ಇವರ ಹಿರಿಯರೂ ಉಳಿದ ಪಾಷ್ಟಿಕರೊಂದಿಗೆ ಚಾಲುಕ್ಯರ ರಾಜಧಾನಿಯಾಗಿದ್ದ ದೇವಗಿರಿಗೆ ಹೋಗಿ ನಲಸಿದರು. ಕೆಲಕಾಲಾನಂತರ ಚಾಲುಕ್ಯರಾಜರು ಇವರನ್ನು ಜಮಖಂಡಿ ನಾಡಿನ ಮಾಂಡಲಿಕರನ್ನಾಗಿ ನಿಯಮಿಸಿದರು. ಈ ವಂಶದಲ್ಲಿ ಗೋವಿಂದಭಟ್ಟರೆಂಬ ಮಹಾಮಹಿಮರು ಕ್ರಿ ಶ. ೧೨೮೨ ನೆಯ ಸಂವತ್ಸರದಲ್ಲಿ ಜನ್ಮ ತಾಳಿದರು ಇವರ ತಂದೆ ಕೇಶವಭಟ್ಟರು ತಮ್ಮ ಏಕಮಾತ್ರ ಪುತ್ರನನ್ನು ಅಕ್ಕರೆಯಿಂದ ಸಾಕಿ ಸಲಹಿದರಲ್ಲದೆ ದೇಶಕಾಲಾನುಗುಣವಾಗಿ ಮಗನಿಗ ಯುಕ್ತ ಕಾಲದಲ್ಲ ಉಪನಯನವನ್ನು ಮಾಡಿ ಅವನನ್ನು ವಿದ್ಯಾಭ್ಯಾಸಕ್ಕಾಗಿ ಗುರುಕುಲಕ್ಕೆ ಕಳುಹಿಸಿದರು. ಚುರುಕು ಬುದ್ಧಿಯ ಗೋವಿಂದಭಟ್ಟರು ಅನತಿ ಕಾಲದಲ್ಲಿಯೇ ಚತುಶ್ಶಾಸ್ತ್ರಗಳಲ್ಲಿ ಅಪಾರ ಪಾಂಡಿತ್ಯವನ್ನು ಗಳಿಸಿ ಗುರುಗಳ ಅಪ್ಪಣೆ ಪಡೆದು ಜಮಖಂಡಿಗೆ ಹಿಂದಿರುಗಿದರು. ಕೆಲವು ವರ್ಷಗಳ ತರುವಾಯ ಕೇಶವಭಟ್ಟರು ವಿಧಿವಶರಾಗಲು ಕುಲಕ್ರಮಾಗತವಾದ ರಾಜ್ಯದೊಡೆತನವು ಗೋವಿಂದಭಟ್ಟರಿಗೆ ಲಭಿಸಿತು. ಗೋವಿಂದಭಟ್ಟರು ರಾಜ್ಯದ ಶಿಸ್ತು ಸಡಿಲವಾಗದಂತೆಯೂ ಪ್ರಜಾಕ್ಷೋಭೆಗೆ ಎಡೆಗೊಡದಂತೆಯೂ ಸಾರ್ವಭೌಮನ ಹಿತಸಾಧನೆಯಾಗುವಂತೆಯೂ ಐದು ವರ್ಷಗಳ ಕಾಲ ದೊರೆತನವನ್ನು ಮಾಡಿದರು. ಈ ಅಂತರದಲ್ಲಿ ಶ್ರೀಮನ್ಮಧ್ವಾಚಾರ್ಯರಿಗೂ ಗೋವಿಂದಭಟ್ಟರಿಗೂ ಸಮಾಗಮವಾಯಿತು. ಭಾಗವತ್ತೋತ್ತಮರಾದ ಗೋವಿಂದಭಟ್ಟರು

ಶ್ರೀಮನ್ಮಧ್ವಾಚಾರ್ಯರ ದ್ವೈತಸಿದ್ಧಾಂತ ತತ್ತ್ವಗಳಿಗೆ ಮನಸೋತು ಅವರ ಅನುಯಾಯಿಗಳಾದರು. ಶ್ರೀಮಂತಕುಟುಂಬದಲ್ಲಿ ಹುಟ್ಟಿ–ಶ್ರೀಮಂತಿಕೆಯು ಸಕಲ ಭೋಗಸಾಮಗ್ರಿಗಳು ಹಸ್ತಗತವಾಗಿದ್ದರೂ ಅವುಗಳಿಗೆ ಮನಸೋಲದೆ ನಿರಾಡಂಬರ ಜೀವನವನ್ನು ಸಾಗಿಸುತ್ತಲಿದ್ದ ಗೋವಿಂದಭಟ್ಟರ ಜೀವನದ ವೈಖರಿಯನ್ನು ನೋಡಿ ನೋಡಿ ಶ್ರೀಮನ್ಮಧ್ವಾಚಾರ್ಯರು ಹರ್ಷಚಿತ್ತರಾದರು. ಸರ್ವಜ್ಞರ ರೀತಿನೀತಿಗಳು ಯಾವಾಗಲೂ ಆಶ್ಚರ್ಯಕರವಾದುವು. ಯವನರಿಂದ ತಮ್ಮ ನಾಡಿಗೂ ತಮ್ಮ ಜನತೆಗೂ ತಮ್ಮ ಸಂಸ್ಕೃತಿಗೂ ಮುಂದೆ ಒದಗಬಹುದಾದ ಅಪಘಾತಗಳನ್ನೂ, ಅವುಗಳಿಂದ ಪಾರಾಗಲು ಕೈಗೊಳ್ಳಬೇಕಾಗಿರುವ ನಿವಾರಣೋಪಾಯಗಳನ್ನೂ ಶ್ರೀಮನ್ಮಧ್ವಾಚಾರ್ಯರು ತಮ್ಮ ಅಂತರಂಗ ಶಿಷ್ಯಶೇಖರರಾದ ಗೋವಿಂದಭಟ್ಟರಿಗೆ ಮನದಟ್ಟಾಗಿ ಅವರ ಸ್ವಾಭಿಮಾನ, ಸ್ವಜನಾಭಿಮಾನ, ಸ್ವದೇಶಾಭಿಮಾನದ ಕಿಡಿಗಳು ಉದ್ದೀಪನವಾಗುವಂತೆ ಉಪದೇಶಿಸಿದರು. ಅದು ಮೊದಲು ಗೋವಿಂದಭಟ್ಟರ ಮನೋವೃತ್ತಿಯು ಮೂಲರೂಪವಾದ ಬದಲಾವಣೆಯನ್ನು ಹೊಂದಿತು. ಇವರು ಕ್ರಿ. ಶ. ೧೩೧೨ನೆಯ ಸಂವತ್ಸರದಲ್ಲಿ ತಮ್ಮ ಚಿಕ್ಕತಂದೆ ಧುಂಡಿರಾಜರಿಗೆ ರಾಜ್ಯಭಾರವನ್ನು ವಹಿಸಿಕೊಟ್ಟು–ಶ್ರೀಮನ್ಮಧ್ವಾಚಾರ್ಯರಿದ್ದಲ್ಲಿಗೆ ಹೋಗಿ ಅವರಿಂದ ಚತುರ್ಥಾಶ್ರಮದೀಕ್ಷೆಯನ್ನು ಕೈಗೊಂಡರು, ಇವರ ಈ ಬಲಿದಾನದಿಂದ ಮಾಧ್ವಮತಾಭಿವೃದ್ಧಿಗೆ ದೊರೆತ ಸಹಾಯ ಸಂಪತ್ತುಗಳು ಚಿರಸ್ಮರಣೀಯವಾಗಿವೆ ಇವರು ಅಕ್ಷೋಭ್ಯತೀರ್ಥರೆಂದು ಪ್ರಸಿದ್ಧರಾದರು.

ಶ್ರೀಮನ್ಮಧ್ವಾಚಾರ್ಯರು ಕ್ರಿ. ಶ. ೧೩೧೮ರಲ್ಲಿ ಕೊನೆಯದಾಗಿ ಬದರಿಕಾಶ್ರಮಕ್ಕೆ ತೆರಳಿದುದು ಸರಿಯಷ್ಟೆ, ಅನಂತರ ಅವರ ಶಿಷ್ಯರಾದ ಪದ್ಮನಾಭತೀರ್ಥರು ಮಾಧ್ವಮತಚಾಲಕರಾಗಿದ್ದು ಕ್ರಿ ಶ. ೧೩೨೪ರಲ್ಲಿ ವೃಂದಾವನ ಪ್ರವೇಶ ಮಾಡಿದರು. ಅವರ ತರುವಾಯ ಶ್ರೀನರಹರಿತೀರ್ಥರೂ ಶ್ರೀಮಾಧವತೀರ್ಥರೂ ಕ್ರಮವಾಗಿ ಮಠಾಧಿಪತಿಗಳಾಗಿದ್ದು ಕೀರ್ತಿಶೇಷರಾದರು. ಶ್ರೀಮನ್ಮಧ್ವಾಚಾರ್ಯರ ನಾಲ್ಕು ಮಂದಿ ಶಿಷ್ಯರಲ್ಲಿ ಶ್ರೀಅಕ್ಷೋಭ್ಯತೀರ್ಥರು ಕಿರಿಯರಾಗಿದ್ದರಾಗಿ–ಮಾಧವತೀರ್ಥರ ನಂತರ ಕ್ರಿ. ಶ. ೧೩೫೦ರಲ್ಲಿ–ಇವರಿಗೆ ಮಠಾಧಿಪತ್ಯವು ಲಭಿಸಿತು. ಆಗ ಸಂಗಮವಂಶದ ಹರಿಹರನು ವಿಜಯ

ನಗರದ ಸಾಮ್ರಾಟನಾಗಿದ್ದನು ; ವೇದಭಾಷ್ಯಕಾರರಾದ ಶ್ರೀವಿದ್ಯಾರಣ್ಯ ಸ್ವಾಮಿಗಳು ಅವನಿಗೆ ಕುಲಗುರುಗಳಾಗಿಯೂ ಸಚಿವೋತ್ತಮರಾಗಿಯೂ ಇದ್ದರು. ಇವರು ಶ್ರೀಅಕ್ಷೋಭ್ಯತೀರ್ಥರಲ್ಲಿ ಸ್ನೇಹ ಸೌಹಾರ್ದಗಳಿಂದ ವರ್ತಿಸುತ್ತಲಿದ್ದರು ; ಇದಕ್ಕೆ ಹಲವು ಜೀವಂತ ನಿದರ್ಶನಗಳಿವೆ ಈಗಿನ ಶಿವಮೊಗ್ಗ ಜಿಲ್ಲೆಗೆ ಸೇರಿ ತುಂಗಾ ಮತ್ತು ಭದ್ರಾ ನದಿಗಳ ಸಂಗಮಸ್ಥಾನವೂ ಪ್ರಕೃತಿಸೌಂದರ್ಯದ ನೆಲಮನೆಯೂ ಆದ ಕೂಡಲೀ ಎಂಬ ಮಹಾ ಕ್ಷೇತ್ರದಲ್ಲಿ ಈ ಐತಿಹಾಸಿಕ ವ್ಯಕ್ತಿಗಳೀರ್ವರು ತಮ್ಮ ಆಶ್ರಮಗಳನ್ನು ಪಕ್ಕಪಕ್ಕದಲ್ಲಿ ನಿರ್ಮಿಸಿಕೊಂಡು ಲೋಕ ಕಲ್ಯಾಣಕ್ಕಾಗಿ ಉಜ್ವಲ ತಪೋನಿರತರಾಗಿದ್ದರೆಂದ ಮೇಲೆ ಇದಕ್ಕಿಂತಲೂ ಅಧಿಕ ಪ್ರಮಾಣದ ಬೇರೊಂದು ದೃಷ್ಟಾಂತದ ಆವಶ್ಯಕತೆ ಏನಿದೆ ? ಇದು ಹೊರತು ಹಲವು ಮಂದಿ ಹೊಯ್ಸಳಕರ್ಣಾಟಕ ಪಂಗಡದ ಬ್ರಾಹ್ಮಣರು ಶ್ರೀವಿದ್ಯಾರಣ್ಯಗುರುಗಳ ಅನುಮತಿ ಪಡೆದು— ಶ್ರೀಅಕ್ಷೋಭ್ಯಮುನಿಗಳ ಶಿಷ್ಯರಾದರೆಂತಲೂ, ಅವರಿಗೆ-ಮಲೆನಾಡಿನ ಅನೇಕ ಗ್ರಾಮಗಳ **"ನಾಡಿಗ"** ಎನ್ನುವ ಉಚ್ಚಾಧಿಕಾರವನ್ನು ದಯಪಾಲಿಸಿದರೆಂತಲೂ ಪ್ರಾಚೀನ ಇತಿಹಾಸಗಳಿಂದ ತಿಳಿಯಬಂದಿದೆ. ಇವರ ಸಂತತಿಯವರನ್ನು **"ನಾಡಿಗ"**ರೆಂಬ ಅಭಿದಾನದಿಂದ ಕರೆಯುವುದನ್ನು ನಾವು ಕಾಣಬಹುದು. ಕಾವೇರಿನದಿಯ ಉತ್ತರ ದಿಕ್ಕಿನಲ್ಲಿ ನೆಲೆಸಿದ್ದ ಹೊಯ್ಸಳಕರ್ಣಾಟಕಬ್ರಾಹ್ಮಣ ಪಂಗಡದವರನ್ನು **"ಬಡಗನಾಡಿಗ"**ರೆಂದು ಕರೆದರು ಆ ಕಾಲದಲ್ಲಿ ಪರಮತ ಸಹಿಷ್ಣುತೆಯು ಚೆನ್ನಾಗಿ ನೆಲಸಿದ್ದಿತೆಂಬುದು ಇದರಿಂದ ಸ್ಥಿರಪಟ್ಟಿದೆ.

ಶ್ರೀಅಕ್ಷೋಭ್ಯಮುನಿಗಳು ಪಂಪಾಕ್ಷೇತ್ರದ **"ಲೋಕಪಾವನ"** ಮಠದಲ್ಲಿದ್ದುಕೊಂಡು ದ್ವೈತಮತಪ್ರಚಾರಕಾರ್ಯದಲ್ಲಿ ತೊಡಗಿದ್ದರು ಹೀಗಿರುವಲ್ಲಿ ವಿಜಯನಗರದಲ್ಲಿ ಒಂದು ದಿನ ನಡೆದುಹೋದ ದುರ್ಘಟನೆಯು ಮಾಧ್ವಮತಇತಿಹಾಸದಲ್ಲಿ ಪರಿಣಾಮಕಾರಿಯಾದ ಬದಲಾವಣೆಯನ್ನುಂಟು ಮಾಡಿತು. ಅದರ ಸಂಕ್ಷಿಪ್ತ ವಿವರಣೆಯನ್ನು ವಾಚಕರ ಅವಗಾಹನೆಗಾಗಿ ಇಲ್ಲಿ ಸೂಚಿಸಲಾಗಿದೆ. ಚಕ್ರವರ್ತಿ ಹರಿಹರರಾಯನಿಗೆ ಸರ್ವಮಂಗಳಾದೇವಿಯೆಂಬ ರೂಪವತಿಯಾದ ಮಗಳಿದ್ದಳು. ಆಕೆಯನ್ನು ಕಂಪಿಲರಾಜಕುಮಾರನಾದ ಸೋಮಶೇಖರರಾಯನಿಗೆ ಕೊಟ್ಟು ವಿವಾಹವಾಗಿದ್ದಿತು. ಆತನು ಹರಿಹರನ

ಸೇನಾಸಮೂಹಕ್ಕೆ ಸೇರಿದ ಅಶ್ವಪಡೆಯ ನಾಯಕನಾಗಿದ್ದನು ಆತನು ಒಂದು ದಿನ ಪ್ರಾತಃಕಾಲ ಅಶ್ವಾರೋಹಿಯಾಗಿ ನಗರಸಂಚಾರಕ್ಕೆ ಹೊರಟಿದ್ದನು. ಮಾರ್ಗಮಧ್ಯದಲ್ಲಿ ಒಂದು ಕುದುರೆಬಂಡಿಯು ಅಡ್ಡಲಾಗಿ ಬಂದಿತು. ಶಕಟಾಶ್ವವನ್ನು ಕಂಡ ರಾಜಕುಮಾರನ ಜಾತ್ಯಶ್ವವು ಹೇಷಾರವವನ್ನು ಮಾಡುತ್ತ ಅತ್ತಿತ್ತ ಚಲಿಸದೆ ಇದ್ದ ಸ್ಥಳದಲ್ಲಿಯೇ ನಿಂತುಬಿಟ್ಟಿತು. ಇದರಿಂದ ರಾಜಕುಮರನು ಕುಪಿತನಾಗಿ ಕುದುರೆಯಿಂದ ಕೆಳಗಿಳಿದು ತನ್ನ ಹಸ್ತದಲ್ಲಿದ್ದ ಅಧಿಕಾರದಂಡದಿಂದ ನಿರಪರಾಧಿಯಾದ ಗಾಡಿಯುವನನ್ನು ಕ್ರೂರವಾಗಿ ಪ್ರಹರಿಸಿದನು. ಬಂಡಿಕಾರನ ಆರ್ತನಾದದಿಂದ ದಾರಿಗರ ಹೃದಯವು ಕರಗಿತು. ಅದೇ ಸಮಯದಲ್ಲಿ ಶ್ರೀಅಕ್ಷೋಭ್ಯಮುನಿಗಳು ತಮ್ಮ ತಪೋಮಂಟಪಾಭಿಮುಖವಾಗಿ ಹೋಗುತ್ತಲಿದ್ದರು. ರಾಜಜಾಮಾತನ ಉದ್ಧಟವರ್ತನೆಯೂ ಬಂಡಿಕಾರನ ಅಸಹಾಯಕತೆಯ ಶೋಚನೀಯಾವಸ್ಥೆಯೂ ಅವರ ಗಮನಕ್ಕೆ ಬಂದಿತು. ಅವರು ಸೋಮಶೇಖರರಾಯನ ಅನ್ಯಾಯ ವರ್ತನೆಯನ್ನು ನಿರ್ಭಯವಾಗಿ ಖಂಡಿಸಿ ಮುಂದಕ್ಕೆ ತೆರಳಿದರು,

ಇದರಿಂದ ಸೋಮಶೇಖರರಾಯನ ಕೋಪವು ಇಮ್ಮಡಿಸಿತು. ಅವನು ಅಕ್ಷೋಭ್ಯತೀರ್ಥರ ಮೇಲೆ ತನ್ನ ಕ್ರೂರ ದೃಷ್ಟಿಯನ್ನು ಹೊರಳಿಸಿ, ಅವರು ಕಣ್ಮರೆಯಾದ ಕೂಡಲೇ ಕುದುರೆಯನ್ನೇರಿ ಅರಮನೆಯ ಕಡೆ ನಡೆದನು. ಬೆಳಗಾಯಿತು ಗುರುವರ್ಯರು ತಮ್ಮ ಆಶ್ರಮದಲ್ಲಿ ಸ್ವಧರ್ಮೋಚಿತವಾದ ಜಪತಪಾನುಷ್ಠಾನದಲ್ಲಿ ನಿರತರಾಗಿದ್ದರು. ಆಗ ಒಬ್ಬ ರಾಜದೂತನು ತಪೋಮಂಟಪಕ್ಕೆ ಬಂದು ರಾಜನ ಆಜ್ಞಾಪತ್ರಿಕೆಯೊಂದನ್ನು ತಾಪಸವರ್ಯರ ಮುಂದಿಟ್ಟನು. ಅವರು ಅದನ್ನು ತೆಗೆದು ನೋಡಿದರು. ಅದರಲ್ಲಿ "ಸ್ವಾಮೀ ! ನಾವು ಶೈವೋಪಾಸಕರು , ನೀವು ವೈಷ್ಣವಧರ್ಮದ ವ್ಯವಸ್ಥಾಪಕರೂ ಪ್ರಚಾರಕರೂ ಆಗಿರುವಿರಿ. ಭಿನ್ನಭಿನ್ನ ತತ್ತ್ವೋಪಾಸಕರಾದ ನಾವು ಏಕತ್ರ ವಾಸಿಸುವುದು ಸರಿಯಲ್ಲ. ಆದುದರಿಂದ ನೀವು ನಮ್ಮ ರಾಜ್ಯದ ಎಲ್ಲೆಯನ್ನು ಬಿಡತಕ್ಕದ್ದು" ಎಂಬ ಅರ್ಥಗರ್ಭಿತವಾದ ಒಕ್ಕಣಿಕೆಯಿದ್ದಿತು. ಯತಿವರ್ಯರು ಕೊಂಚಕಾಲ ಮೌನವನ್ನು ವಹಿಸಿದ್ದರು. ತರುವಾಯ ಅವರು ರಾಜಜಾಮಾತನ ಅನ್ಯಾಯ ವರ್ತನೆಯನ್ನು ಪ್ರತಿಭಟಿಸದೆ ತಮ್ಮ ಶಿಷ್ಯ ಪರಿವಾರ ಸಹಿತರಾಗಿ

ತಪೋಮಂಟಪದಿಂದ ಹೊರಬಿದ್ದರು. ಕೆಲಕಾಲ ಮಾರ್ಗವನ್ನತಿಕ್ರಮಿಸಿದ ನಂತರ ಅವರು ತಮ್ಮ ಸ್ವಂತ ಊರಾದ ಜಮಖಂಡಿಗೆ ಬಂದರು ಅವರ ಆಗಮನವೃತ್ತಾಂತವು ಪುರಜನರಿಗೆ ತಿಳಿದು ಅವರು ಶ್ರೀಗಳವರನ್ನು ಸಂಭ್ರಮದಿಂದ ಸ್ವಾಗತಿಸಿದರು, ಅಲ್ಲದೆ ಅವರ ಅನಿರೀಕ್ಷಿತ ಆಗಮನದಿಂದ ಆಶ್ಚರ್ಯಚಕಿತರೂ ಆದರು. ರಾಜಜಾಮಾತನಿಂದ ತಮಗಾದ ಅವಹೇಳನ ಸಮಾಚಾರವನ್ನು ಅವರೆಲ್ಲರಿಗೂ ಗುರುಗಳು ವಿವರಿಸಿದರು ದ್ವೈತಮತತತ್ತ್ವಗಳನ್ನು ಜನರಿಗೆ ಬೋಧಿಸುತ್ತಾ, ಜಪತಪಾನುಷ್ಠಾನಗಳನ್ನು ಆಚರಿಸುತ್ತ ಜಮಖಂಡಿ ನಗರದಲ್ಲಿಯೇ ಅವರು ಕೆಲಕಾಲ ವಾಸವಾಗಿದ್ದರು

## ಶ್ರೀವಿದ್ಯಾರಣ್ಯರು

ಕೆಲವು ದಿನಗಳು ಕಳೆದ ತರುವಾಯ ರಾಜಜಾಮಾತನ ದುರ್ವರ್ತನೆಂಬ ವಿಷಾದದಾಯಕ ವೃತ್ತಾಂತವು ಶ್ರೀವಿದ್ಯಾರಣ್ಯಸ್ವಾಮಿಗಳ ಕಿವಿಯನ್ನು ಮುಟ್ಟಿತು. ಆದರಿಂದ ಅವರಿಗುಂಟಾದ ಮನೋವ್ಯಾಕುಲವನ್ನು ಲೇಖನದಿಂದ ವಿವರಿಸಲಳವಲ್ಲ. ಅವರು ಆ ಕೂಡಲೆ ತಮ್ಮ ಮಿತ್ರರಾದ ಶ್ರೀಅಕ್ಷೋಭ್ಯ ಮುನಿಗಳಿಗೆ ಪಶ್ಚಾತ್ತಾಪಸೂಚಕವಾದ ಪತ್ರ ಬರೆದರು. ಅದರ ಒಕ್ಕಣೆಯು "ತಮ್ಮ ವಿಚಾರದಲ್ಲಿ ನಡೆದು ಹೋದ ಅಪಚಾರಕ್ಕಾಗಿ ನಾವು ತುಂಬಾ ವಿಷಾದಿಸುತ್ತೇವೆ. ಅದೂರದೃಷ್ಟಿಯ ಯುವಕನ ದುರ್ವರ್ತನವನ್ನು ಕ್ಷಮಾಸಮುದ್ರರಾದ ತಾವು ಮನ್ನಿಸಬೇಕಲ್ಲದೆ-ವಿಜಯನಗರಕ್ಕೆ ತಾವು ಹಿಂದಿರುಗಿ ಎಂದಿನಂತೆ ಸಾಮ್ರಾಜ್ಯದ ಹಿತಸಾಧನೆಗೋಸ್ಕರ ತಪ್ಪೇನಿರತರಾಗಬೇಕು. ಇದಕ್ಕಾಗಿ ರಾಜಾಜ್ಞೆಯಿಂದ ಎಲ್ಲ ಸಿದ್ಧತೆಗಳೂ ನಡೆದಿವೆ" ಎಂಬುದಾಗಿದ್ದಿತು. ಶ್ರೀಅಕ್ಷೋಭ್ಯಮುನಿಗಳು ತಮ್ಮ ಗೆಳೆಯರಾದ ಶ್ರೀವಿದ್ಯಾರಣ್ಯಸ್ವಾಮಿಗಳಿಗೆ "ನಾವು ನಮ್ಮ ವೃದ್ಧಾಪ್ಯದ ದೆಶೆಯಿಂದ ಅಲ್ಲಿಗೆ ಪುನಃ ಬರಲು ಅಶಕ್ತರಾಗಿದ್ದೇವೆಂಬ ವಿಚಾರ ತಮಗೆ ಮನದಟ್ಟಾಗಿದೆ. ಆದುದರಿಂದ ನಾವು ಬರಲು ಸಾಧ್ಯವಿಲ್ಲ. ಆದರೆ ಇನ್ನು ಮುಂದೆ ನಮ್ಮ ಸ್ಥಾನಕ್ಕೆ ಬರತಕ್ಕವರು ಒಳ್ಳೆಯ ಮೇಧಾವಿಗಳು. ಅವರ ವಿಚಾರದಲ್ಲಿ ತಾವು ನನ್ನಲ್ಲಿ ಹೇಗೋ ಹಾಗೆ ಸ್ನೇಹ ಸೌಹಾರ್ದಗಳಿಂದ ನಡೆದುಕೊಂಡರೆ ಅದರಿಂದ ನಮಗೆ

ಹೆಚ್ಚಿನ ಸಂತೋಷವುಂಟಾಗುವುದು" ಎಂದು ಉತ್ತರ ಬರೆದು ಕಳುಹಿಸಿದರು.

## ಗಂಗಾಧರ ಭಟ್ಟ

ಈಗಿನ ತುಮಕೂರು ಜಿಲ್ಲೆಗೆ ಸೇರಿದ ಕೈದಾಳವೆಂಬ ನಗರದಲ್ಲಿ ರಾಜ್ಯಭಾರ ಮಾಡುತಲಿದ್ದ ಗೂಳಿಬಾಚ್ಚಿಯು ವೀರಬಲ್ಲಾಳರಾಯನ ಸಾಮಂತರಾಜರಲ್ಲೊಬ್ಬನಾಗಿದ್ದನು ಆತನ ಅಧಿಕಾರಕ್ಕೆ ಸೇರಿದ್ದ ಪ್ರದೇಶಗಳಲ್ಲಿ ಈಗಿನ ಉತ್ತರ ಕರ್ಣಾಟಕಕ್ಕೆ ಸೇರಿರುವ ಮಾನ್ಯಖೇಟಪುರವೂ (ಮಲಖೇಡ) ಒಂದಾಗಿದ್ದಿತು ಆ ಕಾಲದಲ್ಲಿ ವೀರಬಲ್ಲಾಳರಾಯನ ಮಂತ್ರಿಯಾಗಿದ್ದ ಪಾಷ್ಟಿಕ ಮನೆತನದ ರುದ್ರಭಟ್ಟನು ತನ್ನ ಬಂಧುವರ್ಗದವರಿಗೆ ಉತ್ತರಕರ್ಣಾಟಕದ ರಾಜ್ಯಾಡಳಿತದಲ್ಲಿ ಉಚ್ಚಾಧಿಕಾರಗಳನ್ನು ದೊರಕಿಸಿಕೊಟ್ಟಿದ್ದನೆಂದು ಊಹಿಸಲು ಸಾಧ್ಯವಿದೆ. ಇವರಲ್ಲಿ ಗಂಗಾಧರಭಟ್ಟನ ಪೂರ್ವಜರೂ ಒಬ್ಬರಾಗಿದ್ದರು. ಗಂಗಾಧರಭಟ್ಟನು ಹರಿತಸಗೋತ್ರಕ್ಕೆ ಸೇರಿದ ಆರಾಧ್ಯ ಮನೆತನದವನು. ರುದ್ರಭಟ್ಟನ ಮೊಮ್ಮಗನಾದ ಭಾಸ್ಕರಭಟ್ಟನೇ ಈತನ ಜನಕನು. ದೆಹಲಿಯ ಸುಭಾದಾರನಾಗಿದ್ದ ಮಲ್ಲಿಕಾಫರನು ದೇವಗಿರಿಯನ್ನು ಮುತ್ತಿದ ಕಾಲದಲ್ಲಿ ಭಾಸ್ಕರಭಟ್ಟನು ಅವನ ಸಂಗಡ ವೀರಾವೇಶದಿಂದ ಹೋರಾಡಿ ಮಡಿದನು ಆಗ ಗರ್ಭಿಣಿಯಾಗಿದ್ದ ಅವನ ವರವರ್ಣಿನಿಯು ಕಾಲಕ್ರಮದಲ್ಲಿ ಒಂದು ಗಂಡು ಶಿಶುವನ್ನು ಪ್ರಸವಿಸಿದಳು. ಇವನೇ ಐತಿಹಾಸಿಕ ಪ್ರಸಿದ್ಧನಾದ ಗಂಗಾಧರಭಟ್ಟ.

ಈತನು ರುದ್ರಭಟ್ಟನ ಮೊಮ್ಮಗನೆಂದು ಸಂಶೋಧನೆಯಿಂದ ನಿರ್ಧರಿಸಲಾಗಿದೆ. ಗಂಗಾಧರಭಟ್ಟನು ೧೪ನೆಯ ಶತಮಾನದ ಮಧ್ಯಭಾಗದಲ್ಲಿದ್ದನೆಂದು ಐತಿಹಾಸಿಕಾಧಾರಗಳಿಂದ ಗೊತ್ತಾಗುವುದು. ಈತನು ಜ್ಯೋತಿಶ್ಶಾಸ್ತ್ರದಲ್ಲಿ ಅಸಾಧಾರಣ ಪಾಂಡಿತ್ಯವನ್ನು ಸಂಪಾದಿಸಿದ್ದನಲ್ಲದೆ, ಈತನ ಹೆಸರು ಆಗಿನ ಕಾಲದಲ್ಲಿ ರಾಜಕೀಯ ಕ್ಷೇತ್ರದಲ್ಲಿಯೂ ಪ್ರಖ್ಯಾತವಾಗಿದ್ದಿತು. ಈತನನ್ನು ಗಂಗಾಧರಜೋಯಿಸನೆಂತಲೂ ಕರೆಯುವ ವಾಡಿಕೆ ಇದ್ದಿತು.

ದಕ್ಷಿಣ ಕರ್ಣಾಟಕ ಪ್ರಾಂತ್ಯದಲ್ಲಿ ವಿಜಯನಗರ ಸಾಮ್ರಾಜ್ಯವನ್ನು ಕಟ್ಟಿ ಹೆಸರ ಗಳಿಸಿದ ಶ್ರೀವಿದ್ಯಾರಣ್ಯಸ್ವಾಮಿಗಳೂ ಗಂಗಾಧರಭಟ್ಟನೂ ಬಾಲ್ಯ

ಸ್ನೇಹಿತರೂ, ಸಹೋದ್ಯೋಗಿಗಳೂ ಆಗಿದ್ದರು ಕರ್ಣಾಟಕ ಮಾತೆಯ ಈ ಸುಪುತ್ರರಿಬ್ಬರೂ—ಸನಾತನಧರ್ಮದ ಹಾಗೂ ಕರ್ಣಾಟಕಸಾಮ್ರಾಜ್ಯದ ಪುರೋಭಿವೃದ್ಧಿಗೆ ಸತತ ಪ್ರಯತ್ನ ಮಾಡುತ್ತಲಿದ್ದರು ಇವರೀರ್ವರಿಗೂ ನಾರಾಯಣಯೋಗಿಯು ಸಹಾಯ ಮಾಡಿದನೆನ್ನುವ ಆಖ್ಯಾಯಿಕೆ ಇದೆ.

## ಬಹಮನೀರಾಜ್ಯ

ಉತ್ತರಹಿಂದೂಸ್ಥಾನದಲ್ಲಿ ಕೆಲವು ಶತಮಾನಗಳಿಂದ ಪ್ರಬಲರಾಗಿದ್ದ ಯವನ ಚಕ್ರವರ್ತಿಗಳು ದಕ್ಷಿಣಾಪಥದ ಮೇಲೆ ಆಗಿಂದಾಗ್ಗೆ ದಂಡೆತ್ತಿ ಬಂದು ಭಾರತೀಯ ಅರಸರನ್ನೂ ಪ್ರಜೆಗಳನ್ನೂ ಹಿಂಸೆಗೆ ಗುರಿಮಾಡಿ ಅವರ ಸರ್ವಸ್ವವನ್ನೂ ಸೂರೆಗೊಳ್ಳುತ್ತಲಿದ್ದರು. ಇದರಿಂದ ದೇಶದಲ್ಲಿ ನೆಮ್ಮದಿಯು ನೆಲೆಸದೆ ಸನಾತನಸಂಸ್ಕೃತಿಯ ಬೆಳವಣಿಗೆಗೆ ಅಡ್ಡಿ ಆತಂಕಗಳುಂಟಾಗಿದ್ದವು. ಈ ಕಂಟಕವನ್ನು ನಿವಾರಿಸುವ ಉದ್ದೇಶದಿಂದಲೇ ಮಹಾಮಹಿಮರಾದ ಶ್ರೀವಿದ್ಯಾರಣ್ಯಸ್ವಾಮಿಗಳು ಕ್ರಿ. ಶ ೧೩೩೬ರಲ್ಲಿ ವಿಜಯನಗರಚಕ್ರಾಧಿಪತ್ಯವನ್ನು ಸ್ಥಾಪಿಸಿದರು ಆ ನೂತನ ಸಾಮ್ರಾಜ್ಯವು ತನ್ನ ಸ್ಥಾನ-ಮಾನಗಳನ್ನು ಭದ್ರಪಡಿಸಿಕೊಳ್ಳಬೇಕಾದರೆ ಉತ್ತರ ದಿಕ್ಕಿನಿಂದ ಬರುತ್ತಿದ್ದ ಯವನರ ಧಾಳಿಯನ್ನು ಅಡ್ಡಕಟ್ಟುವ ಒಂದು ಶಕ್ತಿಯುತ ಕಟ್ಟುಪಾಡು ಅವಶ್ಯಕವಿದ್ದಿತು. ಹೀಗಿರಲು ರಾಜಕಾರಣಪಟುಗಳಾದ ಶ್ರೀವಿದ್ಯಾರಣ್ಯಸ್ವಾಮಿಗಳೂ, ಭಾಸ್ಕರ ದೇಶಬಲ್ಲಾಳನ ಮಡದಿ ಭುವನೇಶ್ವರಿಯೂ ಈ ಮಹಾಕಾರ್ಯ ನಿರ್ವಹಣೆಯ ಭಾರವನ್ನು ತಮ್ಮ ಆಪ್ತಮಿತ್ರನೂ ದಕ್ಷನೂ ಆಗಿದ್ದ ಗಂಗಾಧರ ಜೋಯಿಸನಿಗೆ ವಹಿಸಿದರು ಅಪ್ರತಿಮ ಪ್ರತಿಭಾಶಾಲಿಯಾಗಿದ್ದ ಈತನು, ಚಾಣಕ್ಯನು ಚಂದ್ರಗುಪ್ತಮೌರ್ಯನನ್ನು ಮುಂದುಮಾಡಿಕೊಂಡು ಮಗಧರಾಜ್ಯವನ್ನು ಕಟ್ಟಿದಂತೆ, ಅಲ್ಲಾವುದೀನ್ ಹಸನ್ ಎಂಬ ಮುಸಲ್ಮಾನ್ ಸರದಾರನನ್ನು ಮುಂದುಮಾಡಿಕೊಂಡು ಕ್ರಿ. ಶ. ೧೩೪೭ರಲ್ಲಿ ಉತ್ತರಕರ್ಣಾಟಕಪ್ರಾಂತ್ಯದಲ್ಲಿ ಒಂದು ನೂತನ ಹಿಂದೂ ರಾಜ್ಯವನ್ನು ನಿರ್ಮಾಣ ಮಾಡಿದನು. ಈ ವಿಜಯದ ನೆನಪಿಗೋಸ್ಕರ ಈ ನವೀನ ರಾಷ್ಟ್ರದ ರಾಜಧಾನಿಗೆ ಬಿಜಾಪುರ(ವಿಜಯಪುರ) ವೆಂದು ನಾಮಕರಣ ಮಾಡಿದನು. ಗಂಗಾಧರಭಟ್ಟನ ಶಕ್ತಿ ಸಾಹಸಗಳಿಂದ ಕಟ್ಟಿದ

ಈ ರಾಜ್ಯಕ್ಕೆ ಬಹಮನೀ ಅಂದರೆ ಬ್ರಾಹ್ಮಣೀ ರಾಜ್ಯವೆಂಬ ಹೆಸರು ಬಂದಿತು. ಈ ಮುಸಲ್ಮಾನ್ ಸರದಾರನು, ತನ್ನ ಸುದೈವದಂತಿದ್ದ-ಗಂಗಾಧರ ಭಟ್ಟನಲ್ಲಿ ಪಿತೃ ಸಮಾನವಾದ ಭಯ ಭಕ್ತಿಗಳನ್ನು ತೋರ್ಪಡಿಸುತ್ತಾ ಆತನ ಮಂತ್ರಾಲೋಚನೆಯಂತೆ ರಾಜಕಾರ್ಯನಿರ್ವಹಣೆಯನ್ನು ಮಾಡುತ್ತಿದ್ದನು. ಗಂಗಾಧರಭಟ್ಟನಲ್ಲಿ ತನಗಿದ್ದ ಅಪಾರ ಭಕ್ತಿ ಗೌರವಗಳನ್ನು ತೋರಿಸುವುದಕ್ಕಾಗಿ ಆತನ ಹೆಸರನ್ನು ತನ್ನ ನಾಮಾಂಕಿತದೊಂದಿಗೆ ಸೇರಿಸಿಕೊಂಡನು ಈ ಕಾರಣದಿಂದ ಅವನಿಗೆ "ಸುಲ್ತಾನ್ ಅಲ್ಲಾವುದೀನ್ ಹಸನ್ ಗಂಗೂ ಬಹಮನಿ" ಎಂದು ಹೆಸರಾಯಿತು

ಉತ್ತರ ಕರ್ಣಾಟಕದಲ್ಲಿ ಷಾಷ್ಟಿಕ ಕುಲಾವತಂಸನಾದ ಗಂಗಾಧರ ಭಟ್ಟನೂ ದಕ್ಷಿಣ ಕರ್ಣಾಟಕದಲ್ಲಿ ಹೊಯ್ಸಳಕರ್ಣಾಟಕಬ್ರಾಹ್ಮಣಕುಲ ಶೇಖರರಾದ ಶ್ರೀವಿದ್ಯಾರಣ್ಯಸ್ವಾಮಿಗಳೂ ೧೪ನೆಯ ಶತಮಾನದಲ್ಲಿ ಈ ರೀತಿ ಎರಡು ಪ್ರಬಲ ರಾಷ್ಟ್ರಗಳನ್ನು ನಿರ್ಮಾಣ ಮಾಡಿ ಭಾರತದ ಇತಿಹಾಸದಲ್ಲಿ ಅಚಲವಾದ ಕೀರ್ತಿ ಸ್ಥಾನಗಳನ್ನು ಗಳಿಸಿದರು. ಬಹಮನೀರಾಜ್ಯದ ಆಡಳಿತ ಸೂತ್ರವು ಗಂಗಾಧರ ಭಟ್ಟನ ಹಸ್ತಗತವಾಗಿತ್ತು ಈತನು ತನ್ನ ಬಂಧುಗಳಾದ ಷಾಷ್ಟಿಕರಲ್ಲಿ ಕೆಲವರನ್ನು ಮಾಂಡಲೀಕರನ್ನಾಗಿಯೂ, ಹಲವರನ್ನು ದಂಡನಾಯಕರನ್ನಾಗಿಯೂ, ಉಳಿದವರನ್ನು ಉನ್ನತಾಧಿಕಾರಿಗಳನ್ನಾಗಿಯೂ ಮಾಡಿದನು. ಈತನ ಕಾಲದಲ್ಲಿ ಷಾಷ್ಟಿಕಮನೆತನದ ಕೀರ್ತಿಪ್ರತಿಷ್ಠೆಗಳು ಬಲಗೊಂಡವು ಇಷ್ಟು ಮಾತ್ರವಲ್ಲ-ಶ್ರೀವಿದ್ಯಾರಣ್ಯಸ್ವಾಮಿಗಳು ತಮ್ಮ ಮಿತ್ರನೂ ಸಹವರ್ತಿಯೂ ಆದ ಗಂಗಾಧರ ಭಟ್ಟನ ಕೋರಿಕೆಯಂತೆ ಅರವತ್ತೊಕ್ಕಲು ಬ್ರಾಹ್ಮಣರಿಗೆ ವಿಜಯನಗರಸಾಮ್ರಾಜ್ಯಾಡಳಿತದಲ್ಲಿ ಉನ್ನತಾಧಿಕಾರಗಳನ್ನು ದಯಪಾಲಿಸಿ ಬಹುಮಾನಿಸಿದರು. ಈ ಕಾರಣಗಳಿಂದ ಷಾಷ್ಟಿಕ ಮನೆತನದವರು ಉತ್ತರ ಮತ್ತು ದಕ್ಷಿಣ ಕರ್ಣಾಟಕ ಪ್ರಾಂತ್ಯಗಳಲ್ಲಿ ಸರ್ವತೋಮುಖವಾಗಿ ವರ್ಧಿಷ್ಣುಗಳಾಗಿ ಚಿರಕೀರ್ತಿಯನ್ನು ಗಳಿಸಿದರು.

## ಶ್ರೀಜಯತೀರ್ಥರು

ಉತ್ತರಕರ್ಣಾಟಕದಲ್ಲಿ ದೇವಗಿರಿಯ ಯಾದವರು ಪ್ರಬಲರಾಗಿದ್ದರು.

ಅವರ ಪ್ರಾಬಲ್ಯವನ್ನು ಅಡಗಿಸಿ ರಾಜ್ಯವನ್ನು ವಿಸ್ತರಿಸಲು ಬಹಮನೀ ಸುಲ್ತಾನ್ ಅಲ್ಲಾವುದೀನನು ಮನಸ್ಸು ಮಾಡಿದನು. ಅವನು ಕ್ರಿ. ಶ ೧೩೫೭ರಲ್ಲಿ ದೇವಗಿರಿಯ ಮೇಲೆ ಒಂದು ಪ್ರಚಂಡ ಸೇನೆಯನ್ನು ಕಳುಹಿಸಿದನು. ಆಗ ಜಮಖಂಡಿಯ ಧುಂಡಿರಾಜರು ದೇವಗಿರಿಯ ಯಾದವರಿಗೆ ಅಧೀನರಾಗಿದ್ದರು ಆದುದರಿಂದ ಅವರು ತಮ್ಮ ಒಡೆಯನ ಸಹಾಯಕ್ಕಾಗಿ ಸುಸಜ್ಜಿತವಾದ ಸೈನ್ಯದೊಂದಿಗೆ ದೇವಗಿರಿಗೆ ಹೋದರು. ಅವರ ಅಳಿಯ ಸರ್ವೋತ್ತಮದೇವನೂ ಪ್ರಯಾಣ ಮಾಡಿದನು. ಅವರು ಶತ್ರುಗಳ ಸಂಗಡ ಧೈರ್ಯವಾಗಿ ಕಾದಾಡಿ ಮಡಿದುವೀರಸ್ವರ್ಗವನ್ನು ಹೊಂದಿದರು. ಯವನರಿಗೆ ಜಯವಾಗಿ, ದೇಶವು ಅವರ ವಶವಾಯಿತು ಆದರೆ ಅಲ್ಲಾವುದೀನನು ತನ್ನ ಪಾಲಕನೂ ಮಂತ್ರಿಶ್ರೇಷ್ಠನೂಆಗಿದ್ದ ಗಂಗಾಧರಭಟ್ಟನ ಆಣತಿಯಂತೆ ಧುಂಡಿರಾಜನ ಕಿರಿಯ ಮಗ ರಘುನಾಥ ನಾಯಕನಿಗೆ ಜಮಖಂಡಿ ಪ್ರಾಂತ್ಯದ ಆಧಿಪತ್ಯವನ್ನು ಮರಳಿ ವಹಿಸಿಕೊಟ್ಟನು. ಮುಸಲ್ಮಾನರು ದೇಶದ ನಾನಾ ಭಾಗಗಳಲ್ಲಿ ನಡೆಯಿಸಿದ್ದ ಭಯಂಕರ ಅತ್ಯಾಚಾರಗಳ ನೆನಪು ಇನ್ನೂ ಅಳಿಸಿರಲಿಲ್ಲ. ಅಲ್ಲದೆ ಯುವಕನಾದ ರಘುನಾಥನಾಯಕನು ತನ್ನ ತಂದೆ ಹಾಗೂ ಭಾವ ಸರ್ವೋತ್ತಮದೇವ ಇವರ ಅಕಾಲಮರಣದಿಂದ ವ್ಯಥಿತನಾಗಿದ್ದನು. ಈ ಕಾರಣಗಳಿಂದೆಲ್ಲ ಅರಸೊತ್ತಿಗೆಯು ಕಂಟಕಮಯವಾದುದೆಂದು ರಘುನಾಥನಾಯಕನು ನಿರ್ಧರಿಸಿದನು. ಅನಂತರ ಆತನು ತನ್ನ ರಾಜ್ಯವನ್ನೂ ಅದಕ್ಕೆ ಸಂಬಂಧಪಟ್ಟ ಸ್ವತ್ತುಗಳನ್ನೂ ನಾಲ್ಕು ಭಾಗಗಳಾಗಿ ವಿಂಗಡಿಸಿದನು ರಘುನಾಥ ನಾಯಕನು ಮಾನವೀ ಸಹಿತವಾದ ಅಗ್ರಭಾಗವನ್ನು ತನ್ನ ಹಿರಿಯ ಸಹೋದರ ನರಹರಿ ನಾಯಕನಿಗೂ, ಕಿರಿಯ ತವರೂರಂತಿದ್ದ ಪುರಂದರಗಡಸಹಿತವಾದ ಎರಡನೆಯ ಭಾಗವನ್ನು ಮತ್ತೊಬ್ಬ ಜ್ಯೇಷ್ಟ ಸಹೋದರ ಕೃಷ್ಣಪ್ಪ ನಾಯಕನಿಗೂ, ಮೂರನೆಯ ಭಾಗದ ಆಸ್ತಿಯನ್ನು ದೂರದೇಶದ ಯಾತ್ರಿಕರ ಸಹಾಯಾರ್ಥವಾಗಿ ದೇಶಾಂತರವ್ಯಾಪಾರದಲ್ಲಿ ನಿರತರಾಗಿದ್ದ ವರ್ತಕಮಂಡಲಿಯವರ ಆಡಳಿತಕ್ಕೂ ಉಳಿದ ನಾಲ್ಕನೆಯ ಭಾಗದ ಆಸ್ತಿಯನ್ನು ದ್ವೈತಸಿದ್ಧಾಂತ ಪ್ರಚಾರಕಾರ್ಯದಲ್ಲಿ ಬದ್ಧ ದೀಕ್ಷಿತರಾಗಿದ್ದ—ಪಂಡಿತಮಂಡಲಿಯವರಿಗೆ ಮಾಸಾಶನವನ್ನು ಸಲ್ಲಿಸುವುದಕ್ಕಾಗಿ ರಾಜರ ಮೇಲ್ವಿಚಾರಣೆಗೂ ಒಪ್ಪಿಸಿದನು. ಅನಂತರ ಅವನು ಸಿಂಹಾಸನವನ್ನು ತ್ಯಾಗಮಾಡಿ — ಮಲಖೇಡದಲ್ಲಿ

ತಪೋನಿರತರಾಗಿದ್ದ ತನ್ನ ಸಹೋದರರಾದ ಶ್ರೀಅಕ್ಷೋಭ್ಯಮುನಿಗಳಲ್ಲಿಗೆ ಹೋಗಿ ಅವರಿಂದ ಸಂನ್ಯಾಸಾಶ್ರಮದೀಕ್ಷೆಯನ್ನು ಕೈಗೊಂಡನು ಅಂದು ಮೊದಲು ಅವರಿಗೆ ಜಯತೀರ್ಥರೆಂದು ಹೆಸರಾಯಿತು. ಈ ಸಹೋದರರ ಒಲಿದಾನವು ರಾಜಕುವರನಾಗಿದ್ದ ಬುದ್ಧದೇವನು (ಸಿದ್ಧಾರ್ಥನು) ಸಿಂಹಾಸನ ವನ್ನು ತ್ಯಜಿಸಿ ಸಂನ್ಯಾಸ ದೀಕ್ಷೆಯನ್ನು ಕೈಗೊಂಡ ಸನ್ನಿವೇಶವನ್ನು ನೆನಪಿಗೆ ತರುತ್ತದೆ ಇಂಥಾ ಮಹಾಮಹಿಮರ ಅವತಾರದಿಂದ ಪವಿತ್ರವಾದ ಅರವತ್ತೊಕ್ಕಲು ಮನೆತನದ ಕೀರ್ತಿಯು ದಿಗಂತಗಳನ್ನು ಬೆಳಗಿಸಿತೆಂದರೆ ಅದರಲ್ಲಿ ಆಶ್ಚರ್ಯವೇನಿದೆ ? ಶ್ರೀಜಯತೀರ್ಥರು ಶ್ರೀಮನ್ಮಧ್ವಾಚಾರ್ಯರಿಂದ ರಚಿತವಾದ ಸರ್ವಮೂಲ ಗ್ರಂಥಗಳನ್ನು ಶ್ರೀಅಕ್ಷೋಭ್ಯ ತೀರ್ಥರ ಬಳಿ ಅಧ್ಯಯನ ಮಾಡಿದರು ಅಲ್ಲದೆ ಮಿತಭಾಷಿ ಶ್ರೀಮಧ್ವಾಚಾರ್ಯರ ಸೂತ್ರರೂಪ ಗ್ರಂಥಗಳಲ್ಲಿಯ ಗಂಭೀರವಾದ ಅರ್ಥಗಳನ್ನು ಸ್ಪಷ್ಟವಾಗಿ ಬೋಧಿಸುವ ಟೀಕೆಗಳನ್ನು ರಚಿಸಿ ಇಡೀ ಮಾಧ್ವಪ್ರಪಂಚಕ್ಕೆ ಚಿರಸ್ಮರಣೀಯವಾದ ಉಪಕಾರವನ್ನು ಇವರು ಮಾಡಿರುವರು,

## ಜಯತೀರ್ಥರ ಉತ್ತರಹಿಂದೂಸ್ತಾನದ ಪ್ರವಾಸ

ಕ್ರಿ ಶ ೧೩೬೫ರಲ್ಲಿ ಶ್ರೀಅಕ್ಷೋಭ್ಯತೀರ್ಥರು ವೃಂದಾವನಪ್ರವೇಶ ಮಾಡಿದರು ; ಆದುದರಿಂದ ದ್ವೈತಮತ ಪ್ರಚಾರ ಕಾರ್ಯದ ಮುಖ್ಯ ಜವಾಬ್ದಾರಿಯು ಶ್ರೀಜಯತೀರ್ಥರ ಹೆಗಲಿನ ಮೇಲೆ ಬಿದ್ದಿತು. ಇವರು ಕ್ರಿ. ಶ. ೧೩೭೦ನೇ ವರ್ಷದಲ್ಲಿ ಉತ್ತರಹಿಂದೂಸ್ಥಾನದ ಪ್ರವಾಸವನ್ನು ಕೈಗೊಂಡರು. ಬಹಮನೀ ಸುಲ್ತಾನ್ ಮಹಮದ್‌ನ ಮುಖ್ಯ ಮಂತ್ರಿ ಗಂಗಾಧರ ಜೋಯಿಸನು ಇವರ ಪ್ರಯಾಣಕ್ಕೆ ಬೇಕಾದ ಎಲ್ಲ ಅನುಕೂಲಗಳನ್ನೂ ಮುಂಚಿತವಾಗಿಯೇ ಸಜ್ಜುಗೊಳಿಸಿದ್ದನು ಇದರಿಂದ ಇವರ ದೂರದೇಶದ ಪ್ರಯಾಣವು ಸುಗಮವಾಗಿ ಸಾಗಿತು. ಇವರು ತಮ್ಮ ಪ್ರವಾಸ ಕಾಲದಲ್ಲಿ ದೆಹಲಿಗೆ ಹೋಗಿದ್ದರು. ಆಗ ತೊಗಲಖ್‌ಸಂತತಿಯ ಫಿರೋಜ್‌ಷಹನು ಸಿಂಹಾಸನವನ್ನಲಂಕರಿಸಿದ್ದನು. ಚಕ್ರವರ್ತಿಗೆ ಇವರ ಆಗಮನ ವೃತ್ತಾಂತವು ತಿಳಿಯಿತು ; ಆತನು ಇವರನ್ನು ಅರಮನೆಗೆ ಬರಮಾಡಿಕೊಂಡು ಯುಕ್ತರೀತಿಯಿಂದ ಸತ್ಕರಿಸಿದನು. ಫಿರೋಜ್‌ಷಹನು ಒಳ್ಳೆಯ ಮೇಧಾವಿಯೂ ವಿದ್ಯಾಪಕ್ಷಪಾತಿಯೂ ಆಗಿದ್ದನು.

ಇವರಿಬ್ಬರಿಗೂ ದೀರ್ಘಸಂಭಾಷಣೆಯು ಜರುಗಿತು ಅದು ಪೂರ್ವದಲ್ಲಿ ಶ್ರೀಮನ್ಮಧ್ವಾಚಾರ್ಯರಿಗೂ ಬಲ್ಬನ್‌ಚಕ್ರವರ್ತಿಗೂ ನಡೆದ ಸಂಭಾಷಣೆಯನ್ನು ಜ್ಞಾಪಕಕ್ಕೆ ತರುವಂತಿದ್ದಿತು. ಈ ಸಂಭಾಷಣಯಿಂದ ಫಿರೋಜ್‌ಷಹನು ಸಂತುಷ್ಟನಾದನು.

"ಇವರನ್ನು ಆನೆಯ ಮೇಲೆ ಕೂಡಿಸಿ ಸಕಲ ರಾಜಮರ್ಯಾದೆಗಳ ಸಮೇತ ನಗರದಲ್ಲಿ ಮೆರವಣಿಗೆ ಮಾಡಬೇಕು" ಎಂಬುದಾಗಿ ರಾಜಾಜ್ಞೆಯಾಯಿತು ಆದರೆ ಜಯತೀರ್ಥರು ಅದಕ್ಕೆ ಒಪ್ಪಲಿಲ್ಲ, ಅನಂತರ— ಶ್ರೀಮನ್ಮಧ್ವಾಚಾರ್ಯರ ಸರ್ವಮೂಲಗ್ರಂಥಗಳನ್ನು ಆನೆಯ ಮೇಲಿಟ್ಟು–ರಾಜಬೀದಿಗಳಲ್ಲಿ ಉತ್ಸವ ಮಾಡಿದರು ಶ್ರೀಜಯತೀರ್ಥರು ಉತ್ಸವವನ್ನು ಹಿಂಬಾಲಿಸಿದರು , ಪುರಜನರು ಮಹಾತೇಜಸ್ವಿಗಳಾದ ಇವರ ದರ್ಶನದಿಂದ ಹರ್ಷಿತರಾದರು. ದೆಹಲಿಯಲ್ಲಿ ಶ್ರೀಜಯತೀರ್ಥರಿಗೆ ದೊರೆತ ರಾಜಮರ್ಯಾದೆಯ ಹಿಂಬದಿಯಲ್ಲಿ ರಾಜಕೀಯ ಕಾರಣಗಳಿವೆ, ಆ ಕಾಲದಲ್ಲಿ ಅಲ್ಲಾವುದೀನನ ಮಗ ಮಹಮದನು ಬಹಮನೀ ರಾಜ್ಯದ ಸುಲ್ತಾನನಾಗಿದ್ದನು. ಆತನು ಷಾಷ್ಟಿಕಕುಲಕಂಠೀರವನಾದ ಗಂಗಾಧರಬಟ್ಟನಿಗೆ ತನ್ನ ರಾಜ್ಯದ ಸರ್ವಾಧಿಕಾರವನ್ನೂ ವಹಿಸಿದ್ದನು. ಜಯತೀರ್ಥರು ಗಂಗಾಧರನ ಬಂಧುವರ್ಗಕ್ಕೆ ಸೇರಿದವರಾಗಿದ್ದುದು ಮಾತ್ರವಲ್ಲದೆ ಆತನ ಗುರುಗಳಾದ ಶ್ರೀಅಕ್ಷೋಭ್ಯತೀರ್ಥರ ಸಹೋದರರೂ ಪ್ರಿಯ ಶಿಷ್ಯರೂ ಆಗಿದ್ದರು. ಈ ಕಾರಣಗಳಿಂದ — ಸುಲ್ತಾನ್ ಮಹಮದನು ಇವರ ಉತ್ತರ ಹಿಂದೂಸ್ಥಾನದ ಪ್ರವಾಸವೃತ್ತಾಂತವನ್ನು ದೆಹಲಿಯ ಚಕ್ರವರ್ತಿಗೆ ಮೊದಲೇ ಪತ್ರಮೂಲಕ ವಿಜ್ಞಾಪಿಸಿಕೊಂಡಿರಬೇಕೆಂದು ಊಹಿಸಲವಕಾಶವಿದೆ.

## ಶ್ರೀವಿದ್ಯಾರಣ್ಯಸ್ವಾಮಿಗಳು ಮತ್ತು ಶ್ರೀಜಯತೀರ್ಥರು

ಶ್ರೀವಿದ್ಯಾರಣ್ಯಸ್ವಾಮಿಗಳು ಉತ್ತರ ಹಿಂದೂಸ್ಥಾನ ಯಾತ್ರೆಯನ್ನು ಮುಗಿಸಿಕೊಂಡು ಹಿಂತಿರುಗಿದರು. ಆ ವೇಳೆಗೆ ಶ್ರೀಅಕ್ಷೋಭ್ಯತೀರ್ಥರು ಬೃಂದಾವನಸ್ಥರಾಗಿದ್ದರು. ಶ್ರೀಜಯತೀರ್ಥರು ಆ ಪಟ್ಟದಲ್ಲಿದ್ದರು. ಈ ವಿಚಾರವು ಶ್ರೀವಿದ್ಯಾರಣ್ಯಸ್ವಾಮಿಗಳಿಗೆ ಗೊತ್ತಾಯಿತು. ಆಗ ಅವರು

ಯರಗೊಳಕ್ಕೆ ಹೋಗಿ ಅಲ್ಲಿ ಗುಹೆಯಲ್ಲಿ ಕುಳಿತು ಗ್ರಂಥ ರಚನೆಮಾಡುತ್ತಲಿದ್ದ ಜಯತೀರ್ಥರನ್ನು ಕಂಡು ಮಾತನಾಡಿದರು ; ತಮ್ಮ ಮಿತ ರಾದ ಅಕ್ಷೋಭ್ಯ ತೀರ್ಥರ ನಿರ್ಯಾಣಕ್ಕಾಗಿ ಅನುತಾಪ ಪಟ್ಟರು. ಅನಂತರ ಶ್ರೀಜಯತೀರ್ಥರು ತಾವು ರಚಿಸಿದ್ದ ವ್ಯಾಖ್ಯಾನಗಳನ್ನು ಶ್ರೀವಿದ್ಯಾರಣ್ಯಸ್ವಾಮಿಗಳ ಮುಂದಿಟ್ಟರು. ಅವರು ಅವುಗಳನ್ನು ಆಮೂಲಾಗ್ರವಾಗಿ ಪರಿಶೀಲಿಸಿ ತಮ್ಮ ಉನ್ನತ ಮೆಚ್ಚುಗೆಯನ್ನು ವ್ಯಕ್ತಪಡಿಸಿದರು. ಶ್ರೀವಿದ್ಯಾರಣ್ಯರು ತಮ್ಮ ಮಿತ್ರರಾದ ಅಕ್ಷೋಭ್ಯ ತೀರ್ಥರಿಗೆ ಕೊಟ್ಟಿದ್ದ ಅಭಿವಚನದಂತೆ ಕಡೆತನಕ ಶ್ರೀಜಯತೀರ್ಥಯತಿ ಪುಂಗವರಲ್ಲಿ ಮೈತ್ರೀಭಾವದಿಂದಲೇ ವರ್ತಿಸುತ್ತಲಿದ್ದರು ಪ್ರಾಚೀನಕಾಲದ ಮತಾಚಾರ್ಯರು ತತ್ತ್ವಕ್ಕಾಗಿ ತಮ್ಮ ಪ್ರಾಣಕೊಡಲು ಸಿದ್ಧರಾಗಿದ್ದರಲ್ಲದೆ— ವೈಯುಕ್ತಿಕವಾಗಿ ದ್ವೇಷಾಸೂಯೆಗಳನ್ನು ಮಾಡುತ್ತಲಿರಲಿಲ್ಲ. ಇದರ ಸತ್ಯಾಂಶವನ್ನು ಪರೀಕ್ಷೆಯಿಂದ ಮನಗಾಣಲು ಈ ಮಹನೀಯರ ಆದರ್ಶ ಜೀವನವೇ ಒಂದ ಮುಖ್ಯ ನಿದರ್ಶನವಾಗಿದೆ.

ಕೆಲ ಅರ್ವಾಚೀನ ಲೇಖಕರು ಇದಕ್ಕೆ ವಿರುದ್ಧವಾಗಿ ಸ್ವಕಪೋಲಕಲ್ಪಿತವೂ ಅನೈತಿಹಾಸಿಕವೂ ಆದ ಹುಡುಗಾಟಿಕೆಯ ಬರವಣಿಗೆಗಳನ್ನು ಬರೆದು ವಿಪ್ರಸಮಾಜದಲ್ಲಿ ಆರಿಸಲಾಗದಂತಹ ಕಾಡುಗಿಚ್ಚನ್ನು ಹೊತ್ತಿಸಿರುವರು. ಈ ಲೇಖನಗಳನ್ನು ಸಕಾರಣವಾಗಿ ಖಂಡಿಸದೇ ಹೋದಲ್ಲಿ ನಾವು ನಮ್ಮ ಕರ್ತವ್ಯವನ್ನು ಪಾಲಿಸದಂತೆ ಆಗಲರಿಯದು. ಶ್ರೀವಿದ್ಯಾರಣ್ಯಸ್ವಾಮಿಗಳಿಗೂ ಶ್ರೀಅಕ್ಷೋಭ್ಯತೀರ್ಥರಿಗೂ ವಾದ ವಿವಾದಗಳಾಗಿ— ಶ್ರೀವಿದ್ಯಾರಣ್ಯ ಸ್ವಾಮಿಗಳು ಪರಾಜಿತರಾಗಿದ್ದ ಪಕ್ಷದಲ್ಲಿ ಆದನ್ನು ಶ್ರೀ ಜಯತೀರ್ಥರು ತಮ್ಮ ಗ್ರಂಥಾರಂಭದಲ್ಲಿ-ಗುರುಗುಣಗಾನ ಮಾಡುವ ಕಾಲದಲ್ಲಿ ಹೇಳಬೇಕಾಗಿದ್ದಿತು. ಶ್ರೀಜಯತೀರ್ಥರು ತಮ್ಮ "ತತ್ತ್ವ ಪ್ರಕಾಶಿಕಾ" ಗ್ರಂಥದ ಮಂಗಳಾಚರಣೆಯಲ್ಲಿ— ಶ್ರೀಅಕ್ಷೋಭ್ಯಗುರುಗಳನ್ನು ಸ್ತೋತ್ರ ಮಾಡಿರುವುದು ಗಮನಾರ್ಹವಾಗಿದೆ.

ಶ್ಲೋ ॥ ದುರ್ವಾದಿವಾರಣವಿದಾ ರಣದಕ್ಷದೀಕ್ಷ - ।
ಮಕ್ಷೋಭ್ಯತೀರ್ಥಮೃಗರಾಜಮಹಂ ನಮಾಮಿ ॥

ಅಶಾಸ್ತ್ರೀಯವಾಗಿ ವಾದ ಮಾಡುವಂತಹ ದುರ್ವಾದಿಗಳೆಂಬ ಆನೆಗಳನ್ನು ದಕ್ಷತೆಯಿಂದ ಸೀಳಿಹಾಕಲು ಕಂಕಣ ಬದ್ಧರಾದ ಶ್ರೀಅಕ್ಷೋಭ್ಯತೀರ್ಥರೆಂಬ ಕೇಸರಿಗೆ ನಾನು ನಮಸ್ಕಾರ ಮಾಡುವೆನು ಎಂದು ಮಾತ್ರ ಹೇಳಿರುತ್ತಾರೆ.

ಶ್ರೀಜಯತೀರ್ಥರ ಸಾಕ್ಷಾತ್ ಶಿಷ್ಯರಾದ ಶ್ರೀ ವ್ಯಾಸತೀರ್ಥರು ತಮ್ಮ ಗುರುಗಳ ಜೀವನ ಚರಿತ್ರೆಯನ್ನು "ಶ್ರೀಜಯತೀರ್ಥವಿಜಯ"ವೆಂಬುವ ಹೆಸರಿನಿಂದ ರಚಿಸಿದ್ದಾರೆ ಅವರೂ ತಮ್ಮ ಈ ಗ್ರಂಥದಲ್ಲಿ ಈ ಉಭಯ ಪಂಡಿತರಿಗೂ ಆದ ವಾದವಿವಾದ ವಿಚಾರಗಳನ್ನು ಪ್ರಸ್ತಾಪಿಸಿರುವುದಿಲ್ಲ ಹೀಗಿರಲಾಗಿ ಈ ಕಲ್ಪನಾಕಥೆಯ ವಿಷಬೀಜವನ್ನು ಬಿತ್ತಿದ ಕವಿಯು ಯಾರೆಂಬುದನ್ನು ವಿಮರ್ಶೆ ಮಾಡೋಣ, ಕ್ರಿ. ಶ ೧೬೭೫ನೇ ಸಂವತ್ಸರದಲ್ಲಿ ಸಂಕರ್ಷಣಾಚಾರ್ಯರೆಂಬ ಬ್ರಾಹ್ಮಣನಿದ್ದರು. ಅವರು "ಶ್ರೀಜಯತೀರ್ಥವಿಜಯ" ವೆನ್ನುವ ಗ್ರಂಥವನ್ನು ರಚಿಸಿದರು. ಅವರು ಗ್ರಂಥದಲ್ಲಿ, (ಸರ್ಗ–2–ಶ್ಲೋಕ-23)

ಶ್ಲೋ॥ ಅಕ್ಷೋಭ್ಯತೀರ್ಥಯತಿರಾಡಖಿಲೈರಭೇದ್ಯೋ
ದುರ್ವಾದಿವಾರಣವಿದಾರಣಕೇಸರೀಂದ್ರಃ
ಸತ್ತತ್ತ್ವಮಸ್ಯಭಿಧಾಸಿನಾ ಸ್ಮ ವಿದ್ಯಾ –
ರಣ್ಯಂ ಛಿನಕ್ತಿ ಪರಜೀವವಿಭೇದಿನಾ ತಮ್ ॥

ಎಂದು ಬರೆದಿರುವರು. ಅವರು ಶ್ರೀವಿದ್ಯಾರಣ್ಯಸ್ವಾಮಿಗಳೂ ಶ್ರೀಅಕ್ಷೋಭ್ಯತೀರ್ಥರೂ ನಿರ್ಯಾಣವಾಗಿ ೩೮೫ ವರ್ಷಗಳ ನಂತರ ಈ ಮೇಲೆ ಸೂಚಿಸಿದ ಗ್ರಂಥವನ್ನು ರಚಿಸಿದರು. ನಾಲ್ಕು ಶತಮಾನಗಳ ತರುವಾಯ ಆ ಗ್ರಂಥಕಾರರು ಈ ಹೊಸ ವಿಷಯವನ್ನು ತಮ್ಮ ಕವಿತೆಯಲ್ಲಿ ಅಳವಡಿಸಿ ಬ್ರಾಹ್ಮಣ ಸಮಾಜದ ಒಗ್ಗಟ್ಟನ್ನು ಮುರಿಯಲು ಪ್ರಯತ್ನಿಸಿದ ಮಹಾಪರಾಧಕ್ಕೆ ಉತ್ತರವಾದಿಯಾಗಿರುವರೆಂದು ಉಲ್ಲೇಖಿಸದೇ ಗತ್ಯಂತರವಿಲ್ಲ ಅನಂತರ ಕ್ರಿ. ಶ. ೧೭೬೦ ರಲ್ಲಿ ವಿಶಿಷ್ಟಾದ್ವೈತ ಮತಾನುಯಾಯಿಗಳಲ್ಲೊಬ್ಬರಾದ "ಶ್ರೀನಿವಾಸಮಹಾಸೂರಿ" ಎಂಬುವರು "ಶ್ರೀವೇದಾಂತದೇಶಿಕ ವೈಭವಪ್ರಕಾಶಿಕಾ" ಎಂಬ ಗ್ರಂಥವನ್ನು ಬರೆದರು ಅವರು ವೇದಾಂತದೇಶಿಕಾ

ಚಾರ್ಯರ ಇತಿಹಾಸವನ್ನು ಹೇಳುವ ಸಂದರ್ಭದಲ್ಲಿ "ಶ್ರೀ ಅಕ್ಷೋಭ್ಯತೀರ್ಥರಿಗೂ ಶ್ರೀವಿದ್ಯಾರಣ್ಯರಿಗೂ ವಾದ ವಿವಾದವು ಜರುಗಿದ ಕಾಲದಲ್ಲಿ–ಶ್ರೀವೇದಾಂತ ದೇಶಿಕಾ ಚಾರ್ಯರು ನ್ಯಾಯಾಧೀಶರಾಗಿ ಕೊನೆಯ ತೀರ್ಪನ್ನು ಹೇಳಿದರು" ಎಂದುಉಲ್ಲೇಖಿಸಿ ಸಂಕರ್ಷಣಾಚಾರ್ಯರ ಹೇಳಿಕೆಯನ್ನು ಎತ್ತಿ ಹಿಡಿದಿದ್ದಾರೆ. ಇವರ ತರುವಾಯ ಕ್ರಿ. ಶ ೧೭೮೩ರಲ್ಲಿ ಜೀವಿಸಿದ್ದ ದೈವಜ್ಞ ಭೀಮಾಚಾರ್ಯರೆಂಬುವರು "ಶ್ರೀಪೂರ್ಣಬೋಧಗುರುವಂಶಕಥಾಕಲ್ಪತರು" ಎಂಬ ಬೇರೊಂದು ಗ್ರಂಥವನ್ನು ಬರೆದಿರುವರು. ಅದರಲ್ಲಿ ಅವರು "ಅಸಿನಾ ತತ್ತ್ವಮಸಿನಾ ಪರಜೀವಪ್ರಭೇದಿನಾ । ವಿದ್ಯಾರಣ್ಯಮಹಾರಣ್ಯಮಕ್ಷೋಭ್ಯ ಮುನಿರಚ್ಛಿನತ್ ॥" ಎಂದು ಹಿಂದೆ ಹೇಳಿದ ಇಬ್ಬರಿಗಿಂತಲೂ ಹೆಚ್ಚು ಸ್ಪಷ್ಟವಾಗಿ ಹೇಳಿದ್ದಾರೆ. ಆಧುನಿಕ ಕಾಲದಲ್ಲಿ ಈ ಶ್ಲೋಕವೇ ಎಲ್ಲರ ಮುಖೋದ್ಗತವಾಗಿರುವುದು.

ಈ ಭೀಮಾಚಾರ್ಯರು ಗತಿಸಿದ ತರುವಾಯ ಕ್ರಿ. ಶ. ೧೦೮೩ರಲ್ಲಿ ಅದ್ವೈತಮತಾನುಯಾಯಿಗಳಲ್ಲೊಬ್ಬರಾದ ರಾಮಯೋಗೀಂದ್ರರೆಂಬುವರು ತಮ್ಮ ಮಾಧ್ವ ಮತ್ತು ರಾಮಾನುಜೀಯ ಮಿತ್ರರಿಬ್ಬರಿಗಿಂತಲೂ ಈ ವಿವಾದಾಸ್ಪದವಾದ ವಿಚಾರದಲ್ಲಿ ಒಂದು ಹೆಜ್ಜೆ ಮುಂದಿಟ್ಟಿರುವರೆಂಬುದನ್ನು ಅತ್ಯಂತ ವಿಷಾದದಿಂದ ತಿಳಿಸಬೇಕಾಗಿದೆ. ಈ ರಾಮಯೋಗೀಂದ್ರರು "ಮಣಿಮಂಜರೀ ಭೇದಿನೀ" ಎಂಬ ಹೆಸರಿನ ಒಂದು ಗ್ರಂಥವನ್ನು ರಚಿಸಿರುವರು, ಇದು ನಾರಾಯಣ ಪಂಡಿತಾಚಾರ್ಯರ—ಮಣಿಮಂಜರೀ ಗ್ರಂಥದ ಖಂಡನೆಯಾಗಿರುವುದು ಇದರಲ್ಲಿ ಈ ಕಲ್ಪನಾ ಕಥೆಗೆ ಇವರು ಬೇರೆ ರೂಪವನ್ನು ಕೊಟ್ಟಿದ್ದಾರೆ. ಅದೇನೆಂದರೆ : "ಇವರು ವೇದಾಂತದೇಶಿಕಾಚಾರ್ಯರನ್ನೇ ನ್ಯಾಯಾಧೀಶರನ್ನಾಗಿ ಮಾಡಿದ್ದರೂ ಈ ವಾದದ ಕೊನೆಯ ದಿನದ ರಾತ್ರಿ ಮಾಧ್ವರೂ ರಾಮಾನುಜೀಯರೂ ಸೋತು ಹೇಳದೆ ಕೇಳದೆ ಓಡಿಹೋದರು." ಈ ಕಾರಣಗಳಿಂದ ಈ ಮಹಾಮಹಿಮರೀರ್ವರಿಗೂ ವಾದ ವಿವಾದಗಳು ಜರುಗಿ ಒಬ್ಬರು ಇನ್ನೊಬ್ಬರನ್ನು ವಾದದಲ್ಲಿ ಗೆದ್ದರೆಂದು ಹೇಳುವುದು ವಿವಾದಾಸ್ಪದ ವಿಷಯ. ಈ ವಾದದ ಜಯಸ್ತಂಭವು ಮುಳುಬಾಗಿಲು ಸಮೀಪದಲ್ಲಿರುತ್ತೇಂಬುದಕ್ಕೆ ಉಪಷ್ಟಂಭಕವಾದ ಸಮರ್ಥನೆಯು ದೊರೆತಿಲ್ಲ. ಹೀಗಿದ್ದಾಗ್ಯೂ–ಇದಂದ

ಬ್ರಾಹ್ಮಣಸಮಾಜದಲ್ಲಿ ಆಗಿರುವ ಮತ್ತು ಆಗುತ್ತಲಿರುವ ಅನಾಹುತಗಳಿಗೆ ಕೊನೆ ಮೊದಲೇ ಇಲ್ಲ ಶ್ರೀವ್ಯಾಸತೀರ್ಥರಿಂದ ರಚಿತವಾದ "ಜಯತೀರ್ಥವಿಜಯ" ದಲ್ಲಿ ಹೇಳಿರುವುದಕ್ಕೂ ಸಂಕರ್ಷಣಾಚಾರ್ಯಪ್ರಣೀತಜಯತೀರ್ಥವಿಜಯ ದಲ್ಲಿ ಪ್ರತಿಪಾದಿಸಿರುವ ವಿವರಣೆಗೂ ಇರುವ ಕೆಲವು ಪರಸ್ಪರ ವ್ಯತ್ಯಾಸಗಳನ್ನು ಹೊರಗೆಡಹಿ—ಆ ಮೂಲಕ ಈ ಸಂಕರ್ಷಣಾಚಾರ್ಯರ ಹೇಳಿಕೆಯು ಅಸತ್ಯವಾಗಿರುತ್ತದೆಂಬುದನ್ನು ವಾಚಕರಿಗೆ ಮನದಟ್ಟು ಮಾಡಿಕೊಟ್ಟು ಈ ಪ್ರಕರಣವನ್ನು ಮುಕ್ತಾಯಗೊಳಿಸುತ್ತೇವೆ. ಶ್ರೀವ್ಯಾಸತೀರ್ಥವಿರಚಿತ "ಜಯತೀರ್ಥವಿಜಯ"ವೇ ಪ್ರಮಾಣವಾದುದು.

| ಶ್ರೀವ್ಯಾಸತೀರ್ಥಕೃತ ಜಯತೀರ್ಥವಿಜಯ | ಸಂಕರ್ಷಣಾಚಾರ್ಯರ ಜಯತೀರ್ಥವಿಜಯ |
| --- | --- |
| ೧ ಶ್ರೀಜಯತೀರ್ಥರಿಗೆ ಓರ್ವಳೇ ಪತ್ನಿ ಇದ್ದಳು. | ೧. ಶ್ರೀಜಯತೀರ್ಥರಿಗೆ ಈರ್ವರು ಪತ್ನಿಯರಿದ್ದರು. |
| ೨ ಶ್ರೀಜಯತೀರ್ಥರು ದುರ್ಗಾ ದೇವಿಯನ್ನು ಆರಾಧಿಸಿದರು | ೨. ಶ್ರೀಜಯತೀರ್ಥರು ಶಾರದಾ ದೇವಿಯನ್ನು ಒಲಿಸಿಕೊಂಡರು. |
| ೩. ಶ್ರೀಜಯತೀರ್ಥರು ಭೀಮಾನದಿ ಯಲ್ಲಿ ಬಾಯಿ ಹಾಕಿ ಉದಕ ಪಾನ ಮಾಡಿದರು | ೩ ಶ್ರೀಜಯತೀರ್ಥರು ಪಂಡರಾ ಪುರದ ಬಳಿ ಭೀಮಾ ನದಿಯಲ್ಲಿ ಬಾಯಿ ಹಾಕಿ ನೀರು ಕುಡಿದರು. |
| ೪ ತೇಜಸ್ವಿಗಳಾದ ಜಯತೀರ್ಥರನ್ನು ಚರ್ಮಚಕ್ಷುಗಳಿಂದ ನೋಡು ವುದಕ್ಕೆ ಅಸಮರ್ಥಳಾಗಿ-ಶಯ್ಯಾ ಗೃಹದಿಂದ ಹಿಂದಿರುಗಿ ಬಂದಳು. | ೪. ಗೃಹಿಣಿಯರನ್ನು ಹೆದರಿಸುವುದ ಕ್ಕೋಸ್ಕರ ಶ್ರೀಜಯತೀರ್ಥರು ಸರ್ಪರೂಪ ತಾಳಿದರು |
| ೫. ಶ್ರೀಅಕ್ಷೋಭ್ಯತೀರ್ಥರಿಗೂ ಶ್ರೀ ವಿದ್ಯಾರಣ್ಯರಿಗೂ ಆದ ವಾದ ವಿವಾದ ವಿಚಾರ ಇದರಲ್ಲಿಲ್ಲ. | ೫. ಶ್ರೀಅಕ್ಷೋಭ್ಯತೀರ್ಥರು ಶ್ರೀ ವಿದ್ಯಾರಣ್ಯರನ್ನು ವಾದದಲ್ಲಿ ಸೋಲಿಸಿದರು. |

ಇನ್ನು ಮುಂದೆಯಾದರೂ ನಮ್ಮ ಮತಬಾಂಧವರು ಇಂಥ ಸುಳ್ಳು ಕಥೆಗಳನ್ನೊಳಗೊಂಡ ಪ್ರಬಂಧಗಳು ಸಮಾಜದಲ್ಲಿ ಹರಡದಂತೆ ತಡೆಯುವ ಒಂದು ಯೋಜನೆಯನ್ನು ಕೂಡಲೆ ಕಾರ್ಯರೂಪಕ್ಕೆ ತರುವರೆಂದು ನಂಬ ಲಾಗಿದೆ. ಮತ್ತೆ ದೇಶದಲ್ಲಿ ಮಾನವ ಪ್ರೇಮದೀಪ ಬೆಳೆದು ಬಲಿಯಬೇಕಾ ಗಿರುವ ಐಕಮತ್ಯವನ್ನು ಸ್ಥಾಪಿಸಿ, ಸಮಾಜೋದ್ಧಾರ ಮಾಡುವ ಕಾರ್ಯದಲ್ಲಿ ಮತತ್ರಯರೂ ಕಂಕಣಬದ್ಧರಾಗುವಂತೆ ವಿಶ್ವನಾಥನೆನಿಸಿದ ಶ್ರೀಮನ್ನಾ ರಾಯಣನು ಪ್ರೇರಿಸಲೆಂದು ನಾವು ಹಾರೈಸುವೆವು.

## ಶ್ರೀರಾಜೇಂದ್ರತೀರ್ಥರು ಮತ್ತು ಶ್ರೀಜಯಧ್ವಜತೀರ್ಥರು

ಷಾಷ್ಟಿಕಮನೆಗಳಲ್ಲೊಂದಾದ ಭಾರತವಂಶದ ಸರ್ವೋತ್ತಮದೇವನಿಗೆ ಜಮಖೇಡಿಯ ಧುಂಡಿರಾಜನ ಹಿರಿಯ ಮಗಳನ್ನು ಕೊಟ್ಟು ವಿವಾಹವಾಗಿ ದ್ದಿತು. ಈತನಿಗ ಇಬ್ಬರು ಗಂಡು ಮಕ್ಕಳು ರಾಜದೇವ; ಜಯದೇವ. ಕ್ರಿ. ಶ. ೧೩೧೨ರಲ್ಲಿ ಹಿಂದೂಗಳಿಗೂ ಮುಸಲ್ಮಾನರಿಗೂ ಜರುಗಿದ ಕದನದಲ್ಲಿ ಸರ್ವೋತ್ತಮದೇವನು ಕಾದಾಡಿ ಮಡಿದನು. ಅದು ಮೊದಲು ಈ ಬಾಲಕರ ಸಂರಕ್ಷಣೆಯ ಭಾರವು ಸೋದರಮಾವ ರಘುನಾಥನಾಯಕ (ಶ್ರೀಜಯತೀರ್ಥರ) ರ ಮೇಲೆ ಬಿದ್ದಿತು. ಇವರು ರಾಜ್ಯತ್ಯಾಗ ಮಾಡಿ ಸಂನ್ಯಾಸವನ್ನು ಸ್ವೀಕರಿಸಿದು ದರಿಂದ—ಈ ಬಾಲಕರ ಪೋಷಣೆಯ ಜವಾಬ್ದಾರಿಯನ್ನು ವಯಸ್ಕರೂ ಆತ್ಮೀ ಯರೂ ಆಗಿದ್ದ ಭೀಮಾಚಾರ್ಯರಿಗೆ ವಹಿಸಿದರು. ಈ ಬಾಲಕರಿಗೆ ಉಪನಯನ ಸಂಸ್ಕಾರವಾದ ಬಳಿಕ ಅವರ ವಿದ್ಯಾಭ್ಯಾಸವು ಶ್ರೀಜಯತೀರ್ಥರ ನೇತೃತ್ವದಲ್ಲಿ ಆರಂಭವಾಯಿತು. ಈ ಚುರುಕು ಬುದ್ಧಿಯ ಬಾಲಕರು ಕೆಲವು ಸಂವತ್ಸರ ಗಳು ಕಳೆಯುವುದರೊಳಗಾಗಿ ವೇದವೇದಾಂಗಗಳಲ್ಲಿ ಪಾರಂಗತರಾದರು. ನ್ಯಾಯಶಾಸ್ತ್ರದಲ್ಲಿಯೂ ವೇದಾಂತಶಾಸ್ತ್ರದಲ್ಲಿಯೂ ಇವರು ಗಳಿಸಿದ ಪಾಂಡಿ ತ್ಯವು ಶ್ರೀಜಯತೀರ್ಥರಿಗೆ ಆಶ್ಚರ್ಯವನ್ನುಂಟು ಮಾಡಿತು. ಶ್ರೀಮನ್ಮಧ್ವಾ ಚಾರ್ಯರ ಸರ್ವಮೂಲ ಗ್ರಂಥಗಳೂ ಶ್ರೀಜಯತೀರ್ಥರ ವ್ಯಾಖ್ಯಾನ ಗ್ರಂಥ ಗಳೂ ಈ ಯುವಕರಿಗೆ ಕರತಲಾಮಲಕಗಳಾಗಿದ್ದವು. ದ್ವೈತಮತ ಸಿದ್ಧಾಂತ ದಲ್ಲಿ ಶ್ರೀಜಯತೀರ್ಥರನ್ನು ಬಿಟ್ಟರೆ ಇವರನ್ನು ಮೀರಿಸಿದ ಪಂಡಿತರು ಆ ಕಾಲ ದಲ್ಲಿ ಬೇರೆ ಯಾರೂ ಇರಲಿಲ್ಲ. ಈ ಅಣ್ಣ ತಮ್ಮಂದಿರಿಬ್ಬರಿಂದಲೂ ಮಾಧ್ವ

ಮತದ ಬೆಳವಣಿಗೆಗೆ ಹೆಚ್ಚು ಪ್ರಯೋಜನವಾಗುವುದೆಂದು ಶ್ರೀಜಯತೀರ್ಥರು ಮನಗಂಡರು.

ಆದುದರಿಂದ ಅವರು ಈ ಯುವಕರಿಗೆ ಕ್ರಿ. ಶ. ೧೩೮೫ನೆಯ ವರುಷ ದಲ್ಲಿ ಸಂನ್ಯಾಸವನ್ನು ಕೊಟ್ಟು ಹಿರಿಯಾತನಿಗೆ ಶ್ರೀರಾಜೇಂದ್ರತೀರ್ಥರೆಂತಲೂ ಕಿರಿಯಾತನಿಗೆ ಶ್ರೀಜಯಧ್ವಜತೀರ್ಥರೆಂತಲೂ ನಾಮಕರಣ ಮಾಡಿದರು. ದಕ್ಷಿಣಹಿಂದೂಸ್ಥಾನದಲ್ಲಿ ಪ್ರವಾಸ ಮಾಡುತ್ತಾ ಮಧ್ವಸಿದ್ಧಾಂತವನ್ನು ಜನತೆ ಯಲ್ಲಿ ಪ್ರಚಾರ ಮಾಡುವ ಹೊಣೆಗಾರಿಕೆಯನ್ನು ಶ್ರೀರಾಜೇಂದ್ರಗುರುಗಳಿಗೂ ಉತ್ತರಭಾರತದಲ್ಲಿ ಸಂಚರಿಸುತ್ತಾ ದ್ವೈತಸಿದ್ಧಾಂತದ ತಿರುಳನ್ನು ಜನ ಜಂಗುಳಿಯಲ್ಲಿ ಬೋಧಿಸುವ ಹೆಚ್ಚಿನ ಜವಾಬ್ದಾರಿಯ ಕೆಲಸವನ್ನು ಶ್ರೀಜಯ ಧ್ವಜತೀರ್ಥರಿಗೂ ವಹಿಸಿದರು. ಇವರಿಬ್ಬರ ಎಳೆತನದ ಪಾಲಕರಾಗಿದ್ದ ಭೀಮಾಚಾರ್ಯರಿಗೆ ಅವರ ಪ್ರಾರ್ಥನೆಯಂತೆ ಶ್ರೀಜಯತೀರ್ಥರು–ಚತುರ್ಥಾ ಶ್ರಮವನ್ನು ದಯಪಾಲಿಸಿ–ಕೂಡಲಿ ಕ್ಷೇತ್ರದಲ್ಲಿ ಶ್ರೀವಿದ್ಯಾರಣ್ಯ ಸ್ವಾಮಿ ಗಳಿಂದ ತಮ್ಮ ಮಿತ್ರರಾದ ಶ್ರೀಅಕ್ಷೋಭ್ಯತೀರ್ಥರಿಗೋಸ್ಕರ ನಿರ್ಮಿಸಿದ್ದ ತಪೋಮಂಟಪದಲ್ಲಿದ್ದುಕೊಂಡು ತಪಾಧ್ಯನುಷ್ಠಾನಗಳಲ್ಲಿ ಉಳಿದ ಜೀವಿತ ಕಾಲವನ್ನು ಕಳೆಯತಕ್ಕುದೆಂದು ನಿಯಮಿಸಿದರು. ಹೀಗಿರಲಾಗಿ ಶ್ರೀಜಯ ತೀರ್ಥರು ಕ್ರಿ ಶ ೧೩೮೮ನೆಯ ವರ್ಷದಲ್ಲಿ ಬೃಂದಾವನಸ್ಥರಾದರು. ತರುವಾಯ ಶ್ರೀರಾಜೇಂದ್ರತೀರ್ಥರು ಮಾಧ್ವಮತ ಚಾಲಕತ್ವದ ಮುಖ್ಯಾಧಿ ಕಾರಿಗಳಾಗಿ ದಕ್ಷಿಣಾ ಪಥದಲ್ಲಿ ಸಂಚರಿಸುತ್ತಾ ತತ್ತ್ವೋಪದೇಶಗಳಲ್ಲಿ ನಿರತ ರಾಗಿದ್ದರು.

## ಶ್ರೀಜಯಧ್ವಜತೀರ್ಥರು

ಗುರುಗಳಾದ ಶ್ರೀಜಯತೀರ್ಥರ ಉಪದೇಶವಾಕ್ಯಗಳು ಶ್ರೀಜಯ ಧ್ವಜತೀರ್ಥರ ಕಿವಿಗಳಲ್ಲಿ ನಾದ ಮಾಡುತ್ತಲಿದ್ದವು. ಅವುಗಳನ್ನು ಕಾರ್ಯ ರೂಪಕ್ಕೆ ತರಲು ಇವರು ಕ್ರಿ. ಶ ೧೩೮೯ರಲ್ಲಿ ಮಿತಪರಿವಾರದೊಂದಿಗೆ ಉತ್ತರದೇಶಾಭಿಮುಖವಾಗಿ ಪ್ರಯಾಣ ಬೆಳೆಸಿದರು. ಇವರು ತಮ್ಮ

ಪ್ರವಾಸದ ಹೆಚ್ಚಿನ ಕಾಲವನ್ನು ವಂಗದೇಶದಲ್ಲಿ ವಿನಿಯೋಗಿಸಿದರು. ದ್ವೈತ ಮತಬೀಜಾರೋಪಣೆಗೆ ವಂಗ ದೇಶವು ಫಲವತ್ತಾದ ಕ್ಷೇತ್ರವೆಂದು ಇವರಿಗೆ ಮನವರಿಕೆಯಾಯಿತು ಆ ದೇಶದಲ್ಲಿ ಅಮಿತಸಂಖ್ಯಾಕ ಅಜೇಯ ತಾರ್ಕಿಕರಿದ್ದರು ಜಯಧ್ವಜತೀರ್ಥರು ಇವರೊಡನೆ ಶಾಸ್ತ್ರಾರ್ಥಗಳನ್ನು ಕುರಿತು ವ್ಯಾಕ್ಯಾರ್ಥಮಾಡಿದರು.

ಜಯಧ್ವಜತೀರ್ಥರ ಭಾಷಾ ವೈಖರಿ, ವಾಕ್ಯಜೋಡನೆ ಅರ್ಥಗರ್ಭಿತವೂ ಮಿತವೂಹಿತವೂ ಆದ ಭಾಷಣಗಳು ವಂಗದೇಶದ ವಿದ್ವನ್ಮಂಡಲಿಯ ಚಿತ್ತವನ್ನಾಕರ್ಷಿಸಿದುವು ಅವರಲ್ಲನೇಕರು ದ್ವೈತಮತಸಿದ್ಧಾಂತಗಳನ್ನು ಅಂಗೀಕರಿಸಿ ಇವರ ಅನುಯಾಯಿಗಳಾಗಲು ಮುಂದೆ ಬಂದರು ಇಲ್ಲಿ ಇವರು ತಮ್ಮ ಹೆಸರಿನ ಒಂದು ಮಠವನ್ನು ಸ್ಥಾಪಿಸಿ–ಕೆಲಕಾಲ ಅಲ್ಲಿಯೇ ವಾಸವಾಗಿದ್ದು ಕೊಂಡು–ಮಧ್ವಮತಸಿದ್ಧಾಂತಗಳನ್ನು ಜನರಿಗೆ ಬೋಧಿಸಿದರು. ಹೀಗೆ ಇವರು ವಂಗದೇಶದಲ್ಲಿ ಹಿಂದುಳಿದಿದ್ದ-ವೈಷ್ಣವ ಧರ್ಮದಲ್ಲಿ ನವ ಚೈತನ್ಯವನ್ನು ತುಂಬಿ ಅದನ್ನು ಭದ್ರವಾದ ಅಡಿಗಲ್ಲ ಮೇಲೆ ಸ್ಥಾಪಿಸಿದರು ಶ್ರೀಮಾನ್ ರಾಯ "ಸಾಹೇಬ್"ದಿನೇಶ ಚಂದ್ರಸೇನರು ರಚಿಸಿರುವ ಚೈತನ್ಯ ಮತ್ತು ಅವರ ಅನುಯಾಯಿಗಳು" ಎಂಬ ಗ್ರಂಥದಲ್ಲಿ ಈ ವಿಚಾರವನ್ನು ಪ್ರಸ್ತಾಪಿಸಿರು ತ್ತಾರೆ ಬಂಗಾಳದೇಶದ ಮತಾಚಾರ್ಯರಾದ ಚೈತನ್ಯ ಮುಂತಾದವರು ಇವರ ಮತಾನುಯಾಯಿಗಳಲ್ಲಿ ಪ್ರಮುಖರು. ಶ್ರೀಜಯಧ್ವಜತೀರ್ಥರ ದೀರ್ಘ ಪ್ರಯತ್ನದ ಫಲವಾಗಿ–ಉತ್ತರ ಹಿಂದೂಸ್ಥಾನದಲ್ಲಿ ದ್ವೈತಸಿದ್ಧಾಂತವು ಬೇರೂರಿತು. ಅಲ್ಲದೆ ಬಲದೇವ ಮತ್ತು ವನಮಾಲಿ ಮಿಶ್ರರಂತಹ ಪಂಡಿತರು ಪ್ರಬಲರಾಗಿ ದ್ವೈತಮತದ್ಯೋತಕಗಳಾದ ವೇದಾಂತದ ಉದ್ಗ್ರಂಥಗಳನ್ನು ರಚಿಸಿ ಅಜರಾಮರವಾದ ಕೀರ್ತಿಯನ್ನು ಗಳಿಸಿದರು. ಶ್ರೀಜಯಧ್ವಜತೀರ್ಥರೂ ಶ್ರೀಮನ್ಮಧ್ವಾಚಾರ್ಯರಂತೆಯೇ ಬದರಿಕಾಶ್ರಮಕ್ಕೆ ಪ್ರಯಾಣ ಬೆಳೆಸಿದರು. ಇವರು ಹಿಮಾಲಯಪರ್ವತದ ಶಾಂತಾವರಣದಲ್ಲಿ ಬದರೀವೃಕ್ಷದಡಿಯಲ್ಲಿ–ಶ್ರೀವೇದವ್ಯಾಸದೇವರ ಸನ್ನಿಧಿಯಲ್ಲಿ ಸಶರೀರವಾಗಿ ಈಗಲೂ ತಪೋನಿರತ ರಾಗಿದ್ದಾರೆಂಬ ನಂಬುಗೆಯು ಮಾಧ್ವ ಸಮಾಜದಲ್ಲಿ ನೆಲೆಗೊಂಡಿದೆ.

## ಶ್ರೀಪುರುಷೋತ್ತಮತೀರ್ಥರು ಮತ್ತು ಅವರ ನಾಲ್ಕು ಮಂದಿ ಸಹೋದರರು

ಅರವತ್ತೊಕ್ಕಲುಪಂಗಡದವರ ೧೪ ಗೋತ್ರಗಳಲ್ಲಿ ವಿಶ್ವಾಮಿತ್ರ ಗೋತ್ರವೂ ಒಂದಾಗಿದೆ. ಈ ಗೋತ್ರಕ್ಕೆ ೬ ಮನೆತನಗಳುಂಟು, ಇವರಲ್ಲಿ ಬೆಟ್ಟದವರ ಮನೆತನವು ಹೆಸರುವಾಸಿಯಾದುದು. ಇವರು ಆದಿಯಿಂದಲೂ ವೈದಿಕಧರ್ಮಾವಲಂಬಿಗಳು. ಶಾಸ್ತ್ರಾಧ್ಯಯನ, ಪಾರಪ್ರವಚನಾದಿಗಳೇ ಇವರ ಅನುವಂಶೀಕವಾದ ಕರ್ತವ್ಯಗಳು. ಉಳಿದೆಲ್ಲ ಷಾಷ್ಟಿಕರೂ ಈ ವಂಶೀಯರನ್ನು ಪೂಜ್ಯಭಾವದಿಂದ ಕಾಣುತಲಿದ್ದರು; ಈಗಲೂ ಇವರಿಗೆ ಈ ಮರ್ಯಾದೆಯು ಸಲ್ಲುತ್ತಲಿದೆ. ಈ ಮನೆತನದ ತಿಮ್ಮಣ್ಣಭಟ್ಟರೆಂಬ ಸದ್ಗೃಹಸ್ಥರೊಬ್ಬರು ತಿರುಪತಿಯ ಶ್ರೀನಿವಾಸದೇವರ ಸಂದರ್ಶನಕ್ಕಾಗಿ ಸಂಸಾರಸಮೇತರಾಗಿ ಪ್ರಯಾಣ ಬೆಳೆಸಿದರು. ಮಧ್ಯಮಾರ್ಗದಲ್ಲಿ ಚಂದ್ರಗಿರಿಯಲ್ಲಿ ಅವರು ಉಳಿದುಕೊಂಡರು. ಒಂದು ದಿನ ಪ್ರಾತಃಕಾಲ ಆಗಿನ ಕಾಲದ ಪದ್ಧತಿಯಂತೆ ತಿಮ್ಮಣ್ಣಭಟ್ಟರು ಶೌಚವಿಧಿಗೋಸ್ಕರವಾಗಿ ಬೆಟ್ಟದ ಬುಡಕ್ಕೆ ಹೋದರು. ಶೌಚವಿಧಿಯನ್ನು ಪೂರೈಸಿಕೊಂಡು ಹಿಂದಿರುಗುವ ಸಮಯದಲ್ಲಿ—ಒಂದು ಗುಹೆಯ ಹತ್ತಿರ ಎರಡು ಹುಲಿಯ ಮರಿಗಳು ತಾಯಿಯನ್ನರಿಸಿ ಆರ್ತನಾದ ಮಾಡುತಲಿರ್ದುದು ಕಂಡು ಬಂದಿತು. ಆಗ ಅವರು ಆ ಎರಡು ವ್ಯಾಘ್ರಶಾಬಕಗಳನ್ನು ಕೊಂಕಳುಗಳಲ್ಲಿ ಔಕಿಕೊಂಡು ನೇರವಾಗಿ ಆರ ಮನೆಯ ದಾರಿಯನ್ನು ಹಿಡಿದರು. ಆ ಕಾಲದಲ್ಲಿ ನರಹರಿವರ್ಮನೆಂಬಾತನು ಚಂದ್ರಗಿರಿಯಲ್ಲಿ ರಾಜ್ಯಭಾರ ಮಾಡುತ್ತಲಿದ್ದನು. ಆತನು ಒಳ್ಳೆಯ ದೈವಭಕ್ತನೂ ಸನಾತನಧರ್ಮ ಪಾಲಕನೂ ಆಗಿದ್ದನು. ರಾಜಚಾರರು ತಿಮ್ಮಣ್ಣಭಟ್ಟರ ಆಗಮನವೃತ್ತಾಂತವನ್ನು ದೊರೆಗೆ ಅರಿಕೆ ಮಾಡಿದರು. ದೀರ್ಘಕಾಯರೂ ಗೌರಾಂಗರೂ ಮಹಾತೇಜಸ್ವಿಗಳೂ ಆಗಿದ್ದ ತಿಮ್ಮಣ್ಣಭಟ್ಟರನ್ನು ಕಂಡ ಕೂಡಲೇ ನರಹರಿವರ್ಮನು ಆಸನದಿಂದ ಮೇಲೆದ್ದು—ಅವರನ್ನು ಅರ್ಘ್ಯಪಾದ್ಯಾಚಮನಾದಿಗಳಿಂದ ಸತ್ಕರಿಸಿದನು ತಿಮ್ಮಣ್ಣಭಟ್ಟರು ವೇದೋಕ್ತ ಮಂತ್ರಗಳಿಂದ ರಾಜನಿಗೆ ಆಶೀರ್ವಾದಗಳನ್ನು ಮಾಡಿ ತಮಗೆ ಬೆಟ್ಟದ ಬುಡದಲ್ಲಿ ಸಿಕ್ಕಿದ ಎರಡು ವ್ಯಾಘ್ರಶಾಬಕಗಳನ್ನು ಪಾರಿತೋಷಕವಾಗಿ ಕೊಟ್ಟರು.

ನರಹರಿವರ್ಮನು ತಿಮ್ಮಣ್ಣಭಟ್ಟರನ್ನು ಕೆಲಕಾಲ ಚಂದ್ರಗಿರಿಯಲ್ಲಿಯೇ ಇರಬೇಕೆಂದು ಪ್ರಾರ್ಥಿಸಿದನು. ರಾಜನ ಅಪ್ಪಣೆಯಂತೆ ಅವರ ವಾಸಕ್ಕೆ ಎಲ್ಲ ಅನುಕೂಲಗಳೂ ಸಿದ್ಧವಾದುವು. ತಿಮ್ಮಣ್ಣಭಟ್ಟರ ಪಾಂಡಿತ್ಯ-ಅವರ ಸತ್ಯಸಂಧತೆ, ಸದಾಚಾರ ಮುಂತಾದ ಅಮೋಘಗುಣಗಳು ನರಹರಿವರ್ಮನ ಮನಸ್ಸನ್ನು ಸೆಳೆದುವು. ಆತನು ಒಂದು ದಿನ ತಿಮ್ಮಣ್ಣಭಟ್ಟರನ್ನು ಕುರಿತು "ಇಂದು ಮೊದಲು ತಿರುಪತಿ ವೇಂಕಟಗಿರಿ ದೇವಾಲಯದ ಧರ್ಮಕರ್ತ ರಾಗಿ ಶ್ರೀನಿವಾಸದೇವರ ಪೂಜೆ, ಉತ್ಸವ, ಆರಾಧನೆ ಮುಂತಾದುವುಗಳು ಕ್ರಮವಾಗಿ ನಡೆಯುವಂತೆ ನೋಡಿಕೊಳ್ಳುವ ಜವಾಬ್ದಾರಿಯು ನಿಮ್ಮದಾಗಿದೆ. ದೇವಾಲಯದ ಎಲ್ಲ ನೌಕರರೂ ನಿಮ್ಮ ಆಜ್ಞಾನುವರ್ತಿಗಳಾಗಿರುವರು. ದೇವಸ್ಥಾನದ ಬೀಗಮುದ್ರೆಗಳು ಇಲ್ಲಿವೆ. ಇವುಗಳನ್ನು ನೀವು ಸ್ವೀಕರಿಸ ಬೇಕು" ಎಂದು ಹೇಳಿದನು. ಈ ಅರ್ಥವನ್ನೊಳಗೊಂಡ ರಾಜಾಜ್ಞೆಯು ಆ ಕೂಡಲೇ ರಾಜಧಾನಿಯಲ್ಲಿ ಪ್ರಕಟವಾಯಿತು. ಇವು ಹೊರತು ನರಹರಿ ವರ್ಮನು ತಿಮ್ಮಣ್ಣಭಟ್ಟರನ್ನುದ್ದೇಶಿಸಿ "ಸ್ವಾಮಿ, ನೀವು ನಮ್ಮ ಕುಲಗುರು ಗಳಾಗಿದ್ದುಕೊಂಡು ನಮ್ಮ ಶ್ರೇಯೋಭಿವೃದ್ಧಿಯನ್ನು ಕೋರುತ್ತಾ ಇಲ್ಲಿಯೇ ವಾಸವಾಗಿರಬೇಕೆಂದು" ಪ್ರಾರ್ಥಿಸಿದನು. ರಾಜನ ವಿನಯಾದಿಸದ್ಗುಣಗಳಿಂದ ಸಂತುಷ್ಟರಾದ ತಿಮ್ಮಣ್ಣಭಟ್ಟರು-ಅರಸನ ಅರಿಕೆಯನ್ನು ಮನ್ನಿಸಿ ದೈವದತ್ತ ವಾದ ಅಧಿಕಾರಗಳನ್ನು ವಹಿಸಿಕೊಂಡರು. ಅದು ಮೊದಲು ಈ ತಿಮ್ಮಣ್ಣ ಭಟ್ಟರ ಮನೆತನಕ್ಕೆ "ಬೆಟ್ಟಾಚಾರ್ಯ"ರೆಂಬುವ ಶ್ರೇಷ್ಠವಾದ ಹೆಸರೂ ಗೌರ ವವೂ ಬಂದಿತು. ಇವರ ಪೀಳಿಗೆಯಲ್ಲಿ ಶೇಷಗಿರಿಶರ್ಮ ಮತ್ತು ಭೀಮಶರ್ಮ ರೆಂಬುವ ಇಬ್ಬರು ಸಹೋದರರಿದ್ದರು. ಇವರಲ್ಲಿ ಹಿರಿಯರಾದ ಶೇಷಗಿರಿ ಶರ್ಮರಿಗೆ ಜಮಖಂಡಿಯ ಧುಂಡಿರಾಜನ ಕಿರಿಯ ಜಾಮಾತನೂ ಬನ್ನೂರು ಪ್ರಾಂತ್ಯದ ಮಾಂಡಲಿಕನೂ ಆಗಿದ್ದ ವಲ್ಲಭದೇವನ ಪುತ್ರಿ ಭಾರತೀದೇವಿ ಯನ್ನು ಕೊಟ್ಟು ವಿವಾಹವಾಗಿದ್ದಿತು. ಇವರಿಗೆ ಐವರು ಗಂಡು ಮಕ್ಕಳಿದ್ದರು; ತಂದೆಯು ಇವರಿಗೆ ಸಕಾಲದಲ್ಲಿ ಉಪನಯನ ಸಂಸ್ಕಾರವನ್ನು ನೆರವೇರಿ ಸಿದನು.

ಆಗಿನ ಕಾಲದಲ್ಲಿ-ಈಗಿನಂತೆ ಸರ್ಕಾರದಿಂದ ಸ್ಥಾಪಿತವಾದ ವಿದ್ಯಾನಿಲಯ ಗಳಿರಲಿಲ್ಲವಾಗಿ-ಪ್ರೌಢಶಿಕ್ಷಣವನ್ನು ಪಡೆಯಲಪೇಕ್ಷಿಸಿದ ವಿದ್ಯಾರ್ಥಿಗಳು ಮಠ

ಸಂಸ್ಥೆಗಳಿಗೆ ಹೋಗಬೇಕಾಗಿದ್ದಿತು. ಈ ಪದ್ಧತಿಗನುಗುಣವಾಗಿ ಶೇಷಗಿರಿ ಶರ್ಮರು ತಮ್ಮ ಮಕ್ಕಳನ್ನು ಶ್ರೀರಾಜೇಂದ್ರತೀರ್ಥರ ಮಠಕ್ಕೆ ಉಚ್ಚ ಶಿಕ್ಷಣಕ್ಕಾಗಿ ಕಳುಹಿಸಿದರು ಇವರು ಶ್ರೀರಾಜೇಂದ್ರತೀರ್ಥರಿಗೆ ತಂಗಿಯ ಮಕ್ಕಳು ಅಂದರೆ ಸೋದರ ಅಳಿಯಂದಿರು ಶ್ರೀರಾಜೇಂದ್ರತೀರ್ಥರು ಆತ್ಮೀಯರಾದ ಇವರನ್ನು ಆದರಿಸುತ್ತಲೂ ಇವರ ಶಿಕ್ಷಣದ ಮೇಲ್ವಿಚಾರಣೆಯನ್ನು ತಾವೇ ನೋಡಿಕೊಳ್ಳುತ್ತಲೂ ಇದ್ದರು. ಇವರಲ್ಲಿ ಪ್ರತಿಯೊಬ್ಬನೂ ಚತುಶ್ಶಾಸ್ತ್ರಗಳನ್ನು ಕ್ರಮವಾಗಿ ಅಧ್ಯಯನ ಮಾಡಿ ಅವುಗಳಲ್ಲಿ ಅನುಪಮ-ಪಾಂಡಿತ್ಯವನ್ನು ಗಳಿಸಿದನು. ಶ್ರೀರಾಜೇಂದ್ರತೀರ್ಥರೇ ಸಾಕ್ಷಾತ್ತಾಗಿ ಇವರಿಗೆ ದ್ವೈತವೇದಾಂತ ಶಾಸ್ತ್ರ ಪಾಠವನ್ನು ಹೇಳಿದರು ವೈರಾಗ್ಯವು ಇವರ ಹುಟ್ಟುಗುಣವಾಗಿದ್ದಿತು. ಇವರಲ್ಲಿ ಯಾರೂ ಗೃಹಸ್ಥಾಶ್ರಮಧರ್ಮವನ್ನು ಅವಲಂಬಿಸಲು ಇಷ್ಟಪಡಲಿಲ್ಲ. ಕಾಲಕ್ರಮದಲ್ಲಿ ಈ ಐದು ಜನರೂ ಸಂನ್ಯಾಸಾಶ್ರಮದೀಕ್ಷೆಯನ್ನು ಕೈಗೊಂಡರು ಇವರಿಗೆ ಅನುಕ್ರಮವಾಗಿ ಶ್ರೀಪುರುಷೋತ್ತಮತೀರ್ಥರೆಂತಲೂ, ಸ್ವರ್ಣವರ್ಣತೀರ್ಥರೆಂತಲೂ ಬ್ರಹ್ಮಣ್ಯತೀರ್ಥರೆಂತಲೂ, ಲಕ್ಷ್ಮೀನಾರಾಯಣತೀರ್ಥರೆಂತಲೂ, ಸುರೇಂದ್ರತೀರ್ಥರೆಂತಲೂ, ಹೆಸರಾಯಿತು.

ಶ್ರೀರಾಜೇಂದ್ರತೀರ್ಥರು ಕ್ರಿ. ಶ ೧೪೦೪ನೆಯ ವರ್ಷಾಂತ್ಯದಲ್ಲಿ ಕುಂಭಕೋಣೆಯಲ್ಲಿ ವೃಂದಾವನಪ್ರವೇಶ ಮಾಡಿದರೆಂದು ಸಂಶೋಧನೆಯಿಂದ ಬೆಳಕಿಗೆ ಬಂದಿದೆ. ಅವರ ತರುವಾಯ ಶ್ರೀಪುರುಷೋತ್ತಮತೀರ್ಥರು ಮಠಾಧಿಪತಿಗಳಾದರು ಅವರು ದೀರ್ಘಕಾಲ ಆ ಮಠಾಧಿಪತ್ಯದ ಹೊಣೆಗಾರಿಕೆಯನ್ನು ವಹಿಸಿರಲಿಲ್ಲ. ಒಂದು ವರ್ಷ ಕಾಲಾವಧಿಯಲ್ಲಿಯೇ ಅವರು ಸಶರೀರರಾಗಿ ಗುಹಾಪ್ರವೇಶವನ್ನು ಮಾಡಿದರೆಂದು ಒಂದು ದಂತ ಕಥೆಯು ಮಧ್ವ ಸಮಾಜದಲ್ಲಿ ರೂಢಮೂಲವಾಗಿದೆ. ಈ ಗುಹೆಯು ಈಗಿನ ಚನ್ನಪಟ್ಟಣಕ್ಕೆ ಸಮೀಪವಾಗಿರುವ ಅಬ್ಬೂರು ಗ್ರಾಮದ ಹೊರಭಾಗದಲ್ಲಿದೆ. ಇದನ್ನು ಶ್ರೀಪುರುಷೋತ್ತಮತೀರ್ಥರ ಗುಹೆಯೆಂಬ ಹೆಸರಿನಿಂದ ಜನರು ಕರೆಯುವರು. ಇವರ ತರುವಾಯ ಶ್ರೀಬ್ರಹ್ಮಣ್ಯತೀರ್ಥರು ಮಾಧ್ವಮತ ಸಂಸ್ಥೆಯ ಸ್ಥಾನಪತಿಗಳಾದರು. ಸ್ವರ್ಣವರ್ಣರು ದೇಶದೆಲ್ಲೆಡೆಯಲ್ಲಿಯೂ ಸಂಚರಿಸುತ್ತಾ ಮತಪ್ರಚಾರ ಕಾರ್ಯದಲ್ಲಿ ನಿರತರಾಗಿದ್ದು-ಶ್ರೀರಂಗಕ್ಷೇತ್ರದಲ್ಲಿ

ಬೃಂದಾವನಸ್ಥರಾದರು. ಅವರ ಉತ್ತರಾಧಿಕಾರಿಗಳಾದ ಶ್ರೀಪಾದ ರಾಯರು ತಮ್ಮ ಅನುವಂಶೀಕವಾಗಿ ನಡೆದು ಬರುತ್ತಲಿದ್ದ ತಿರುಪತಿ ವೆಂಕಟಗಿರಿ ದೇವಾಲಯದ ಧರ್ಮಕರ್ತೃತ್ವಾಧಿಕಾರವನ್ನೂ ಚಂದ್ರಗಿರಿರಾಜರ ಕುಲಗುರು ಪದವಿಯನ್ನೂ ಅಲಂಕರಿಸಿ— ಕೆಲಕಾಲ ಚಂದ್ರಗಿರಿಯಲ್ಲಿಯೂ ಸ್ವಲ್ಪಕಾಲ ತಿರುಪತಿಯ ಬೆಟ್ಟದ ಮೇಲೂ ಉಳಿದಕಾಲ ಮುಳುಬಾಗಿಲಿನ ಮಠದಲ್ಲಿಯೂ ಇರುತ್ತಲಿದ್ದರು. ಐದನೆಯವರಾದ ಶ್ರೀಸುರೇಂದ್ರತೀರ್ಥರು ಕುಂಭಕೋಣ ದಲ್ಲಿ ಶ್ರೀರಾಜೇಂದ್ರತೀರ್ಥರ ಮಠಾಧಿಪತಿಗಳಾಗಿ ಪ್ರಸಿದ್ಧರಾಗಿದ್ದರು.

## ಶ್ರೀವ್ಯಾಸರಾಯಸ್ವಾಮಿಗಳು

ಗಂಗರಾಜರ ಕಾಲದಲ್ಲಿ ಈಗಿನ ತಿರಮಕೂಡ್ಲು ತಾಲ್ಲೂಕಿಗೆ ಸೇರಿದ ಬನ್ನೂರು ಗ್ರಾಮವು ಒಳ್ಳೆಯ ವೈಭವದಿಂದ ಮೆರೆಯುತ್ತಿದ್ದಿತು. ಈ ಒನ್ನೂರು ಪ್ರಾಂತ್ಯದ ಮಾಂಡಲಿಕನಾಗಿದ್ದ ವಲ್ಲಭದೇವನು ಜಮಖಂಡಿನಾಡೊಡೆಯ ನಾಗಿದ್ದ ಧುಂಡಿರಾಜನ ಅಳಿಯಂದಿರಲ್ಲೊಬ್ಬನಾಗಿದ್ದನೆಂದು ಈ ಗ್ರಂಥದ ಪೂರ್ವಾಧ್ಯಾಯಗಳಲ್ಲಿ ನಿರೂಪಿಸಿದ್ದೇವೆ. ಈತನ ತರುವಾಯ ಬನ್ನೂರಿನ ಮಾಂಡಲಿಕಾಧಿಕಾರವು ಈತನ ಮಗ ರಾಮದೇವನಿಗ ದೊರಕಿತು. ರಾಮ ದೇವನು ನಿಗರ್ವಿಯೂ ಮೃದುಹೃದಯನೂ ಪಾಪಭೀರುವೂ ದೈವಭಕ್ತನೂ ಗುರುಹಿರಿಯರನ್ನು ಗೌರವಿಸುವ ಸ್ವಭಾವದವನೂ ಆಗಿದ್ದನು.

ಆದರೇನು ! ಈತನು ಗೃಹಸ್ಥಾಶ್ರಮ ದಿನ ಮಧ್ಯಾಹ್ನವನ್ನತಿಕ್ರಮಿ ಸಿದ್ದರೂ ಸಂತಾನ ಲಾಭವನ್ನು ಪಡೆದಿರಲಿಲ್ಲ. ಸತಿಪತಿಗಳು ಕರಗತವಾಗಿದ್ದ ಎಲ್ಲ ಭೋಗಸಾಮಗ್ರಿಗಳನ್ನೂ ಉಪೇಕ್ಷಿಸಿ-ಪುತ್ರಾಪೇಕ್ಷೆಯಿಂದ ದಯಾಮಯ ನಾದ ದೇವನನ್ನು ಭಕ್ತಿಪೂರ್ವಕವಾಗಿ ಆರಾಧಿಸುತ್ತಲಿದ್ದರು. ಹೀಗಿರಲಾಗಿ ಶ್ರೀಜಯಧ್ವಜತೀರ್ಥರು ತಮ್ಮ ಉತ್ತರಭಾರತವರ್ಷದ ಪ್ರವಾಸವನ್ನು ಕೈ ಗೊಳ್ಳುವುದಕ್ಕೆ ಪೂರ್ವಭಾವಿಯಾಗಿ ತಮ್ಮ ಚಿಕ್ಕ ತಾಯಿಯ ಮಗ ಬನ್ನೂರು ರಾಮದೇವನಿಗೆ ದರ್ಶನವನ್ನು ದಯಪಾಲಿಸುವುದಕ್ಕೋಸ್ಕರವಾಗಿ ಪ್ರಯಾಣ ಬೆಳೆಸಿದರು. ಈ ವರ್ತಮಾನವು ರಾಮದೇವನಿಗೆ ಚಾರರ ಮೂಲಕ ತಿಳಿಯಿತು. ಆತನು ಆ ಕೂಡಲೆ ಸತಿ ಪರಿವಾರ ಸಮೇತನಾಗಿ ಬನ್ನೂರಿನಿಂದ ಹೊರಟು—

ಮಧ್ಯಮಾರ್ಗದಲ್ಲಿ ಶ್ರೀಜಯಧ್ವಜತೀರ್ಥರನ್ನು ಸಕಲಮರ್ಯಾದೆಗಳಿಂದ ಎದುರುಗೊಂಡು–ಅವರನ್ನು ಅರ್ಘ್ಯಪಾದ್ಯಾಚಮನಾದಿಗಳಿಂದ ಅರ್ಚಿಸಿ— ಅವರ ಪದತಳದಲ್ಲಿ ತನ್ನ ಶಿರಸ್ಸನ್ನಿಟ್ಟು–ಸಾಷ್ಟಾಂಗಪ್ರಣಾಮ ಮಾಡಿದನು. ಶ್ರೀಜಯಧ್ವಜತೀರ್ಥರು ರಾಮದೇವನ ಶಿರಸ್ಸನ್ನು ಹಿಡಿದೆತ್ತಿ–ಆತನ ಯೋಗ ಕ್ಷೇಮವನ್ನು ವಿಚಾರಿಸಿ ತಿಳಿದುಕೊಂಡರು. ರಾಮದೇವನು ತನ್ನ ಮನೋ ವ್ಯಥೆಗೆ ಕಾರಣವನ್ನು ನಿವೇದಿಸಿಕೊಂಡನು. ಆದಕ್ಕೆ ಶ್ರೀಜಯಧ್ವಜತೀರ್ಥರು "ನೀನು ನಮ್ಮ ಬಂಧುವರ್ಗದವರಲ್ಲಿ ಶ್ರೇಷ್ಠನಾದವನು ; ನಿನ್ನ ಇಷ್ಟಾರ್ಥ ಸಿದ್ಧಿಯಾಗುವುದರಲ್ಲಿ ಹೆಚ್ಚು ಕಾಲ ವಿಳಂಬವಾಗಲಾರದು ; ನಿನ್ನಿಂದ ಇನ್ನು ಮುಂದೆ ಮಹತ್ಕಾರ್ಯಗಳು ನಡೆಯಲಿವೆ" ಎಂದು ಆಶೀರ್ವದಿಸಿ ರಾಮ ದೇವನ ಆತಿಥ್ಯವನ್ನು ಸ್ವೀಕರಿಸಿ ಕೆಲಕಾಲ ಬನ್ನೂರಿನಲ್ಲಿದ್ದು–ಅಲ್ಲಿಂದ ಮುಂದಕ್ಕೆ ಪ್ರಯಾಣ ಬೆಳೆಸಿದರು. ಅನಂತರ ರಾಮದೇವನ ಧರ್ಮಪತ್ನಿ ರುಕ್ಮಾಂಬೆಯು ಗರ್ಭವನ್ನು ತಾಳಿ ಕಾಲಕ್ರಮದಲ್ಲಿ ಷಡೃತುಗಳಂತೆ ಶೋಭಾಯಮಾನರಾದ ಆರು ಮಂದಿ ಗಂಡು ಶಿಶುಗಳನ್ನು ಪ್ರಸವಿಸಿದಳು.

## ಬಿಲ್ಹಣಸುಮತಿ

ರಾಮದೇವನ ಕಿರಿಯ ಮಗನ ಹೆಸರು ವಲ್ಲಭದೇವನೆಂದು ಉಭಯ ಭಾಷಾಭಿಜ್ಞನಾದ ಸೋಮನಾಥನು ವ್ಯಾಸಯೋಗಿಚರಿತೆಯಲ್ಲಿ ದೇಶ ಮತ್ತು ತದ್ಭವ ಶಬ್ದಗಳನ್ನು ಮಿಶ್ರ ಮಾಡಿ - "ವಲ್ಲಭಸುಮಂತ್ರಿ" ಎಂಬುದಕ್ಕೆ ಬದಲಾಗಿ "ಬಲ್ಹಣಸುಮತಿ" ಎಂದು ಒಕ್ಕಣಿಸಿದ್ದಾನೆ. ರಾಮದೇವನ ತರು ವಾಯ ಬಲ್ಹಣದೇವನು ಬನ್ನೂರು ಪ್ರಾಂತ್ಯದ ಮಾಂಡಲಿಕನಾದನು ಈತನು ವಿವಾಹಿತನಾಗಿ ಅನೇಕಸಂವತ್ಸರಗಳಾಗಿದ್ದಾಗ್ಯೂ–ಮಕ್ಕಳಾಗಿರಲಿಲ್ಲ. ಆಗ ಆತನ ಹೆಂಡತಿಯು ತನ್ನ ಪತಿದೇವನನ್ನು ಕುರಿತು ಹೀಗೆ ವಿಜ್ಞಾಪಿಸಿಕೊಂಡಳು, "ದೇವಾ ! ನಾವು ಇಷ್ಟು ದೀರ್ಘಕಾಲ ನಿರೀಕ್ಷಿಸಿದಾಗ್ಯೂ ಕುಲದೀಪಕನಾದ ಪುತ್ರನು ಜನಿಸಲಿಲ್ಲ. ಇದು ನನ್ನ ಪೂರ್ವಾರ್ಜಿತ ದುಷ್ಕರ್ಮದ ಫಲವು. ನನ್ನ ತಪ್ಪಿಗಾಗಿ ನಮ್ಮ ಪಿತೃವರ್ಗದವರು ಪುನ್ನಾಮನರಕದಿಂದ ಉದ್ಧೃತ ವಾಗದಿರುವುದು ನನಗೆ ಸರಿತೋರುವುದಿಲ್ಲ. ಆದುದರಿಂದ ನೀವು ಬೇರೊಬ್ಬ

ರಮಣೀಮಣಿಯನ್ನು ವಿವಾಹವಾಗಿ — ಆಕೆಯಲ್ಲಿ ಸಂತಾನಲಾಭವನ್ನು ಪಡೆಯಬೇಕೆಂದು ನಾನು ನನ್ನ ಹೃದಯಪೂರ್ವಕವಾಗಿ ಪ್ರಾರ್ಥಿಸುತ್ತೇನೆ" ನಾರೀಮಣಿಯ ಈ ಮಾತುಗಳನ್ನು ಕೇಳಿದ ಬಲ್ಲಾಣದೇವನು ಆಶ್ಚರ್ಯಚಕಿತನಾದನು, ಅವನು ಪ್ರಥಮತಃ ಆಕೆಯ ಪ್ರಾರ್ಥನೆಗೆ ಕಿವಿಗೊಡಲಿಲ್ಲ; ಆದರೆ ಆಕೆಯು ಹಠ ಹಿಡಿದುದರಿಂದ ನಿರ್ವಾಹವಿಲ್ಲದೆ ಬೇರೊಂದು ವಿವಾಹವಾಗಲು ಬಲ್ಲಾಣದೇವನು ಸಮ್ಮತಿಸಿದನು.

ಬಳಿಕ ರೂಪವತಿಯೂ ಗುಣಸಂಪನ್ನಳೂ, ಸತ್ಕುಲಪ್ರಸೂತಳೂ ಆದ ಲಕ್ಷ್ಮಾಂಬೆ ಎಂಬ ನಾರೀರತ್ನವನ್ನು — ಬಲ್ಲಾಣದೇವನು–ಅಗ್ನಿಸಾಕ್ಷಿಯಾಗಿ ವಿವಾಹವಾದನು. ಇವರೀರ್ವರೂ ಕೆಲಕಾಲ ವಿವಾಹಸೌಖ್ಯವನ್ನನುಭವಿಸಿದರೂ ಇವರ ಮನೋಗತವು ನೆರವೇರುವ ಚಿಹ್ನೆಗಳು ಕಾಣಬರಲಿಲ್ಲ, ಇವರು ಪುತ್ರಾಪೇಕ್ಷೆಯಿಂದ ಕರುಣಾಮಯನಾದ ಬಾದರಾಯಣದೇವರನ್ನು — ಅನನ್ಯಭಕ್ತಿಭಾವಗಳಿಂದ ಆರಾಧಿಸುತ್ತಲಿದ್ದರು. ಹೀಗಿರಲಾಗಿ ಬಲ್ಲಾಣದೇವನ ಸೋದರತ್ತೆಯಮಕ್ಕಳೂ ಮಾಧ್ವಗುರುಪೀಠಾಧಿಪತಿಗಳೂ ಆಗಿದ್ದ—ಶ್ರೀಬ್ರಹ್ಮಣ್ಯತೀರ್ಥಶ್ರೀಪಾದಂಗಳು ಅನಿರೀಕ್ಷಿತರಾಗಿ ಶಿಷ್ಯ ಪರಿವಾರದೊಂದಿಗೆ–ಬನ್ನೂರಿಗೆ ಬಂದು ಊರಿನ ಮುಂಭಾಗದಲ್ಲಿ ರಾಮದೇವನಿಂದ ನಿರ್ಮಿತವಾಗಿದ್ದ ಶ್ರೀರಾಮದೇವಾಲಯದಲ್ಲಿ ಉಳಿದುಕೊಂಡರು. ಈ ಶುಭ ಸಮಾಚಾರವು ಬಲ್ಲಾಣದೇವನಿಗೆ ಮುಟ್ಟಿತು. ಆತನು ಆ ಕೂಡಲೆ ಸಕಲಪುರಜನರೊಂದಿಗೆ ದೇವಾಲಯಕ್ಕೆ ಹೋಗಿ ಅಲ್ಲಿದ್ದ ಬ್ರಹ್ಮಣ್ಯಮುನಿಗಳ ಸಂದರ್ಶನ ಪಡೆದು ಅವರ ಅಡಿದಾವರೆಗಳಲ್ಲಿ ತಲೆ ಇಟ್ಟು ನಮಿಸಿದನು. ಪುರೋಹಿತರು ಮಂತ್ರೋಚ್ಚಾರಣೆ ಮಾಡಿದರು. ಪತ್ನಿ ಲಕ್ಷ್ಮಾಂಬೆಯು ಸ್ವರ್ಣಕಲಶದಿಂದ ಜಲಧಾರೆಯನ್ನೆರೆದಳು; ಬಲ್ಲಾಣಸುಮತಿಯು ಶ್ರೀಗಳವರ ಪಾದಕಮಲಗಳನ್ನು ತೊಳೆದನು. ಶಿಷ್ಟಾಚಾರದಂತೆ ಯತಿಪುಂಗವರ ಅರ್ಚನೆಯು ನಡೆಯಿತು. ಅವರ ಪಾದೋದಕವನ್ನು ಬಲ್ಲಾಣದೇವನೂ, ಹೆಂಡತಿ ಲಕ್ಷ್ಮಾಂಬೆಯೂ ಪುರಜನರೂ, ಪರಿಜನರೂ ತಲೆಗಳ ಮೇಲೆ ಪ್ರೋಕ್ಷಿಸಿಕೊಂಡರು. ಆ ದಿನ ದೇವಾಲಯದಲ್ಲಿಯೇ ಅರ್ಚನೆಯೂ ಭಿಕ್ಷವೂ ಜರುಗಿದುವು. ಸಾಯಂಕಾಲ ಶ್ರೀಗಳು ದೇವರಿಗೆ ಮಂಗಳಾರತಿಯನ್ನು ಮಾಡಿ. ಅಲ್ಲಿಗೆ ಬಂದಿದ್ದ

ಬ್ರಾಹ್ಮಣ ಸುವಾಸಿನಿಯರಿಗೆ ಫಲಮಂತ್ರಾಕ್ಷತೆಗಳನ್ನು ಕೊಟ್ಟು ಅವರವರ ಗೃಹಗಳಿಗೆ ಬೀಳ್ಕೊಟ್ಟರು. ಅನಂತರ ಶ್ರೀಬ್ರಹ್ಮಣ್ಯತೀರ್ಥರು, ಶಿಷ್ಯರಿಂದ ತಮಗಾಗಿ ಸಿದ್ಧಪಡಿಸಿದ್ದ ಹಾಸಿಗೆಯ ಮೇಲೆ ಶಿರಸ್ಸನ್ನಿಟ್ಟು ಮಲಗಿದರು. ಬಲ್ಲಣಸುಮತಿಯು ಗುರುದೇವನ ಪಾದತಳದಲ್ಲಿ ಕುಳಿತಿದ್ದನು. ಅವನ ಮುಖಕಮಲವು ಬಾಡಿದ್ದಿತು. ಶ್ರೀಗಳವರು ಬಂಧುವಾದ ಬಲ್ಲಣಸುಮತಿಯ ಮನೋವ್ಯಥೆಗೆ ಕಾರಣವನ್ನು ತಿಳಿದುಕೊಂಡರು ಗುರುವರ್ಯರು ಬಲ್ಲಣದೇವನ ಬಯಕೆಯನ್ನು ಈಡೇರಿಸಿಕೊಡುವುದಾಗಿ ಅವನಿಗೆ ಅಭಿವಚನ ವನ್ನಿತ್ತರು, ಅವರ ಸುಧಾರಸಸಮಾನವಾದ ಮಾತುಗಳಿಂದ ಆ ಗೃಹಸ್ಥನು ಸಂತುಷ್ಟಾಂತರಂಗನಾಗಿ ಮನೆಗೆ ಹೋಗಿ-ಆ ರಾತ್ರಿಯನ್ನು ಆನಂದದಿಂದ ಕಳೆದನು. ಮಾರನೆಯದಿನ ಯತಿಪುಂಗವರು ಬನ್ನೂರು ಗ್ರಾಮಮಧ್ಯದಲ್ಲಿ ಎದ್ದು ಕಾಣುತ್ತಲಿದ್ದ ಬಲ್ಲಣಸುಮತಿಯ ಭವ್ಯ ಮಂದಿರಕ್ಕೆ ಶಿಷ್ಯ ಪರಿವಾರ ಸಮೇತರಾಗಿ ದಯಮಾಡಿಸಿ–ಅಲ್ಲಿಯೇ ದೇವತಾರ್ಚನೆಯನ್ನು ನೆರವೇರಿಸಿದರು, ತರುವಾಯ, ಶ್ರೀಗಳು ವಿಪ್ರರಿಂದ ವೇದಮಂತ್ರೋಚ್ಚಾರಣೆ ಮಾಡಿಸುತ್ತಾ ಹಸಿಯ ದರ್ಭೆಗಳಿಂದ ರಚಿತವಾದ ಪರಿಸ್ತರಣಗಳಿಂದ ಅಗ್ನಿಯನ್ನು ಅಲಂಕರಿಸಿದರು. ವಿಪ್ರರು ಸಾಮಗಾನ ಮಾಡುತ್ತಿರಲು ತಾಪಸವರೇಣ್ಯರು ಕುಶ, ಸಮಿತ್ತು, ನೆನದ ಎಳ್ಳು, ಆಜ್ಯ ಲಾಜಾದಿ ವಿವಿಧ ಪೂಜಾದ್ರವ್ಯಗಳಿಂದ ಮಂತ್ರ ಪೂರ್ವಕವಾಗಿ ಹೋಮವನ್ನು ಮಾಡಿಸಿ, ಯಜ್ಞೇಶ್ವರನನ್ನು ಸಂತುಷ್ಟಿಗೊಳಿಸಿದರು.

ಈ ರೀತಿ ಸಂತೃಪ್ತನಾದ ಅಗ್ನಿದೇವನ ಪ್ರಸಾದರೂಪವಾದ ಹವ್ಯಶೇಷ ವನ್ನು ಮೂರು ಭಾಗಗಳಾಗಿ ಮಾಡಿ ಅವುಗಳನ್ನು ಅಭಿಮಂತ್ರಿಸಿ ಬಲ್ಲಣ ಸುಮತಿಯ ಹಸ್ತಗಳಲ್ಲಿಟ್ಟು ಈ ರೀತಿ ಆಜ್ಞಾಪಿಸಿದರು. "ಈ ಯಜ್ಞಶೇಷ ವನ್ನು ಉಪಯೋಗಿಸುವುದರಿಂದ ಅರಣಿಯಲ್ಲಿನ ಪಾವಕದಂತೆ ನಿನ್ನ ಸಹ ಧರ್ಮಿಣಿಯ ಉದರದಲ್ಲಿ ತೇಜೋವಂತರಾದ ಮೂರು ಮಂದಿ ಮಕ್ಕಳು ಜನಿಸುವರು, ಅವರಲ್ಲಿ ಕೊನೆಯ ಮಗನನ್ನು ನಮಗೆ ಕೊಟ್ಟು ಸಂತೋಷ ಪಡಿಸು." ಬಲ್ಲಣಸುಮತಿಯು ಬ್ರಹ್ಮಣ್ಯ ಮುನಿಗಳ ಅಪ್ಪಣೆಯಂತೆ ನಡೆಯುವುದಾಗಿ ಮಾತುಕೊಟ್ಟನು.

ಪತ್ನಿಯಾದ ಲಕ್ಷ್ಮಾಂಬೆಯು ಆ ಹವಿರ್ಭಾಗಗಳನ್ನು ಭಕ್ತಿಯಿಂದ ಭುಂಜಿಸಿದಳು. ತರುವಾಯ ಬ್ರಹ್ಮಣ್ಯಮುನಿಗಳು, ಬಂಧುವಾದ ಬಲ್ಲಾಣ ಸುಮತಿಯ ಸೇವೆ ಸತ್ಕಾರಗಳಿಂದ ಸಂತುಷ್ಟಾಂತರಂಗರಾಗಿ ಚನ್ನಪಟ್ಟಣದ ಸಮೀಪದಲ್ಲಿದ್ದ ತಮ್ಮ ಆಶ್ರಮವಾದ ಅಬ್ಬೂರಿಗೆ ಹಿಂದಿರುಗಿದರು.

## ಶ್ರೀವ್ಯಾಸರಾಜರ ಜನನ

ಬಲ್ಲಾಣಸುಮತಿಯು ಬರುವ ಶುಭ ದಿನಗಳನ್ನು ನಿರೀಕ್ಷಿಸುತ್ತಾ ಸರ್ವಶಕ್ತನಾದ ದೇವರ ಆರಾಧನೆಯಲ್ಲಿ ಕಾಲವನ್ನು ಕಳೆಯುತ್ತಲಿದ್ದನು ಕಾಲಕ್ರಮದಲ್ಲಿ ಗೃಹಲಕ್ಷ್ಮಿಯಾದ ಲಕ್ಷ್ಮಾಂಬೆಯು ಗರ್ಭಧರಿಸಿದವಳಾಗಿ ಕ್ರಮೇಣ ಲಕ್ಷ್ಮಿಯಂತೆ ಲಕ್ಷಣಯುಕ್ತಳಾದ ಭೀಮಕ್ಕನೆಂಬ ಹೆಸರುಳ್ಳ ಸ್ತ್ರೀಶಿಶುವನ್ನೂ, ಪರಮಕಾಂತಿವಿಶಿಷ್ಟರಾದ ಮಧ್ವಪತಿದೇವ ಮತ್ತು ಯತಿರಾಜರೆಂಬ ನಾಮಾಂಕಿತವಾದ ಪುರುಷ ಶಿಶುಗಳನ್ನೂ ಪ್ರಸವಿಸಿದಳು. ಬಲ್ಲಾಣದೇವನು ಗಂಡುಮಕ್ಕಳಿಗೆ ಅವರ ಏಳನೆಯ ವಯಸ್ಸಿನಲ್ಲಿ ವಿಧಿಪೂರ್ವಕವಾಗಿ ಉಪನಯನ ಸಂಸ್ಕಾರಗಳನ್ನು ನೆರವೇರಿಸಿದನು. ಅನಂತರ ಈ ಬಾಲಕರು ಆಗಿನ ಕಾಲದ ಪದ್ಧತಿಗನುಗುಣವಾಗಿ ವಿದ್ಯಾಭ್ಯಾಸಕ್ಕೋಸ್ಕರ ಗುರುಕುಲಕ್ಕೆ ಹೋದರು. ಅವರು ನಾಲ್ಕು ವರ್ಷಗಳ ಕಾಲ ಗುರುಕುಲವಾಸವನ್ನು ಮಾಡಿ ನಿರತಿಶಯವಾದ ಪ್ರತಿಭಾಶಕ್ತಿಯ ಪ್ರಭಾವದಿಂದ ಪ್ರಖ್ಯಾತಿಯನ್ನು ಪಡೆದರು. ಇದಾದ ಮೇಲೆ ಅವರು ನಯ, ವಿನಯ, ಭಯ, ಭಕ್ತಿಗಳಿಂದಲೂ ಗುರುದಕ್ಷಿಣೆಯಿಂದಲೂ ಗುರು ಪೂಜೆಯನ್ನು ಮಾಡಿ–ಅವರಿಂದ ಅಪ್ಪಣೆ ಪಡೆದು ತಮ್ಮ ಮಾತಾಪಿತೃಗಳನ್ನು ನೋಡಬೇಕೆಂಬ ಆಶೆಯಿಂದ ಬನ್ನೂರಿಗೆ ಪ್ರಯಾಣ ಮಾಡಿದರು. ಅವರು ಮನೆಯನ್ನು ಸೇರಿದ ನಂತರ ತಮ್ಮ ಮಾತಾಪಿತೃಗಳ ದರ್ಶನವನ್ನು ಪಡೆದು ಅವರ ಪಾದತಳಗಳಲ್ಲಿ ತಮ್ಮ ಶರೀರಗಳನ್ನು ದಿಂಡುಗೆಡಹಿ ಅವರಿಗೆ ಸಾಷ್ಟಾಂಗ ಪ್ರಣಾಮಗಳನ್ನು ಮಾಡಿದರು. ಗುರುಕುಲದಿಂದ ತಮ್ಮ ನಿಜನಿವಾಸಕ್ಕೆ ಬಂದ ಬಳಿಕ ಯತಿರಾಜನು ವ್ಯಾಕರಣಶಾಸ್ತ್ರ, ನಾಟಕಾಲಂಕಾರ ಸಹಿತವಾದ ಕಾವ್ಯಗಳನ್ನೂ ಅಧ್ಯಯನ ಮಾಡಿ—ಅವುಗಳಲ್ಲಿ ಪೂರ್ಣ ಪಾಂಡಿತ್ಯವನ್ನು ಗಳಿಸಿದನೆಂದು ತಿಳಿಯಬಂದಿದೆ.

## ಶ್ರೀಬ್ರಹ್ಮಣ್ಯಮುನಿಗಳು ಯತಿರಾಜನನ್ನು ತಮ್ಮ ಆಶ್ರಮಕ್ಕೆ ಬರಮಾಡಿಕೊಂಡುದು

ಯತಿರಾಜನು ತಂದೆಯ ಮನೆಯಲ್ಲಿ ಅಭಿವೃದ್ಧನಾಗುತ್ತಲಿದ್ದ ಸಮಾಚಾರವು ಶ್ರೀಬ್ರಹ್ಮಣ್ಯಮುನಿಗಳಿಗೆ ತಿಳಿಯಬಂದಿತು ಅವರು ತಮ್ಮ ನಂಬುಗೆಯ ಶಿಷ್ಯರಲ್ಲೊಬ್ಬನನ್ನು ಕರೆದು ಅವನ ಕೈಯಲ್ಲಿ ಒಂದು ಪತ್ರವನ್ನು ಒರೆದು ಕೊಟ್ಟು ಅದನ್ನು ಬಲ್ಲಣಸುಮತಿಗೆ ತಲ್ಪಿಸುವಂತೆ ಆಜ್ಞಾಪಿಸಿದರು ಅವನು, ವಿಶ್ವಾಮಿತ್ರನು ದಶರಥನನ್ನು ಕುರಿತು ಬಂದಂತೆ, ಬಲ್ಲಣಸುಮತಿಯ ಬಳಿಗೆ ಬಂದನು. ಅವನಿಗೆ ಬಲ್ಲಣಸುಮತಿಯು ಅರ್ಘ್ಯಪಾದ್ಯಾದಿಸತ್ಕಾರಗಳನ್ನು ಸಲ್ಲಿಸಿದನಂತರ ಬ್ರಹ್ಮಣ್ಯತೀರ್ಥರ ಮತ್ತು ಆಶ್ರಮವಾಸಿಗಳ ಕ್ಷೇಮ ಸಮಾಚಾರವನ್ನು ವಿಚಾರಿಸಿ ತಿಳಿದುಕೊಂಡನು. ಅನಂತರ ಅಂತೇವಾಸಿಯು ತನ್ನ ತಲೆಯಮೇಲೆ ಧರಿಸಿದ್ದ ಶುಭ್ರವಾದ ದೊಡ್ಡ ರುಮಾಲಿನ ಕೊನೆಯಲ್ಲಿ ಕಟ್ಟಿದ್ದ ಗಂಟನ್ನು ಬಿಚ್ಚಿ ಅದರಲ್ಲಿದ್ದ ಗುರುಸಂದೇಶಗರ್ಭಿತವಾದ ಪತ್ರವನ್ನು ಬಲ್ಲಣಸುಮತಿಗೆ ಕೊಟ್ಟನು. ಆ ಪತ್ರದಲ್ಲಿ ಯತಿರಾಜನನ್ನು ತಮ್ಮ ಆಶ್ರಮಕ್ಕೆ ಕರೆತಂದು ಬಿಡುವಂತೆ ಬರೆದಿದ್ದಿತು. ಈ ಸಮಾಚಾರವನ್ನು ಹೆಂಡತಿಗೆ ತಿಳಿಸಿದನು. ಮುನಿಪುಂಗವರಿಗೆ ಕೊಟ್ಟಿದ್ದ ವಚನವನ್ನು ಪರಿಪಾಲಿಸಲು ನಿರ್ಧರಿಸಿದನು. ಮೂರನೆಯ ದಿನ ಪ್ರಾತಃಕಾಲ ಮುಖಪ್ರಕ್ಷಾಳನ ಸ್ನಾನಾದಿಗಳನ್ನು ಮಾಡಿಕೊಂಡ ತರುವಾಯ ಬ್ರಹ್ಮಣ್ಯತೀರ್ಥರ ಶಿಷ್ಯನನ್ನು ಮುಂದೆ ಮಾಡಿಕೊಂಡು–ಯತಿರಾಜನೊಂದಿಗೆ ಪೂಜ್ಯರ ಆಶ್ರಮಾಭಿಮುಖವಾಗಿ–ಬಲ್ಲಣಸುಮತಿಯು ಪ್ರಯಾಣ ಬೆಳೆಸಿದನು ಇವರು ಮೂರು ದಿನಗಳ ನಂತರ ಶ್ರೀಬ್ರಹ್ಮಣ್ಯತೀರ್ಥರ ಆಶ್ರಮವನ್ನು ತಲುಪಿದರು ಇವರ ಆಗಮನ ಸಮಾಚಾರವನ್ನು ಶಿಷ್ಯನೊಬ್ಬನು ಬ್ರಹ್ಮಣ್ಯಮುನಿಗಳಿಗೆ ಮುಂಚಿತವಾಗಿ ಬಿನ್ನೈಸಿದನು. ಆಗ ಮುನಿವರ್ಯರು ಅವರನ್ನು ಶೀಘ್ರವಾಗಿ ಇಲ್ಲಿಗೆ ಬರಹೇಳೆಂದು ಆಜ್ಞಾಪಿಸಿದರು. ಅದರಂತೆ ಆ ಶಿಷ್ಯನು ಅವರೀರ್ವರನ್ನು ಗುರುಗಳ ಸನ್ನಿಧಿಗೆ ಕರೆದುಕೊಂಡು ಬಂದನು. ಬಲ್ಲಣಸುಮತಿಯು ಮಗನ ಸಮೇತನಾಗಿ ಶ್ರೀಬ್ರಹ್ಮಣ್ಯತೀರ್ಥರಿಗೆ ನಮಸ್ಕಾರ ಮಾಡಿ ಅವರ ಅಪ್ಪಣೆ ಪಡೆದು ಕುಳಿತುಕೊಂಡನು.

ಬ್ರಹ್ಮಣ್ಯಮುನಿಗಳು ಬಲ್ಲಣಸುಮತಿಯ ಸತ್ಯಸಂಧತೆಯನ್ನು ಬಹಳವಾಗಿ ಹೊಗಳಿದರು. ಬಲ್ಲಣಸುಮತಿಯು ಹಲವಾರು ದಿನಗಳು ಆಶ್ರಮದಲ್ಲಿದ್ದು–ಶ್ರೀಗಳ ಅಪ್ಪಣೆಯನ್ನು ಪಡೆದು ತನ್ನ ಊರಿಗೆ ಹಿಂದಿರುಗಿದನು. ಬ್ರಹ್ಮಣ್ಯತೀರ್ಥರು ಯತಿರಾಜನನ್ನು ತಂದೆ ತಾಯಿಗಳು ಹೇಗೋ ಹಾಗೆ ಪ್ರೀತ್ಯಾದರಗಳಿಂದ ಕಾಣುತ್ತಲಿದ್ದರು. ಯತಿರಾಜನ ಆಚಾರವ್ಯವಹಾರಗಳನ್ನೂ ಪಾಂಡಿತ್ಯವನ್ನೂ ಗುರುವರ್ಯರು ನೋಡಿ ನೋಡಿ ಹರ್ಷಸಾಗರದಲ್ಲಿ ಓಲಾಡುತ್ತಲಿದ್ದರು. ಶ್ರೀಗಳು ಯತಿರಾಜನಿಗೆ ಚತುರ್ಥಾಶ್ರಮಧರ್ಮದ ಹೆಚ್ಚಳವನ್ನು ಪ್ರತಿದಿನವೂ ಉಪದೇಶಿಸುತ್ತಲಿದ್ದರು ಯತಿರಾಜನಿಗೆ ಬ್ರಹ್ಮಣ್ಯತೀರ್ಥರ ಮನೋಗತವು ಗೊತ್ತಾಯಿತು. ಅವನು ಒಂದು ದಿನ ಗುರುಗಳಿಗೆ ತಿಳಿಯದಂತೆ ಆಶ್ರಮದಿಂದ ಹೊರಬಿದ್ದು–ಬನ್ನೂರಿನ ಕಡೆಗೆ ಪ್ರಯಾಣ ಮಾಡಿದನು. ಆಗ ಬೇಸಿಗೆಯ ಕಾಲವಾಗಿತ್ತು. ಮಧ್ಯಾಹ್ನ ಹನ್ನೆರಡು ಘಂಟೆಯ ಹೊತ್ತಿಗೆ ಯತಿರಾಜನು ಮಾರ್ಗಾಯಾಸದಿಂದ ಬಳಲಿ ಬೆಂಡಾಗಿದ್ದನು. ದಾರಿಗೆ ಸಮೀಪವಾಗಿ ಒಂದು ಉನ್ನತವೂ ವಿಶಾಲವೂ ಆದ ಆಲದ ಮರವು ಅವನ ದೃಷ್ಟಿಪಥಕ್ಕೆ ಬಿದ್ದಿತು. ಅವನು ಆ ಮರದ ಸಮೀಪಕ್ಕೆ ಹೋಗಿ–ಅದರ ನೆರಳಿನಲ್ಲಿ ವಿಶ್ರಮಿಸಿಕೊಳ್ಳಲು ಮನಮಾಡಿದನು ; ಆಯಾಸಗೊಂಡಿದ್ದನಾಗಿ ಮಲಗಿದ ಕೂಡಲೇ–ಅವನಿಗೆ ನಿದ್ರೆ ಬಂದಿತು. ಆಗ ಕನಸಿನಲ್ಲಿ ಗರುಡಾರೂಢನಾದ ಶ್ರೀಮನ್ನಾರಾಯಣನು ಯತಿರಾಜನಿಗೆ ದರ್ಶನವನ್ನು ದಯಪಾಲಿಸಿ—ಅವನನ್ನು ಕುರಿತು, "ನೀನು ಮರ್ತ್ಯಲೋಕದಲ್ಲಿ ಮಾಡಬೇಕಾದ ಕಾರ್ಯಗಳು ಬಹುವಾಗಿವೆ ; ನೀನು ಅವುಗಳನ್ನು ಪೂರೈಸಬೇಕಾಗಿರುವುದರಿಂದ ಈ ಕೂಡಲೆ ಬ್ರಹ್ಮಣ್ಯತೀರ್ಥರ ಆಶ್ರಮಕ್ಕೆ ಹಿಂದಿರುಗಿಹೋಗಿ ಅವರು ನಿಯಮಿಸಿದಂತೆ ನಡೆ. ಅದರಿಂದ ನಿನಗೆ ಅನಂತಕಲ್ಯಾಣವಾಗುವುದು" ಎಂದು ಹೇಳಿ ಅಂತರ್ಧಾನವನ್ನೈದಿದನು. ಯತಿರಾಜನಿಗೆ ಒಡನೆಯೆ ಎಚ್ಚರಿಕೆಯಾಯಿತು. ಅವನು ಬ್ರಹ್ಮಣ್ಯತೀರ್ಥರ ಆಶ್ರಮಕ್ಕೆ ಹಿಂದಿರುಗಿದನು.

## ಯತಿರಾಜನ ಸಂನ್ಯಾಸ ಸ್ವೀಕಾರ

ಯತಿರಾಜನಿಗೆ ೧೮ ವರ್ಷ ವಯಸ್ಸಾಯಿತು. ಒಂದು ದಿನ ಬ್ರಹ್ಮಣ್ಯ

ತೀರ್ಥರು ಯತಿರಾಜನಿಗೆ "ನೀನು ಚತುರ್ಥಾಶ್ರಮದೀಕ್ಷೆಯನ್ನು ಸ್ವೀಕರಿಸಿ ಧರ್ಮಸಂಸ್ಥಾಪನೆಯನ್ನೂ ಮತಪ್ರತಿಷ್ಠಾಪನೆಯನ್ನೂ ಮಾಡಬೇಕು ಇದೇ ನಮ್ಮ ಸಂಕಲ್ಪ" ಎಂದು ಹೇಳಿದರು ಅದಕ್ಕೆ ಯತಿರಾಜನು "ನಾನು ತಮ್ಮ ಆಜ್ಞಾಧಾರಕನು ; ತಾವು ನಿಯಮಿಸಿದಂತೆ ನಡೆಯುವುದೇ ನನ್ನ ಕರ್ತವ್ಯ. ನಾನು ತಮ್ಮ ಆಣತಿಯನ್ನು ಶಿರಸಾಧಾರಣೆ ಮಾಡಲು ಸಿದ್ಧನಿದ್ದೇನೆ" ಎಂದು ನುಡಿದು ಸುಮ್ಮನಾದನು. ಬ್ರಹ್ಮಣ್ಯತೀರ್ಥರಿಗೆ ಸಂತೋಷವಾಯಿತು. ಅವರು ಕ್ರಿ.ಶ. ೧೪೭೮ನೇ ವರ್ಷದ ಒಂದು ಶುಭ ದಿನ-ಶುಭ ಮುಹೂರ್ತದಲ್ಲಿ ಯತಿರಾಜನಿಗೆ ಶಾಸ್ತ್ರವಿಧಿಗನುಸಾರವಾಗಿ ಸಂನ್ಯಾಸಾಶ್ರಮವನ್ನು ಕೊಟ್ಟರು. ಅವರು-ಶ್ರೀವ್ಯಾಸಮಹರ್ಷಿಗಳು ಹೇಗೋ ಹಾಗೆ ನಿಗಮಾಗಮನಿರ್ಣೀತನಾಗಿದ್ದ ಯುವಕಯತಿಗೆ "ಶ್ರೀವ್ಯಾಸತೀರ್ಥ"ರೆಂದು ನಾಮಕರಣ ಮಾಡಿದರು. ಶ್ರೀವ್ಯಾಸತೀರ್ಥರನ್ನು-ವೇದಾಂತ ರಾಜ್ಯಪಾಲನೆಯ ವಿದ್ಯಾಪೀಠದ ಮೇಲೆ ಕೂಡಿಸಿ ಶ್ರೀಬ್ರಹ್ಮಣ್ಯಯತಿಗಳು ಸ್ವಹಸ್ತದಿಂದ ಪಟ್ಟಾಭಿಷೇಕ ಮಾಡಿದರು. ಈ ಸಂಭ್ರಮದಲ್ಲಿ ಬ್ರಹ್ಮಣ್ಯತೀರ್ಥರ ಕಿರಿಯ ಸಹೋದರರೂ-ಶ್ರೀವ್ಯಾಸರಾಯರ ಒಡನಾಡಿಯೂ ಬಂಧುವೂ ಆಗಿದ್ದ ಶ್ರೀಸುರೇಂದ್ರತೀರ್ಥರು ಮುಖ್ಯ ಪಾತ್ರವನ್ನು ವಹಿಸಿದ್ದರು ಇದಾದ ಕೆಲಕಾಲಾನಂತರ ಶ್ರೀವ್ಯಾಸತೀರ್ಥರು ಗುರುಗಳ ಅಪ್ಪಣೆಯಂತೆ ದೇಶಸಂಚಾರಕ್ಕೆ ಹೊರಟರು. ಆಗಿನ ಕಾಲದಲ್ಲಿ ಕಂಚಿಯು ಒಂದು ಮುಖ್ಯ ವಿಶ್ವವಿದ್ಯಾಲಯದ ಕೇಂದ್ರವಾಗಿದ್ದಿತು. ಶ್ರೀವ್ಯಾಸತೀರ್ಥರು ತಮ್ಮ ಸಂಚಾರಕ್ರಮದಲ್ಲಿ ಅಲ್ಲಿಗೆ ಆಗಮಿಸಿದರು. ಇವರು ಅಲ್ಲಿ ದೀರ್ಘಕಾಲ ತಂಗಿದರು. ಕಂಚೀನಗರವು ಶಿಕ್ಷಾವಿಚಕ್ಷಣರಾದ ಸಾರಸ್ವತ, ಪಾಣಿನೀಯ, ಶಾಕಟಾಯನಾದಿ ವೈಯ್ಯಾಕರಣಿಗಳಿಂದಲೂ, ಚಾರ್ವಾಕಾದಿಮತನಿರಾಸಾರ್ಥವಾಗಿ ಗೌತಮಕಣಾದರಿಂದ ರಚಿತವಾದ ನ್ಯಾಯಶಾಸ್ತ್ರನಿಪುಣರಿಂದಲೂ ನಾಟಕಾದಿಕಾವ್ಯ ಪ್ರಬಂಧಗಳಲ್ಲಿ ಪ್ರವೀಣರಾದ ಪಂಡಿತರಿಂದಲೂ ಆಗಮಾಭಿಜ್ಞರಾದ ಅಂತೇವಾಸಿಗಳಿಂದಲೂ ರಾಮಾಯಣ ಮಹಾಭಾರತ ಮೊದಲಾದ ಇತಿಹಾಸ ಸಂಶೋಧಕರಿಂದಲೂ ಪೂರ್ವೋತ್ತರಮೀಮಾಂಸಾಶಾಸ್ತ್ರಗಳಲ್ಲಿ ಪಾರದರ್ಶಿಗಳೆಂದು ಪ್ರಖ್ಯಾತರಾಗಿದ್ದ ಪಂಡಿತ ಪ್ರಕಾಂಡರಿಂದಲೂ ನಿಬಿಡವಾಗಿದ್ದಿತು. ಸರ್ವ ವಿದ್ಯೆಗಳಲ್ಲಿಯೂ ಪಾರಂಗತರಾಗಿದ್ದ ಇವರು ಅಲ್ಲಿದ್ದ ಅತ್ಯಲ್ಪಕಾಲದಲ್ಲಿಯೇ ವಾದಸಾಮರ್ಥ್ಯದಿಂದ

ಪ್ರತಿಪಕ್ಷೀಯರ ವಾಗ್ಬಂಧನ ಮಾಡಿದರು. ಇವರ ಅತಿಶಯವಿದ್ಯಾಪ್ರಭಾವವನ್ನು ನೋಡಿ ಸಹಿಸಲಾರದೆ ಮತ್ಸರಬುದ್ಧಿಯಿಂದ ಒಬ್ಬಾನೊಬ್ಬ ಬ್ರಹ್ಮಬಂಧುವು, ದುಷ್ಟಾತ್ಮನಾದ ಕೌರವನು ಭೀಮಸೇನನಿಗೆ ವಿಷಪ್ರಯೋಗ ಮಾಡಿದಂತೆ, ವಿಷಮಿಶ್ರಿತವಾದ ಭೋಜನವನ್ನು ಬಡಿಸಿದನು. ಆದರೆ ಭಗವಂತನ ಅನುಗ್ರಹದಿಂದ ಆ ವಿಷಜ್ವಾಲೆಯು ನಂದಿಹೋಯಿತು. ತರುವಾಯ ಇವರು ಮುಳುಬಾಗಿಲು ಕ್ಷೇತ್ರಕ್ಕೆ ಬಿಜಯ ಮಾಡಿದರು. ಷಾಷ್ಟಿಕಮನೆತನದ ಬೆಟ್ಟಾಚಾರ್ಯಸಂತತಿಯ ಸತ್ಸಂತಾನರಾದ ಶ್ರೀಲಕ್ಷ್ಮೀನಾರಾಯಣಯತಿಗಳನ್ನು ಕವಿಕುಲತಿಲಕ ಸೋಮನಾಥನು ಈ ರೀತಿ ವರ್ಣಿಸಿದ್ದಾನೆ. "ಅವರಾದರೋ ಬ್ರಹ್ಮಜ್ಞಾನಿಗಳಾದ ಮಹರ್ಷಿಗಳಿಂದ ಸೇವಿತರಾದ ಸನಕಮುನಿಗಳಂತೆ ಶಿಷ್ಯಸಮೂಹದಿಂದ ಉಪಾಸ್ಯಮಾನರಾಗಿಯೂ, ಪ್ರತಿವಾದಿಗಳೆಂಬ ವೃಕ್ಷಗಳನ್ನು ಭೇಧಿಸುವ ಕಠೋರಕುಠಾರ ಪ್ರಾಯವಾದ ವಾಗ್ವೈಖರಿಯುಳ್ಳವರಾಗಿಯೂ, ದಿಗಂತವ್ಯಾಪ್ತವಾದ ಯಶಸ್ಸೆಂಬ ಕಾಶವನದಲ್ಲಿ ಶಾಶ್ವತಪ್ರವರ್ತಿತವಾದ ಶರತ್ಕಾಲದಂತೆಯೂ ಶೋಭಿಸುತ್ತಿದ್ದರು' ಬಂಧುವರ್ಗಕ್ಕೆ ಸೇರಿದ ಶ್ರೀವ್ಯಾಸಯತಿಗಳು ತಮ್ಮಲ್ಲಿಗೆ ಬರುತ್ತಿರುವರೆಂಬ ವಾರ್ತೆಯನ್ನು ಕೇಳಿದಮಾತ್ರದಿಂದಲೇ ಶ್ರೀಪಾದರಾಜರ ಅಂತಃಕರಣವು ಪುಳಕಿತವಾಯಿತು ವ್ಯಾಸಯತಿಗಳು ಶ್ರೀಪಾದರಾಜರ ಅಡಿದಾವರೆಗಳಲ್ಲಿ—ಶಿರಸ್ಸನ್ನಿಟ್ಟು—ಪ್ರಣಾಮ ಮಾಡಿದರು. ಅವರು ಶ್ರೀವ್ಯಾಸರಾಯರಿಗೆ ತಮ್ಮ ಸಮೀಪದಲ್ಲಿದ್ದ ಕುಶಾಸನದ ಮೇಲೆ ಮಂಡಿಸುವಂತೆ ಹೇಳಿದರು. ಶ್ರೀವ್ಯಾಸರಾಯರು ಶ್ರೀಪಾದರಾಜರನ್ನು ವಿದ್ಯಾಗುರುಗಳನ್ನಾಗಿ ಮಾಡಿಕೊಂಡು ಹನ್ನೆರಡು ವರ್ಷ ಗುರುಕುಲ ವಾಸ ಮಾಡಿದರು.

ಅನಂತರ ವ್ಯಾಸರಾಯರು ವ್ಯಾಸತ್ರಯವೆಂಬ ನ್ಯಾಯಾಮೃತ, ತರ್ಕತಾಂಡವ ಮತ್ತು ತಾತ್ಪರ್ಯಚಂದ್ರಿಕಾ ಎಂಬ ಮೂರು ಅಮೋಘವಾದ ಗ್ರಂಥಗಳನ್ನು ರಚಿಸಿದರು. ಇವುಗಳಲ್ಲಿ ನ್ಯಾಯಾಮೃತವು ಗ್ರಂಥಾದಿರಾಜವೆಂಬ ಹೆಸರು ಗಳಿಸಿದೆ. ಇದರಲ್ಲಿ ನಾಲ್ಕು ಪರಿಚ್ಛೇದಗಳಿವೆ. ಮೊದಲನೆಯ ಪರಿಚ್ಛೇದದಲ್ಲಿ ಜಗನ್ಮಿಥ್ಯಾತ್ವ, ತಾರತಮ್ಯಸತ್ಯತ್ವ ಮೊದಲಾದ ಪ್ರಕ್ರಿಯೆಗಳನ್ನು ವಿಮರ್ಶಿಸಿ ಜಗತ್ತು ಸತ್ಯವೆಂತಲೂ ಸತ್ಯತ್ವದಲ್ಲಿ ತಾರತಮ್ಯವಿಲ್ಲವೆಂದೂ ಜಗತ್ತಿಗೂ ಪರಮಾತ್ಮನಿಗೂ ಸಮಾನವಾದ ಸತ್ಯತ್ವವಿದೆಯೆಂದೂ ನಿರೂಪಿಸಿರುತ್ತಾರೆ. ಎರಡನೆಯ

ಪರಿಚ್ಛೇದದಲ್ಲಿ ವೇದವು ಪಾರಮಾರ್ಥಿಕವೆಂದೂ, ನಾರಾಯಣನೇ ಪರಬ್ರಹ್ಮನೆಂದೂ, ಅವನು ಸಕಲಗುಣಪರಿಪೂರ್ಣನೆಂದೂ ಪ್ರತಿಪಾದಿಸಿರುವರು. ಮೂರನೆಯ ಪರಿಚ್ಛೇದದಲ್ಲಿ ಬ್ರಹ್ಮಸಾಕ್ಷಾತ್ಕಾರವನ್ನು ಹೊಂದುವ ವಿಧಾನಗಳನ್ನೂ, ನಾಲ್ಕನೆಯ ಪರಿಚ್ಛೇದದಲ್ಲಿ ಮುಕ್ತಿವಿಷಯವನ್ನೂ ಅನುವಾದ ಮಾಡಿರುತ್ತಾರೆ.

**ತರ್ಕತಾಂಡವ :**— ನ್ಯಾಯವೈಶೇಷಿಕರಿಗೂ ದ್ವೈತಿಗಳಿಗೂ ಇರುವ ಮತಭೇಧವನ್ನು ಹೊರಗೆಡಹುವುದೇ ಈ ಗ್ರಂಥದ ಮುಖ್ಯೋದ್ದೇಶ. ನೈಯ್ಯಾಯಿಕರು ಶ್ರೀವ್ಯಾಸರಾಯರನ್ನು ಈರೀತಿ ಖಂಡಿಸಿರುತ್ತಾರೆ. "ನ್ಯಾಯಾಮೃತಾರ್ಜಿತಾ ಕೀರ್ತಿಃ ತಾಂಡವೇನ ವಿನಾಶಿತಾ". ಇದರಿಂದ ನೈಯ್ಯಾಯಿಕರಿಗೆ ವ್ಯಾಸರಾಯರ ಮೇಲೆ ಎಂಥ ಕೋಪಬಂದಿತ್ತೆಂಬುದು ಪ್ರಕಾಶಕ್ಕೆ ಬರುವುದು.

**ತಾತ್ಪರ್ಯಚಂದ್ರಿಕಾ :**— ಶ್ರೀವ್ಯಾಸರಾಯರ ಅನುಬಂಧಿಗಳೂ, ಶ್ರೀಮನ್ಮಧ್ವಾಚಾರ್ಯರ ಸರ್ವಮೂಲಗ್ರಂಥಗಳಿಗೆ ಟೀಕೆಗಳನ್ನು ರಚಿಸಿ ಪ್ರಖ್ಯಾತರಾದವರೂ ಆದ ಜಯತೀರ್ಥರು ರಚಿಸಿರುವ ತತ್ತ್ವಪ್ರಕಾಶಿಕಾ ಎಂಬ ಗ್ರಂಥದ ವ್ಯಾಖ್ಯಾನವೆಂದು ಪ್ರಸಿದ್ಧವಾಗಿದೆ. ಶ್ರೀವ್ಯಾಸರಾಯರು,

"ಶ್ರೀಮದ್ಭಾಷ್ಯಸ್ಯ ಟೀಕಾ ಯಾ ಜಯತೀರ್ಥಾರ್ಯನಿರ್ಮಿತಾ ।
ಗಂಭೀರಾ ನಿರ್ಮಲಾಚೇಮಾಂ ವ್ಯಾಕರಿಷ್ಯೇ ಯಥಾಮತಿ ॥ ॥೧॥
ಸೂತ್ರೇ ಭಾಷ್ಯೇಽನುಭಾಷ್ಯೇ ಚ ಸನ್ನ್ಯಾಯವಿವೃತೌ ತಥಾ ।
ಟೀಕಾಸು ಚ ಯದಸ್ಪಷ್ಟಂ ತಚ್ಚ ಸ್ಪಷ್ಟೀಕರಿಷ್ಯತೇ ॥ ॥೨॥
ಪ್ರತಿಸೂತ್ರಂ ಪ್ರಕಾಶ್ಯೇತೇ ಘಟನಾಘಟನೇ ಮಯಾ ।
ಸ್ವೀಯಾನ್ಯಪಕ್ಷಯೋಃ ಸಮ್ಯಗ್ವಿದಾಂ ಕುರ್ವನ್ತು ಸೂರಯಃ ॥" ॥೩॥

ಎಂಬುದಾಗಿ ಉಲ್ಲೇಖಿಸಿರುತ್ತಾರೆ. ಈ ಗ್ರಂಥರಚನೆಯು ಅವಶ್ಯಕವೇ ನಿದ್ದಿತೆಂಬುವುದು ಈ ಮೇಲಿನ ಶ್ಲೋಕಗಳಿಂದ ಚೆನ್ನಾಗಿ ವ್ಯಕ್ತವಾಗುವುದು.

ಬೆಟ್ಟಾಚಾರ್ಯಸಂತತಿಗೆ ಸೇರಿದ ಶ್ರೀಪಾದರಾಯರು ತಮಗೆ ಆನುವಂಶೀಕವಾಗಿ ನಡೆದುಬಂದ ತಿರುಪತಿದೇವಸ್ಥಾನದ ಧರ್ಮಕರ್ತಾಧಿಕಾರವನ್ನೂ, ಚಂದ್ರಗಿರಿ ರಾಜಮನೆತನದ ಗುರುಪೀಠಾಧಿಕಾರವನ್ನೂ ತಮ್ಮ ವೃದ್ಧಾಪ್ಯದ ದೆಶೆಯಿಂದ ಶ್ರೀವ್ಯಾಸರಾಯಸ್ವಾಮಿಗಳಿಗೆ ವಹಿಸಿದರು ಇವರು ವಿಜಯನಗರದ ಆರು ಮಂದಿ ಸಾರ್ವಭೌಮರಿಗೆ ಕುಲಗುರುಗಳಾಗಿದ್ದರೆಂದು ಇತಿಹಾಸಗಳಿಂದ ಸ್ಪಷ್ಟಪಟ್ಟಿದೆ. ಇವರು ಮದನಪಲ್ಲಿ ಸಮೀಪದಲ್ಲಿ ಕಂದಕೂರು ಬಳಿ ಒಂದು ಬೃಹತ್ತಟಾಕವನ್ನು ನಿರ್ಮಾಣಮಾಡಿಸಿ ಅದಕ್ಕೆ "ವ್ಯಾಸಸಮುದ್ರ" ಎಂಬುದಾಗಿ ನಾಮಕರಣ ಮಾಡಿದರು, ವಿಜಯನಗರ ಚಕ್ರಾಧಿಪತ್ಯದ ಎಲ್ಲೆಯನ್ನು ಗುರ್ತಿಸುವುದಕ್ಕೋಸ್ಕರವಾಗಿ ೭೩೨ ಪ್ರಾಣದೇವರ ವಿಗ್ರಹಗಳನ್ನು ಪ್ರತಿಷ್ಠೆ ಮಾಡಿರುವರು. ಇವರ ಅಣ್ಣ ಮಧ್ವಪತಿದೇವನ ಮಕ್ಕಳಾದ ವಿಜಯೀಂದ್ರಸ್ವಾಮಿಗಳೂ, ಉಡುಪಿಯ ಸ್ವಾದೀಮಠಾಧಿಪತಿಗಳಾಗಿದ್ದ ಶ್ರೀವಾದಿರಾಜಯತಿಗಳೂ, ಕೂಡಲೀಮಠದ ಸ್ಥಾನಪತಿಗಳಾಗಿದ್ದ ಶ್ರೀನಾರಾಯಣಯತಿಗಳೂ ಇವರ ಮುವ್ವತ್ತೆರಡು ಸಂನ್ಯಾಸಿಶಿಷ್ಯರಲ್ಲಿ ಹೆಸರುವಾಸಿಯಾದವರು.

ಕನ್ನಡಭಾರತವನ್ನು ರಚಿಸಿದ ಗದುಗಿನನಾರಣಪ್ಪನು ಬಬ್ಬೂರುಕಮ್ಮೆ ಪಂಗಡಕ್ಕೆ ಸೇರಿದವನೆಂತಲೂ, ಈತನು ಅದ್ವೈತಿಯಾಗಿದ್ದು ಅಶ್ವತ್ಥಾಮಗುರುಗಳ ದರ್ಶನ ಹೊಂದಿ ಭಾರತರಚನೆಯನ್ನು ಮಾಡಿದ ತರುವಾಯ ಅದನ್ನು ಶ್ರೀವ್ಯಾಸರಾಯರಿಗೆ ಸಮರ್ಪಿಸಿ, ಅವರ ಶಿಷ್ಯತ್ವವನ್ನು ಅಂಗೀಕರಿಸಿದನೆಂತಲೂ ತಿಳಿದುಬರುವುದು. ಕನಕದಾಸರು "ವ್ಯಾಸಗೋಷ್ಠಿ"ಯೆನ್ನುವ ಗ್ರಂಥವನ್ನು ರಚಿಸಿದ್ದಾರೆ. ಇದು ಸಾಂಗತ್ಯದಲ್ಲಿದೆ. ಶ್ರೀವ್ಯಾಸರಾಯರು ದೊಡ್ಡ ಬಳ್ಳಾಪುರದಲ್ಲಿ ೨ ವರ್ಷಗಳ ಕಾಲ ವಾಸವಾಗಿದ್ದರು. ಇವರ ಅಣ್ಣನ ಮಗಳು ಅರವಿಂದಾಂಬೆ. ಈಕೆಯ ಗಂಡ ನಾಗಪ್ಪ. ಹಿರಿಯ ಬಳ್ಳಾಪುರದ ದೊರೆತನವನ್ನು ಬೈರೆಗೌಡನಿಗೂ, ಮಂತ್ರಿತ್ವವನ್ನು ಅಣ್ಣನ ಅಳಿಯ ನಾಗಪ್ಪನಿಗೂ ವಹಿಸಿದರು. ಇದಕ್ಕೆ ವಿಜಯನಗರದ ಕೃಷ್ಣಭೂಪಾಲನು ಸಮ್ಮತಿಸಿದನು. ನಂದೀಬೆಟ್ಟದಲ್ಲಿ ಜನ್ಮತಾಳುವ ಅರ್ಕಾವತೀ ನದಿಗೆ ಕಟ್ಟೆಗಳನ್ನು ಕಟ್ಟಿಸಿ, ಶಿವಪುರದಕೆರೆ, ನಾಗರಕೆರೆ, ರಾಜಘಟ್ಟದ ಕೆರೆಗಳನ್ನೂ, ಹುಲುಕಡಿ ಬೆಟ್ಟದಲ್ಲಿ ಉದ್ಭವವಾಗಿರುವ ತೃಣಾನದಿಗೂ ಕಟ್ಟೆಕಟ್ಟಿಸಿ, ಅರಳುಮಲ್ಲಿಗೆಯ

ಕೆರೆಯನ್ನೂ ನಿರ್ಮಾಣ ಮಾಡಿಸಿ "ದ್ವಾತ್ರಿಂಶತ್ತಟಾಕನಿರ್ಮಾಣಘನತರೋದಾರದಾತೃತ್ವ ವೈರೋಚನಿಕರ್ಣದಧೀಚಿಶಿಬಿಮಯೂರಧ್ವಜಾದೀನಾಂ ಶತಾಂಶಾಧಿಕಶೋಭಾಯಮಾನ"ರೆಂದು ಪ್ರಸಿದ್ಧರಾದರು.

ಇವರು ಅಲ್ಲಿದ್ದ ಕಾಲದಲ್ಲೇ ಅಭಿನವಜಕಣಾಚಾರ್ಯನೆಂಬ ಶಿಲ್ಪಿಯು, ನರಹರಿ, ಕೃಷ್ಣ ಮತ್ತು ಪ್ರಾಣದೇವರ, ಶಿಲಾವಿಗ್ರಹಗಳನ್ನು ತಯಾರಿಸಿ, ತಂದು ಒಪ್ಪಿಸಿದನೆಂತಲೂ ಅದಕ್ಕಾಗಿ ಅವನಿಗೆ ಜಕಸಂದ್ರವೆಂಬ ಗ್ರಾಮವನ್ನು ಉಂಬಳಿಯಾಗಿ ಕೊಟ್ಟರೆಂತಲೂ ಐತಿಹ್ಯವಿದೆ. ಶ್ರೀವ್ಯಾಸರಾಯರು ಪ್ರಾಣದೇವರನ್ನು ಆರಳುಮಲ್ಲಿಗೆಯಬಾಗಿಲಿನಲ್ಲಿಯೂ, ಶ್ರೀಗೋಪಾಲಕೃಷ್ಣವಿಗ್ರಹವನ್ನು ಕುಚ್ಚಪ್ಪನಪೇಟೆಯಲ್ಲಿಯೂ ಶ್ರೀನರಹರಿಯ ವಿಗ್ರಹವನ್ನು ಶಿಬಿಚಕ್ರವರ್ತಿಯ ತಪೋವನವೆನಿಸಿದ "ಶೀಬಿ" ಎನ್ನುವ ಕ್ಷೇತ್ರದಲ್ಲಿಯೂ ಪ್ರತಿಷ್ಠೆ ಮಾಡಿದರು. ದೊಡ್ಡಬಳ್ಳಾಪುರದ ಗೋಪಾಲಕೃಷ್ಣದೇವರಿಗೂ, ಪ್ರಾಣದೇವರಿಗೂ ಶಿವಪುರ ಮತ್ತು ನಾಕುಸುಂದರವೆಂಬ ಗ್ರಾಮಗಳನ್ನು ದತ್ತಿಯಾಗಿ ಬಿಟ್ಟರು. ಶೀಬಿಯ ಶ್ರೀನರಹರಿ ದೇವಾಲಯಕ್ಕೂ ಅನೇಕ ಇನಾಂ ಗ್ರಾಮಗಳನ್ನೂ ದಯಪಾಲಿಸಿದರು.

ಜಮಖಂಡಿಧುಂಡಿರಾಜನಿಗೆ ನರಹರಿನಾಯಕ ಕೃಷ್ಣಪ್ಪನಾಯಕ ಮತ್ತು ರಘುನಾಥನಾಯಕರೆಂಬ ಮೂರುಮಂದಿ ಗಂಡುಮಕ್ಕಳಿದ್ದರೆಂತಲೂ ಇವರಲ್ಲಿ ಕಿರಿಯರಾದ ರಘುಪತಿನಾಯಕರೇ ಶ್ರೀಜಯತೀರ್ಥರೆಂತಲೂ ಈ ಮೊದಲೇ ಈ ಗ್ರಂಥದ ಬೇರೊಂದು ಅಧ್ಯಾಯದಲ್ಲಿ ನಿವೇದಿಸಿರುವುದು ಸರಿಯಷ್ಟೆ. ಅಲ್ಲದೆ ಇವರು ಸಂನ್ಯಾಸವನ್ನು ಸ್ವೀಕರಿಸುವುದಕ್ಕೆ ಪೂರ್ವಭಾವಿಯಾಗಿ ತಮ್ಮ ಆಸ್ತಿಯನ್ನು ಸಹೋದರರಿಗೆ ಹಂಚಿಕೊಟ್ಟರೆಂಬ ಅಂಶವೂ ಈಗಾಗಲೆ ವಾಚಕರ ಅವಗಾಹನೆಗೆ ಬಂದಿರುತ್ತದೆ. ಇವರಲ್ಲಿ ಎರಡನೆಯ ಪುರಂದರಗಡದ ಕೃಷ್ಣಪ್ಪನಾಯಕರ ವಂಶದಲ್ಲಿ ಹರಿಭಕ್ತರಲ್ಲಿ ಅಗ್ರಗಣ್ಯರೂ ದಾನಶೂರರೂ ಆದ ಶೀನಪ್ಪನಾಯಕರೆಂಬುವ ಮಹಾತ್ಮರು ಅವತರಿಸಿದರು. ಇವರೇ ಪುರಂದರದಾಸರು. ಧುಂಡಿರಾಜನ ದೌಹಿತ್ರಸಂತತಿಯಲ್ಲಿ ಶ್ರೀವ್ಯಾಸರಾಯರು ಜನ್ಮ ತಾಳಿದ್ದರೆಂಬುದನ್ನು ಓದುಗರು ಮರೆಯಲಾಗದು. ಆದುದರಿಂದ ಶೀನಪ್ಪನಾಯಕನು ತನ್ನ ವಿಶಿಷ್ಟಆಸ್ತಿಯನ್ನೂ ದಾನಮಾಡಿ ವಿಜಯನಗರದಲ್ಲಿದ್ದ

ತನ್ನ ಬಂಧುಗಳೂ ತಪಸ್ವಿಗಳೂ ಆದ ಶ್ರೀವ್ಯಾಸರಾಯಸ್ವಾಮಿಗಳ ಸಮೀಪಕ್ಕೆ ಸಂಸಾರ ಸಮೇತನಾಗಿ ಬಂದು ಅವರಿಂದ "ಪುರಂದರದಾಸ" ಎಂಬ ಅಂಕಿತ ವನ್ನು ಪಡೆದನು. ಪುರಂದರದಾಸರಿಗೂ ಶ್ರೀವ್ಯಾಸರಾಯರಿಗೂ ಇದ್ದ, ಬಾಂಧವ್ಯವನ್ನು ತಿಳಿಸುವುದೇ ನಮ್ಮ ಮುಖ್ಯ ಧ್ಯೇಯವಾಗಿದೆ. ಜಮಖಂಡಿ ಧುಂಡಿರಾಜನ ಹಿರಿಯಮಗ ಮಾನವೀ ನರಹರಿನಾಯಕನ ವಂಶದಲ್ಲಿ, ಹರಿದಾಸರಲ್ಲಿ ಪ್ರಖ್ಯಾತರಾದ, ಶ್ರೀಜಗನ್ನಾಥದಾಸರು ೧೮ನೆಯ ಶತಮಾನ ದಲ್ಲಿ ಅವತರಿಸಿ, ದ್ವೈತಮತಪ್ರಚಾರ ಕಾರ್ಯಕ್ಕಾಗಿ ತಮ್ಮ ಇಡೀ ಜೀವ ಮಾನವನ್ನೇ ಧಾರೆಯೆರೆದರು. ಇವರು ರಚಿಸಿರುವ ಹರಿಕಥಾಮೃತಸಾರವು ಎಲ್ಲರಿಂದಲೂ ಮನ್ನಣೆಯನ್ನು ಪಡೆದಿರುತ್ತದೆ.

ತೊರವೆನರಹರಿದೇವನ ಅಂಕಿತದಿಂದ ರಾಮಾಯಣವನ್ನು ಬರೆದಾತನು ಪುರಂದರದಾಸರ ಕಿರಿಯ ಅಳಿಯನೆಂದು ಗೊತ್ತಾಗಿದೆ. "ಪದ:–ಗಂಗರಾಜನು ಬರದ ಶಾಸನವಂದರೊಳಗೀರೀತಿ ವಕ್ಕಣಿಸುತ ಬರದಿಹ ವಲ್ಲಭದೇವನೆಂಬುವರ ಊರಿಗೊಕ್ಕಲು ಇವರು–ಒಕ್ಕಲತನಕೆ ದೊರೆಗಳು, ಅರಸರಿಗೆ ಗುರುತರದ ಮಂತ್ರೀಶ್ವರರು, ಗುರುಗಳ ಗುರುಗಳಾಗಿಹರೀಗ ಅರವತ್ತೊಕ್ಕಲೆಂಬುವರು ಹೆಮ್ಮೆಯಲಿ ಈ ಮಾತನಾ ಪೇಳ್ದವನಲ್ಲವು. ಕಳಲೆ ಲಕ್ಷ್ಮಣಪಂಡಿತನನಾನರಿಯೆ ಬರೆಹದೊಳಾತಸಿರ್ದುದನರಿದು ಕೊಂಡಿಹೆನು. ಶಾಸನವು ತಲಕಾಡಬಳಿ ಯೊಳಗೀಗ ಕಾಣಲುಬಹುದು. ಮಳಲಿಹೂತು ಕೊಂಡಿದೆ. ವಿಘ್ನೇಶ್ವರನ ದೇವಾಲಯದ ಮಂದಿರದಿ"

ಶ್ರೀಪಾದರಾಜರ ಕಿರಿಯ ಸಹೋದರರೂ, ಶ್ರೀವಿಬುಧೇಂದ್ರತೀರ್ಥರ ಮಠದ ಅಧಿಪತಿಗಳೂ ಆಗಿದ್ದ ಶ್ರೀಸುರೇಂದ್ರತೀರ್ಥರು ತಮ್ಮ ೯೨ನೆಯ ವಯಸ್ಸಿನಲ್ಲಿ, ಶ್ರೀವ್ಯಾಸರಾಯರ ಅಣ್ಣನ ಮಕ್ಕಳು, ಶ್ರೀವಿಜಯೀಂದ್ರಸ್ವಾಮಿ ಗಳಿಗೆ ಮಠಾಧಿಪತ್ಯವನ್ನು ವಹಿಸಿಕೊಟ್ಟು ವೃಂದಾವನಪ್ರವೇಶ ಮಾಡಿದರು. ಶ್ರೀವ್ಯಾಸರಾಯರ ಜೀವನ ಚರಿತ್ರೆಗೆ ಸಂಬಂಧಪಟ್ಟ ಮಹತ್ವದ ವಿಚಾರಗಳನ್ನು ಸೋಮನಾಥಕವಿಯಿಂದ ರಚಿತವಾದ ಶ್ರೀವ್ಯಾಸಯೋಗಿ ಚರಿತೆಯಿಂದ ತಿಳಿಯ ಬಹುದು.

ಶ್ರೀಅಕ್ಷೋಭ್ಯತೀರ್ಥರ ಬಂಧುವರ್ಗಕ್ಕೆ ಸೇರಿದವರಾಗಿ, ರಾಜಕೀಯ, ಸಾಮಾಜಿಕ ಆರ್ಥಿಕ, ಬೌದ್ಧಿಕ ಮತ್ತು ತಾತ್ತ್ವಿಕ ಕ್ಷೇತ್ರಗಳಲ್ಲಿ ೮ ದಶಮಾನಗಳ ಕಾಲ ಅವಿಶ್ರಾಂತವಾಗಿ ಶ್ರಮಿಸಿ ಕ್ರಿ ಶ ೧೫೩೯ನೇ ಮಾರ್ಚ ೮ನೇ ತಾರೀಖಿನ ದಿನ ನವವೃಂದಾವನಗಡ್ಡೆಯಲ್ಲಿ ಷಾಷ್ಟಿಕವಂಶಕಲ್ಪತರುವಿನಂತಿದ್ದ ಶ್ರೀವ್ಯಾಸರಾಯರು ತಮ್ಮ ಭೌತಿಕದೇಹವನ್ನು ಬಿಟ್ಟು ಪರಂಧಾಮಕ್ಕೆ ತೆರಳಿದರು, ಇವರಿಂದ ಮಾಧ್ವಮತಕ್ಕೆ ಆಗಿರುವ ಉಪಕಾರವು ಚಿರಸ್ಮರಣೀಯವಾಗಿದೆ ಇವರು ಸಂಸ್ಕೃತಭಾಷಾಭಿವೃದ್ಧಿಗೂ, ಕನ್ನಡ ನುಡಿಯ ಏಳಿಗೆಗೂ ಶಾಶ್ವತವಾದ ಸಹಾಯವನ್ನು ಮಾಡಿರುವರೆಂಬುದಕ್ಕೆ ಜೀವಂತ ನಿದರ್ಶನಗಳಿವೆ.

## ಶ್ರೀಸುಧೀಂದ್ರತೀರ್ಥರು

ಷಾಷ್ಟಿಕಮನೆತನದ ಸ್ವರ್ಣಭಂಡಾರಿಗಳ ಕುಟುಂಬಕ್ಕೆ ಸೇರಿದ ನರಹರಿನಾಯಕನು ಭಂಡಾರಕೇರಿ ಪ್ರಾಂತ್ಯದ ಜಹಗೀರದಾರನಾಗಿದ್ದನು ಆತನು ಕ್ರಿ. ಶ ೧೫೮೫ನೇ ಸಂವತ್ಸರದಲ್ಲಿ ಬಿಜಾಪುರದ ಅದಿಲ್‌ಷಹನ ಸೈನ್ಯದೊಂದಿಗೆ ರಣರಂಗದಲ್ಲಿ ಕಲಿತನದಿಂದ ಕಾದಾಡಿ ಕಾಲಾಧೀನನಾದನು ಆತನಿಗೆ ಮೂರು ಮಂದಿ ಗಂಡುಮಕ್ಕಳು ಇದ್ದರು ಅಣ್ಣಾಜಿನಾಯಕ, ಕೃಷ್ಣಪ್ಪನಾಯಕ ಮತ್ತು ಶೀನಪ್ಪನಾಯಕ ತಂದೆಯು ಮೃತನಾದ ಕಾಲದಲ್ಲಿ ಅಣ್ಣಾಜಿನಾಯಕನಿಗೆ ಹನ್ನೆರಡುವರ್ಷ ವಯಸ್ಸಾಗಿದ್ದಿತು. ನರಹರಿನಾಯಕನ ಮರಣದಿಂದ ಜಹಗೀರಿಯ ಆಡಳಿತವು ಸಡಿಲವಾಯಿತು ಮಹತ್ವಾಕಾಂಕ್ಷಿಯಾದ ಕೆಳದಿಯ ನಾಯಕರು ಈ ಸಂಧಿಯ ಉಪಯೋಗವನ್ನು ಪಡೆಯಲು ತಮ್ಮ ಸ್ವಾರ್ಥಸಾಧನೆಗಾಗಿ ಭಂಡಾರಕೇರಿಪ್ರಾಂತ್ಯವನ್ನು ಸ್ವಾಧೀನಪಡಿಸಿಕೊಂಡರು ನರಹರಿನಾಯಕನ ಮಕ್ಕಳು ಅನಾಥರಾದರು. ಕೆಳದಿಯ ನಾಯಕರು ಆ ಬಾಲಕರನ್ನು ತಮ್ಮ ಬಳಿಗೆ ಬರಮಾಡಿಕೊಂಡು "ನಿಮ್ಮ ಜಹಗೀರಿಯು ನಮ್ಮ ವಶವಾಯಿತೆಂದು ನೀವು ಚಿಂತಿಸಬೇಕಾಗಿಲ್ಲ ; ನಾವು ನಿಮಗೆ ಮಾಸಾಶನವನ್ನು ನಿಗದಿ ಮಾಡಿಕೊಡುತ್ತೇವೆ ; ನೀವು ಇನ್ನುಮುಂದೆ ನಿಮ್ಮ ವಿದ್ಯಾಭ್ಯಾಸದಲ್ಲಿ ನಿರತರಾಗತಕ್ಕದ್ದು" ಎಂದು ಹೇಳಿದನು. ಅಣ್ಣಾಜಿನಾಯಕನು "ನಾವು ನಿಮ್ಮ ರಾಜ್ಯದಲ್ಲಿ ವಾಸಮಾಡಲು ಬಯಸುವುದಿಲ್ಲ ; ನಾವು ಕಾಶೀಮಹಾ

ಕ್ಷೇತ್ರಕ್ಕೆ ಹೋಗಿ ಅಲ್ಲಿ ಶಿಕ್ಷಣವನ್ನು ಪಡೆಯುತ್ತೇವೆ. ನಿಮ್ಮ ಮಾಸಾಶನವೆಂಬ ಪಾರತಂತ್ರ್ಯದ ಶೃಂಖಲೆಯಿಂದ ಎಂದಿಗೂ ನಾವು ಬಂಧಿತರಾಗುವುದಿಲ್ಲ"ವೆಂದು ಪ್ರತ್ಯುತ್ತರವನ್ನು ಕೊಟ್ಟನು. ಆಗ ಕೆಳದಿಯ ನಾಯಕರು ಆ ಬಾಲಕರನ್ನು ವಿವಿಧೋಪಚಾರಗಳಿಂದ ಸತ್ಕರಿಸಿ "ನಿಮ್ಮ ಪ್ರಯಾಣದ ವೆಚ್ಚಕ್ಕೋಸ್ಕರವಾಗಿ ಈ ಅಲ್ಪ ಧನವನ್ನು ಸ್ವೀಕರಿಸಿ ; ಮಾರ್ಗದಲ್ಲಿ ತಸ್ಕರರ ಬಾಧೆಯು ಹೆಚ್ಚಾಗಿದೆ ; ಇಲ್ಲವಾಗಿದ್ದರೆ ಇನ್ನೂ ಹೆಚ್ಚು ಧನವನ್ನು ನಿಮಗೆ ಕೊಡಲು ನಾನು ಹಿಂಜರಿಯುತ್ತಿರಲಿಲ್ಲ. ನೀವು ನಿಮ್ಮ ವಿದ್ಯಾಭ್ಯಾಸವನ್ನು ಪೂರೈಸಿಕೊಂಡು ಕಾಶೀಕ್ಷೇತ್ರದಿಂದ ಹಿಂದಿರುಗಿದ ತರುವಾಯ ನಮ್ಮ ರಾಷ್ಟ್ರದ ಪ್ರಧಾನ ಪದವಿಯನ್ನು ಸ್ವೀಕರಿಸಬೇಕು" ಎಂದು ನುಡಿದು ಅವರನ್ನು ಅಲ್ಲಿಂದ ಬೀಳ್ಕೊಟ್ಟನು

ಅಣ್ಣಾಜಿನಾಯಕನು ತಮ್ಮಂದಿರೊಡಗೂಡಿ ಒಂದು ವರ್ಷ ಪರಿಯಂತ ಪ್ರಯಾಣ ಮಾಡಿ ಕೊನೆಗೆ ಕಾಶೀಕ್ಷೇತ್ರವನ್ನು ತಲುಪಿದನು ಈತನು ಸಹೋದರರನ್ನೊಡಗೊಂಡು ಪಾಪಹಾರಿಣಿಯಾದ ಗಂಗಾನದಿಯಲ್ಲಿ ಮಿಂದು ಮಡಿಯುಟ್ಟು-ಭಕ್ತವತ್ಸಲನಾದ ಚಂದ್ರಮೌಳಿ ವಿಶ್ವನಾಥಸ್ವಾಮಿಯ ಸಂದರ್ಶನದಿಂದ ವಿಗತಶ್ರಮನಾದನು. ಅನಂತರ ಆ ಸಹೋದರರು ಹನುಮಾನ್‌ಘಾಟಿನಲ್ಲಿ ಒಂದು ಸತ್ರದಲ್ಲಿ ಉಳಿದುಕೊಂಡರು. ಅಣ್ಣಾಜಿನಾಯಕನು ವ್ಯಥಾಕಾಲಯಾಪನೆ ಮಾಡಲು ಇಷ್ಟಪಡಲಿಲ್ಲ. ಆತನು ಒಡನೆಯೇ ಕಾಶಿಯಲ್ಲಿ ಪ್ರಖ್ಯಾತನಾಗಿದ್ದ ಲೀಲಾಶರ್ಮನೆಂಬ ಪಂಡಿತೋತ್ತಮನನ್ನು ಕಂಡು ಆತನಿಗೆ ತನ್ನ ಎಲ್ಲ ವೃತ್ತಾಂತಗಳನ್ನೂ ಬಿನ್ನೈಸಿದನು. ಆ ವಿಪ್ರಶ್ರೇಷ್ಠನು ಅಣ್ಣಾಜಿನಾಯಕನ ಹಾಗೂ ಅವನ ಸಹೋದರರ ವಿದ್ಯಾಭ್ಯಾಸದ ಗುರುತರವಾದ ಭಾರವನು ವಹಿಸಿಕೊಂಡನು. ಚುರುಕುಬುದ್ಧಿಯ ಅಣ್ಣಾಜಿನಾಯಕನು ಕೆಲವು ವರ್ಷಗಳು ಗತಿಸುವುದರೊಳಗಾಗಿ ವೇದವೇದಾಂತತಾದಿಶಾಸ್ತ್ರಗಳಲ್ಲಿ ಪಾರಂಗತನಾದನು. ಈತನು ಉತ್ತರಹಿಂದೂಸ್ಥಾನದಲ್ಲಿ ಬಳಕೆಯಲ್ಲಿದ್ದ ಹಿಂದೀ ಮತ್ತು ಉರ್ದೂ ಭಾಷೆಗಳಲ್ಲಿಯೂ ಉಚ್ಚ ಶಿಕ್ಷಣವನು ಪಡೆದನು. ಅಲ್ಲದೆ ಶ್ರೀಮನ್ಮಧ್ವಾಚಾರ್ಯರಿಂದ ರಚಿತವಾದ ಗೀತಾಭಾಷ್ಯವನ್ನು ಉರ್ದೂ ಭಾಷೆಗೆ ತರ್ಜುಮೆ ಮಾಡಿದನು ಈತನು ತನ್ನ ಈ ಗ್ರಂಥದಲ್ಲಿ ಮುಸಲ್ಮಾನರ

ಪವಿತ್ರಗ್ರಂಥವಾದ ಕುರಾನಿನ ಮಹಾವಾಕ್ಯಗಳನ್ನು ಚೆನ್ನಾಗಿ ವಿಮರ್ಶೆ ಮಾಡಿ ಅವುಗಳಿಗೂ ಗೀತಾವಾಕ್ಯಗಳಿಗೂ ತಾತ್ಪರ್ಯ ವ್ಯತ್ಯಾಸವಿಲ್ಲವೆಂದು ಸಕಾರಣವಾಗಿ ತೋರಿಸಿಕೊಟ್ಟನು. ಆಗ ಪ್ರಬಲರಾಗಿದ್ದ ಮುಸಲ್ಮಾನ್ ಮತಾಚಾರ್ಯರು ಈತನ ಮೇಲೆ ಕುಪಿತರಾದರು. ಈತನಿಗೆ ಯವನರ ಬಾಧೆಯು ಹೆಚ್ಚಾಯಿತು. ಕಾಶೀಕ್ಷೇತ್ರದಲ್ಲಿ ಈತನು ಹೆಚ್ಚುಕಾಲ ನೆಲಸುವುದು ಸಾಧ್ಯವಾಗಲಿಲ್ಲ. ಅಣ್ಣಾಜಿನಾಯಕನಿಗೆ ತನ್ನ ಸಮೀಪಬಂಧುವಾದ ರಾಯಭಾರಿ ನಾರಣಪ್ಪನು ದೆಹಲಿಯಲ್ಲಿರುವುದು ನೆನಪಿಗೆ ಬಂದಿತು ಸ್ವಂತ ಊರಿಗೆ ಹಿಂದಿರುಗುವುದಕ್ಕೆ ಪೂರ್ವಭಾವಿಯಾಗಿ—ಆತನ ಸಂದರ್ಶನವನ್ನು ಮಾಡಬೇಕೆಂಬುವ ಕುತೂಹಲವು ಹೆಚ್ಚಿತು. ಈತನು ಒಡನೆಯೇ ತಮ್ಮಂದಿರನ್ನು ಸಂಗಡ ಕರೆದುಕೊಂಡು ಕಾಶಿಯಿಂದ ದೆಹಲಿಗೆ ಹೊರಟನು ಈ ಸಹೋದರರು ಕೆಲ ಕಾಲ ಮಾರ್ಗಕ್ರಮಣ ಮಾಡಿ ದೆಹಲಿಯನ್ನು ತಲುಪಿದರು.

ಬಿಜಾಪುರದಸುಲ್ತಾನರ ರಾಯಭಾರಿ ನಾರಣಪ್ಪನ ತಂದೆ ವೆಂಕಣ್ಣನು ಬಿಜಾಪುರದಸುಲ್ತಾನರ ಬಳಿ ಮುಖ್ಯ ಪ್ರಧಾನಿಯಾಗಿದ್ದನು ಚಕ್ರವರ್ತಿಯು ಹಿಂದೂ, ಮುಸಲ್ಮಾನ್ ಮತ್ತು ರಜಪೂತ ಮತಾನುಯಾಯಿ ಆರು ಮಂದಿ ಮಂತ್ರಿಶ್ರೇಷ್ಠರೂ ವೆಂಕಣ್ಣನನ್ನು ಸಹೋದರನಂತೆ ಪ್ರೀತಿಸುತ್ತಲಿದ್ದರು. ಆದುದರಿಂದ ತಮ್ಮ ಮಿತ್ರನ ಮಗನಾದ ರಾಯಭಾರಿ ನಾರಣಪ್ಪನನ್ನೂ ಸಾರ್ವಭೌಮನ ಎಲ್ಲ ಮಂತ್ರಿಗಳೂ ವಿಶ್ವಾಸದಿಂದ ಕಾಣುತ್ತಲಿದ್ದರು. ನಾರಣಪ್ಪನ ವಾಸ ಸ್ಥಳವು ದೆಹಲಿಯ ಪ್ರಧಾನಬೀದಿಗಳಲ್ಲೊಂದರ ಮಧ್ಯದಲ್ಲಿದ್ದಿತು. ಆತನು ವಾಸವಾಗಿದ್ದ ಭವ್ಯಮಂದಿರಕ್ಕೆ "ಹವೇಲಿ" ಎಂಬ ಹೆಸರಿದ್ದಿತು. ಈ ಕಾರಣದಿಂದ ಆತನ ವಂಶೀಯರಿಗೆ "ಹವೇಲಿಯವರು" ಎಂಬ ಹೆಸರು ಪ್ರಸಿದ್ಧವಾಯಿತು. ಅಣ್ಣಾಜಿನಾಯಕನೂ ಅವನ ಸಹೋದರರೂ ನಾರಣಪ್ಪನ ಮನೆಗೆ ಹೋದರು. ಇವರು ಬಂದ ಸಮಾಚಾರವು ನಾರಣಪ್ಪನಿಗೆ ತಿಳಿದ ಒಡನೆಯೆ ಆತನು ಹೊರಗೆ ಬಂದನು. ದೀರ್ಘಕಾಲಾನಂತರ ಬಂಧುಗಳ ದರ್ಶನಲಾಭವು ದೊರೆತದ್ದಕ್ಕಾಗಿ ಆತನು ಸಂತೋಷಪಟ್ಟು ಅವರನ್ನು ಆದರದಿಂದ ಸ್ವಾಗತಿಸಿ–ಮನೆಯೊಳಕ್ಕೆ ಕರೆದೊಯ್ದನು ಪರಸ್ಪರ ಕ್ಷೇಮಲಾಭಗಳ ವಿನಿಮಯವಾದ ತರುವಾಯ ಎಲ್ಲರೂ ಸ್ನಾನಮಾಡಿ–ನಿತ್ಯ

ಕರ್ಮಾನುಷ್ಠಾನಪರರಾದರು ನಾರಣಪ್ಪನು ಈ ಸಹೋದರರನ್ನು ವಿವಿಧೋಪಚಾರಗಳಿಂದ ಸಂತೋಷಪಡಿಸುತ್ತಲಿದ್ದನು. ಈ ರೀತಿ ಕೆಲದಿನಗಳು ಕಳೆದುವು. ಒಂದು ದಿನ ಅಣ್ಣಾಜಿನಾಯಕನು ತನ್ನಿಂದ ಉರ್ದೂ ಭಾಷೆಯಲ್ಲಿ ರಚಿತವಾಗಿದ್ದ ಗೀತಾಭಾಷ್ಯಗ್ರಂಥವನ್ನು ನಾರಣಪ್ಪನ ಮುಂದಿರಿಸಿದನು. ಆತನು ಆ ಗ್ರಂಥವನ್ನು ಆಮೂಲಾಗ್ರವಾಗಿ ಪರಿಶೀಲಿಸಿ ಅಣ್ಣಾಜಿನಾಯಕನ ಪಾಂಡಿತ್ಯವನ್ನು ಮನಸಾರ ಕೊಂಡಾಡಿದನು ನಾರಣಪ್ಪನು ಅಷ್ಟಕ್ಕೇ ತೃಪ್ತನಾಗದೆ ಈ ವಿಚಾರವನ್ನು ಚಕ್ರವರ್ತಿಯ ಪ್ರಧಾನರಿಗೂ ತಿಳುಹಿಸಿದನು. ಅವರು ಸಮಯವರಿತು ಅಣ್ಣಾಜಿನಾಯಕನ ಆಗಮನ ವೃತ್ತಾಂತವನ್ನೂ ಈ ಗ್ರಂಥದ ಮಹಾತ್ಮೆಯನ್ನೂ ಚಕ್ರವರ್ತಿಗೆ ಅರಿಕೆ ಮಾಡಿದರು. ಪ್ರಭುವರ್ಯನಾದ ಅಕ್ಬರ್ ಮಹಾಶಯನು ಅಣ್ಣಾಜಿನಾಯಕನ ಭೇಟಿಗೆ ಅನುಮತಿಯನ್ನು ದಯಪಾಲಿಸಿದನು. ಈತನು ಗೊತ್ತಾದ ದಿನ ತಮ್ಮಂದಿರೊಂದಿಗೂ ತನ್ನಿಂದ ರಚಿತವಾದ ಗ್ರಂಥರತ್ನದೊಂದಿಗೂ ಸಾರ್ವಭೌಮನ ಭೇಟಿಗಾಗಿ ಅರಮನೆಗೆ ಹೋದನು.

ಚಕ್ರವರ್ತಿಯು ಸಿಂಹಾಸನಾರೂಢನಾಗಿದ್ದನು. ಅಣ್ಣಾಜಿನಾಯಕನೂ ಆವನ ಅನುಜರೂ ರಾಜಾಸ್ಥಾನದ ಮರ್ಯಾದೆಗನುಗುಣವಾಗಿ ಪ್ರಣಾಮಮಾಡಿ-ಮುಕುಳಿತಹಸ್ತರಾಗಿ ನಿಂತುಕೊಂಡರು. ಪರಮದಯಾಳುವಾದ ಅಕ್ಬರ್ ಮಹಾಶಯನು ಆ ಯುವಕರ ಮೇಲೆ ತನ್ನ ಕೃಪಾದೃಷ್ಟಿಯನ್ನು ಬೀರಿ ಅವರನ್ನು ಕುಳಿತುಕೊಳ್ಳುವಂತೆ ಹೇಳಿದನು. ತರುವಾಯ ಅಣ್ಣಾಜಿನಾಯಕನು ಸಾರ್ವಭೌಮನ ಆಣತಿಯಂತೆ ತನ್ನ ವೃತ್ತಾಂತವನ್ನು ಈ ರೀತಿ ಬಿನ್ನೈಸಿದನು. "ನಾವು ಷಾಷ್ಟಿಕಕುಲ ಸಂಜಾತರು ನಮ್ಮ ಪೂರ್ವಿಕರು ಕದಂಬಚಕ್ರವರ್ತಿಯ ಬಳಿ ಕೋಶಾಧ್ಯಕ್ಷರಾಗಿದ್ದರು. ಅನಂತರ ಷಾಷ್ಟಿಕಬಂಧುಗಳು ದೇವಗಿರಿಯ ಯಾದವರ ರಾಜ್ಯಾಡಳಿತದಲ್ಲಿ ಉನ್ನತಾಧಿಕಾರಗಳನ್ನಲಂಕರಿಸಿದ್ದರು. ನಮ್ಮವರಲ್ಲಿ ಕೆಲವರು ಮಾಂಡಲಿಕರಾಗಿಯೂ, ಹಲವರು ಪ್ರಧಾನರಾಗಿಯೂ ಅನೇಕರು ದಂಡನಾಯಕರಾಗಿಯೂ ಇದ್ದುಕೊಂಡು ಚಕ್ರಾಧಿಪತ್ಯದ ಅಭಿವೃದ್ಧಿಗೆ ನಾನಾ ರೀತಿಗಳಲ್ಲಿ ಸೇವೆಯನ್ನು ಸಲ್ಲಿಸಿರುವರು. ನಮ್ಮ ಹಿರಿಯರಲ್ಲಿ ಜಮುಖಂಡಿನಾಡಿನ ಮಾಂಡಲಿಕರಾಗಿದ್ದ ಗೋವಿಂದಭಟ್ಟರು ಒಳ್ಳೆಯ ತ್ಯಾಗ

ಮೂರ್ತಿಗಳು. ಅವರು ತಮ್ಮ ಅರಸೊತ್ತಿಗೆಯನ್ನು ಚಿಕ್ಕತಂದೆ ಧುಂಡಿ ರಾಜರಿಗೆ ಒಪ್ಪಿಸಿ ಶ್ರೀಮನ್ಮಧ್ವಾಚಾರ್ಯರ ಶಿಷ್ಯರಾದರು. ಅಲ್ಲದೆ ಕಷ್ಟ ಸಾಧ್ಯವಾದ ಸಂನ್ಯಾಸಾಶ್ರಮವನ್ನು ಕೈಗೊಂಡರು. ಇವರ ಚಿಕ್ಕತಂದೆ ಧುಂಡಿರಾಜರ ಕಿರಿಯ ಮಕ್ಕಳೇ ಶ್ರೀಜಯತೀರ್ಥರು ! ಇವರನ್ನು ಟೀಕಾ ಚಾರ್ಯರೆಂತಲೂ ಕರೆಯುವ ವಾಡಿಕೆ ಇದೆ. ನಮ್ಮ ಬಾಂಧವರಾದ ವ್ಯಾಸ ಯೋಗಿಗಳ ಕಾಲದಲ್ಲಿ ನಮ್ಮ ವಂಶೀಯರಿಗೆ "ಚಿನ್ನಭಂಡಾರಿ"ಗಳೆಂಬುವ ಅಂಕಿತ ವುಂಟಾಯಿತು. ಶ್ರೀಜಯತೀರ್ಥರ ತಂಗಿಯ ಮಕ್ಕಳಾದ ಶ್ರೀರಾಜೇಂದ್ರತೀರ್ಥರು ಮತ್ತು ಜಯಧ್ವಜತೀರ್ಥರು ನಮ್ಮ ಮಾಧ್ವಗುರುಪೀಠಿಗೆಯಲ್ಲಿ ಉನ್ನತ ಸ್ಥಾನ ವನ್ನು ಗಳಿಸಿದರು. ಜಯತೀರ್ಥರ ಮತ್ತೊಬ್ಬ ಸಹೋದರಿಯನ್ನು ಬನ್ನೂರು ಪ್ರಾಂತ್ಯದ ಮಾಂಡಲಿಕನಾಗಿದ್ದ ವಲ್ಲಭದೇವನಿಗೆ ಕೊಟ್ಟು ಲಗ್ನವಾಗಿದ್ದಿತು. ಈತನು ತನ್ನ ಮಗಳೊಬ್ಬಳನ್ನು ಬೆಟ್ಟಾಚಾರ್ಯಮನೆತನದ ಶೇಷಗಿರಿಭಟ್ಟರಿಗೆ ಕೊಟ್ಟು ವಿವಾಹಮಾಡಿದನು. ಈಕೆಯ ಗರ್ಭಸುಧಾಂಬುಧಿಯಲ್ಲಿ ಪಾಂಡು ಪುತ್ರರು ಹೇಗೋಹಾಗೆ ಐದು ಮಂದಿ ಗಂಡು ಮಕ್ಕಳು ಜನಿಸಿದರು. ಇವರೆ ಲ್ಲರೂ ಚತುರ್ಥಾಶ್ರಮವನ್ನು ಕೈಗೊಂಡರು. ಇವರಲ್ಲಿ ಹಿರಿಯರಿಗೆ ಪುರು ಷೋತ್ತಮತೀರ್ಥರೆಂತಲೂ, ಎರಡನೆಯವರಿಗೆ ಬ್ರಹ್ಮಣ್ಯತೀರ್ಥರೆಂತಲೂ, ಮೂರನೆಯವರಿಗೆ ಸ್ವರ್ಣವರ್ಣತೀರ್ಥರೆಂತಲೂ, ನಾಲ್ಕನೆಯವರಿಗೆ ಲಕ್ಷ್ಮೀನಾರಾ ಯಣ ಮುನಿಗಳೆಂತಲೂ, ಕಿರಿಯರಿಗೆ ಸುರೇಂದ್ರತೀರ್ಥರೆಂತಲೂ ಹೆಸರಾಯಿತು. ಬನ್ನೂರಿನ ವಲ್ಲಭದೇವನ ಮಗ ರಾಮದೇವನಿಗೆ ಷಡೃತುಗಳಂತೆ ಆರು ಮಂದಿ ಗಂಡು ಮಕ್ಕಳಿದ್ದರು. ಅವರಲ್ಲಿ ಕಿರಿಯನಾದ ಬಲ್ಲಣಸುಮತಿಗೆ ಭೀಮಕ್ಕ ನೆಂಬ ಕನ್ಯಾಮಣಿಯೂ, ಮಧ್ವಪತಿದೇವ ಮತ್ತು ಯತಿರಾಜನೆಂಬ ಈರ್ವರು ಗಂಡು ಮಕ್ಕಳೂ ಇದ್ದರು. ಇವರಲ್ಲಿ ಕಿರಿಯನಾದ ಯತಿರಾಜನು ಬ್ರಹ್ಮಣ್ಯತೀರ್ಥರ ಶಿಷ್ಯನಾಗಿ–ಸಂನ್ಯಾಸವನ್ನು ತೆಗೆದುಕೊಂಡು "ವ್ಯಾಸತೀರ್ಥ" ರೆಂಬ ಪವಿತ್ರನಾಮದಿಂದ ಜಗತ್ಪ್ರಸಿದ್ಧರಾದರು. ಇವರ ಹಿರೇ ಸಹೋದರ ಮಧ್ವಪತಿದೇವನ ಮಗ ವಿಠಲದೇವನು ಶ್ರೀಸುರೇಂದ್ರತೀರ್ಥರ ಶಿಷ್ಯತ್ವವನ್ನು ವಹಿಸಿ ವಿಜಯೀಂದ್ರತೀರ್ಥರೆಂಬುವ ಹೆಸರಿನಿಂದ ಕರೆಸಿ ಕೊಂಡರು. ಆರವತ್ತೊಕ್ಕಲುಮನೆತನದವರು ಶ್ರೀಮನ್ಮಧ್ವಾಚಾರ್ಯರ

ಅವತಾರಕ್ಕೆ ಹಿಂದಿನಿಂದಲೂ ಪ್ರಸಿದ್ಧರಾಗಿದ್ದರು. ಷಾಷ್ಟಿಕವಮನೆತನದ ರುದ್ರ ಭಟ್ಟನು ದ್ವಾರಸಮುದ್ರದ ವೀರಬಲ್ಲಾಳರಾಯನ ಮಂತ್ರಿಯಾಗಿದ್ದನು. ಈತನಿಂದ ರಚಿತವಾದ "ಜಗನ್ನಾಥವಿಜಯ"ವೆನ್ನುವ ಕನ್ನಡ ಚಂಪೂಕಾವ್ಯವು ಪಂಡಿತರ ಮನ್ನಣೆಗೆ ಪಾತ್ರವಾಗಿದೆ. ರುದ್ರಭಟ್ಟನ ಅಣ್ಣನಾದ ಭಾಸ್ಕರ ಭಟ್ಟನು ಜ್ಯೋತಿಶ್ಶಾಸ್ತ್ರನಿರ್ಣಾಯಕವಾದ "ಸಿದ್ಧಾಂತ ಶಿರೋಮಣಿ" ಎಂಬ ಮಹಾಗ್ರಂಥವನ್ನು ಬರೆದಿರುವನು ಈತನಿಗೆ ಗಣಿತಶಾಸ್ತ್ರವಿಶಾರದನೆಂಬ ಪ್ರಶಸ್ತಿ ಇರುವುದು. ಹಿಂದೆ ಹೇಳಿದ ರುದ್ರಭಟ್ಟನ ಮೊಮ್ಮಗನಾದ ಗಂಗಾ ಧರಭಟ್ಟನು ಕ್ರಿ ಶ. ೧೩೪೭ರಲ್ಲಿ ಬಹಮನೀರಾಜ್ಯವನ್ನು ಸ್ಥಾಪಿಸಿದನು. ಈತನಿಗೆ ಭಟ್ಟೋತ್ಪಲ ಮತ್ತು ಭಾಸ್ಕರಭಟ್ಟರೆಂಬ ಇಬ್ಬರು ಗಂಡು ಮಕ್ಕಳು. ಇವರಲ್ಲಿ ಮೊದಲಿಗನಾದ ಉತ್ಪಲಭಟ್ಟನು "ಭಟ್ಟೋತ್ಪಲೀಯ" ವೆಂಬ ಮಹಾಕಾವ್ಯವನ್ನು ರಚಿಸಿದನು. ಗಂಗಾಧರಭಟ್ಟನು ನಮ್ಮ ಹಿರಿಯ ರಾದ ಶ್ರೀಅಕ್ಷೋಭ್ಯಗುರುಗಳಿಗೆ ಪ್ರೀತಿಯ ಶಿಷ್ಯನಾಗಿದ್ದನು. ಬಹಮನಿ ಸುಲ್ತಾನ್‌ಮಹಮದನ ಆಳ್ವಿಕೆಯಲ್ಲಿ ಗಂಗಾಧರಭಟ್ಟನೇ ಆ ರಾಜ್ಯಾಡಳಿತದ ಸೂತ್ರಧಾರಿಯಾಗಿದ್ದನು. ಈತನ ಸಹಾಯದಿಂದ ನಮ್ಮ ಜಯತೀರ್ಥಗುರು ಗಳು ಉತ್ತರ ಹಿಂದೂಸ್ಥಾನದಲ್ಲಿ ಯಶಸ್ವಿಯಾಗಿ ಪ್ರವಾಸ ಮಾಡಿದರು. ಆಗ ದೆಹಲಿಯಲ್ಲಿ ತೊಗಲಖ್ ಸಂತತಿಯ ಫಿರೋಜಷಹನು ಚಕ್ರವರ್ತಿಯಾಗಿದ್ದನು; ಆತನು ಜಯತೀರ್ಥರನ್ನು ಅರಮನೆಗೆ ಬರಮಾಡಿಕೊಂಡು ಅವರನ್ನು ಸನ್ಮಾನಿಸಿ ದನು. ಧುಂಡಿರಾಜನ ಎರಡನೆಯ ಮಗ ಪುರಂದರಗಡದ ಕೃಷ್ಣಪ್ಪನಾಯಕ ರಲ್ಲಿ— ಶ್ರೀನಿವಾಸನಾಯಕನೆಂಬ ಶ್ರೀಮಂತನು ಅವತರಿಸಿದನು. ಆತನೇ ತ್ಯಾಗಮೂರ್ತಿಯಾದ ಪುರಂದರದಾಸರಾಯ. ಇಂತಹ ಪ್ರಖ್ಯಾತ ಮನೆತನ ದಲ್ಲಿ ಹುಟ್ಟಿದ ನಾವು ಈಗ ಅನಾಥರಾಗಿರುವೆವು. ಕೆಳದಿಯ ನಾಯಕರು ನಮ್ಮ ಜಹಗೀರಿಯನ್ನು ಕಸಿದುಕೊಂಡಿರುವರು. ಸಾರ್ವಭೌಮರ ಕೃಪಾ ನೌಕೆಯ ಸಹಾಯದಿಂದ ನಾವು ಇನ್ನು ಮುಂದೆ ಕಷ್ಟವೆಂಬುವ ಸಮುದ್ರದಿಂದ ಪಾರಾಗಬೇಕು." ಯುವಕನ ಅಸ್ಖಲಿತ ವಾಣಿಯಿಂದ ಹೊರಟ ಆಶ್ಚರ್ಯವೂ ಅದ್ಭುತವೂ ಆದ ಈ ಇತಿಹಾಸವನ್ನು ಅಕ್ಬರ್‌ಮಹಾಶಯನು ಸಾವಧಾನಚಿತ್ತ ದಿಂದ ಕೇಳಿದನು. ಅಲ್ಲದೆ ಅವರಿಗೆ ಅಮೌಲ್ಯವಾದ ರತ್ನಾಭರಣಗಳನ್ನೂ ಉಡುಪುಗಳನ್ನೂ ಬಹುಮಾನವಾಗಿಕೊಟ್ಟು ಮರ್ಯಾದಿಸಿದನು. ಇವರ

ಪ್ರಯಾಣದ ಸಲುವಾಗಿ ಎಲ್ಲ ಸೌಕರ್ಯಗಳನ್ನೂ ಒದಗಿಸಿಕೊಡುವಂತೆ ರಾಜ ಶಾಸನವನ್ನು ಹೊರಡಿಸಿದನು.

ಅಣ್ಣಾಜಿನಾಯಕನು ಚಕ್ರವರ್ತಿಯ ಅಪ್ಪಣೆಯನ್ನು ಪಡೆದು ಸಹೋದರರೊಂದಿಗೆ ನಾರಣಪ್ಪನ ಹವೇಲಿಗೆ ಬಂದು ಸೇರಿದನು. ಈ ವೃತ್ತಾಂತವನ್ನು ಫರಕಷಿಯರ್ ಕವಿಯು ತನ್ನಿಂದ ರಚಿತವಾದ "ಅಕ್ಬರನಾಮೆ" ಎಂಬ ಗ್ರಂಥದಲ್ಲಿ "ಅಕ್ಬರ್‌ಚಕ್ರವರ್ತಿಗೂ ಅಣ್ಣಾಜಿನಾಯಕನಿಗೂ ನಡೆದ ಸಂವಾದ" ಎನ್ನುವ ಶಿರೋನಾಮೆಯುಳ್ಳ ಅಧ್ಯಾಯದಲ್ಲಿ ವಿಶದವಾಗಿ ಉಲ್ಲೇಖಿಸಿರುತ್ತಾನೆ. ಇವರ ಆಗಮನ ವೃತ್ತಾಂತವು ಕುಂಭಕೋಣೆಯಲ್ಲಿದ್ದ ಶ್ರೀವಿಜಯೀಂದ್ರಸ್ವಾಮಿಗಳಿಗೆ ವರದಿಯಾಯಿತು. ಅವರು ತಮ್ಮ ಬಂಧುಗಳಾದ ಇವರನ್ನು ಅಲ್ಲಿಗೆ ಕರೆಸಿಕೊಂಡರು. ಅಣ್ಣಾಜಿನಾಯಕನಿಗೆ ಅವರೇ ಸ್ವತಃ ದ್ವೈತವೇದಾಂತಶಾಸ್ತ್ರ ಪಾಠ ಹೇಳಿದರು ಅಲ್ಲದೆ ತಮ್ಮ ಜ್ಞಾತಿಸಹೋದರ ಲಕ್ಷ್ಮಣದೇವನ ಮಗಳು ಅರವಿಂದಮ್ಮನೆಂಬ ಕನ್ಯಾರತ್ನವನ್ನು, ಅಣ್ಣಾಜಿನಾಯಕನಿಗೆ ಕೊಟ್ಟು ವಿವಾಹ ಮಾಡಿಸಿದರು. ಶ್ರೀವಿಜಯೀಂದ್ರಸ್ವಾಮಿಗಳು ತಮ್ಮ ವೃದ್ಧಾಪ್ಯದ ದೆಶೆಯಿಂದ ಬಂಧುವೂ ಪಂಡಿತೋತ್ತಮನೂ ಆಗಿದ್ದ ಅಣ್ಣಾಜಿನಾಯಕನಿಗೆ ಪಾರಿವ್ರಾಜಿಕಾಶ್ರಮವನ್ನು ದಯಪಾಲಿಸಿದರು. ಇವರೇ ಷಾಷ್ಟಿಕಕುಲಭೂಷಣರೂ, ಮಧ್ವಮತಾಬ್ಧಿಚಂದ್ರಮರೂ ಆದ ಶ್ರೀ ಸುಧೀಂದ್ರತೀರ್ಥರು.

ಇವರು ತಿರುಪತಿಯ ಬ್ರಹ್ಮೋತ್ಸವ ಕಾಲದಲ್ಲಿಯೂ, ಉಡುಪಿಯ ಪರ್ಯಾಯದಲ್ಲಿಯೂ, ಪ್ರತಿವರ್ಷ ಶ್ರೀಪಾದರಾಜರ ಆರಾಧನೆಯ ಕಾಲದಲ್ಲಿಯೂ, ಪಂಡಿತರ ಪರಿಷತ್ತನ್ನು ಕೂಡಿಸಿ ಅವರವರ ಪಾಂಡಿತ್ಯಕ್ಕನುಗುಣವಾಗಿ ಸಂಭಾವನೆಯನ್ನು ಕೊಡುವ ಪದ್ಧತಿಯನ್ನು ರೂಢಿಗೆ ತಂದರು ಈ ವಿದ್ವತ್ಸಭೆಗೆ ತ್ರಿಮತೀಯ ವಿದ್ವನ್ಮಣಿಗಳೂ ಬರುತ್ತಿದ್ದರು. ಇದಕ್ಕೆ ಚಂದ್ರಗಿರಿಯ ರಾಜನು ಸಮ್ಮತಿಸಿದ್ದನಲ್ಲದೆ ಶ್ರೀನಿವಾಸದೇವರ ಸನ್ನಿಧಿಯಲ್ಲಿ ಪಂಡಿತರ ಸಮ್ಮೇಳನವು ದೇವಾಲಯದ ಕಾಣಿಕೆಯಿಂದ ನಡೆಯತಕ್ಕುದೆಂದು ರಾಜಶಾಸನವನ್ನು ಹೊರಡಿಸಿದನು. ತಿರುಪತಿಯ ದೇವಾಲಯದ ಅಧ್ಯಕ್ಷತೆಯು ಶ್ರೀವ್ಯಾಸ

ರಾಯರ ಶೀರದಲ್ಲಿ ಮಂಡಿಸಿದ್ದ, ತಂಗಿಹಳ್ಳಿಮನೆತನದ ಶ್ರೀಜಗನ್ನಾಥತೀರ್ಥರವರೆಗೂ ಇತ್ತು. ಇವರಿಗೆ ಭಾಷ್ಯದೀಪಿಕಾಚಾರ್ಯರೆಂದೂ ಪ್ರಸಿದ್ಧಿಯಿದೆ. ಈ ಮಹನೀಯರ ವೃಂದಾವನವು ವಿದ್ಯಾನಗರವೆಂದು ಹಿಂದೆ ಪ್ರಸಿದ್ಧವಾಗಿದ್ದ ಕುಂಭಕೋಣದ ಮುಖ್ಯ ಬೀದಿಯಲ್ಲಿ ವಿಸ್ತಾರವಾದ ತೆಂಗಿನ ತೋಟದಲ್ಲಿದೆ

**ಅವರ ವೃಂದಾವನದಪಕ್ಕದಲ್ಲಿಯೇ ಇನ್ನೂ ಎರಡು ವೃಂದಾವನಗಳಿವೆ. ಒಂದು ಶ್ರೀವಿದ್ಯಾನಾಥತೀರ್ಥರದು. ಮತ್ತೊಂದು ಶ್ರೀವಿದ್ಯಾಪತಿತೀರ್ಥರದು. ಇಲ್ಲಿ ಪ್ರತಿದಿನವೂ ಪೂಜೆ ಮತ್ತು ಹಸ್ತೋದಕಾದಿಸೇವೆಗಳು ನಡೆಯುತ್ತಿವೆ.**

ಅಣ್ಣಾಜಿನಾಯಕರ ಎರಡನೆಯ ಸಹೋದರ ಕೃಷ್ಣಪ್ಪನಾಯಕನು ಮಧುರೆಯ ವೀರಪ್ಪನಾಯಕನ ಆಳ್ವಿಕೆಯಲ್ಲಿ ಮಂತ್ರಿಪದವೀಧರರಾಗಿದ್ದನು ಈತನಿಗೆ ಸರಸ್ವತಮ್ಮನೆಂಬ ಮಗಳಿದ್ದಳು. ಆಕೆಯನ್ನು ಶಾಸ್ತ್ರಿಕಮನೆತನದ "ಬೀಗಮುದ್ರೆ" ಮನೆತನಕ್ಕೆ ಸೇರಿದ ವೆಂಕಣ್ಣಭಟ್ಟರಿಗೆ ಕೊಟ್ಟು ಲಗ್ನವಾಗಿದ್ದಿತು. ಇವರು ಸುಧೀಂದ್ರತೀರ್ಥರ ಬಳಿ ವಿದ್ಯಾವ್ಯಾಸಂಗ ಮಾಡಿ ಗೀರ್ವಾಣ ಮತ್ತು ಕನ್ನಡ ಈ ಉಭಯ ಭಾಷೆಗಳಲ್ಲಿಯೂ ಸಂಪೂರ್ಣ ಪಾಂಡಿತ್ಯವನ್ನು ಗಳಿಸಿದ್ದರು. ಶ್ರೀಜಯತೀರ್ಥರಿಂದ ರಚಿತವಾದ "ನ್ಯಾಯಸುಧಾ" ಗ್ರಂಥಕ್ಕೆ "ಪರಿಮಳ" ವೆಂಬುವ ಟಿಪ್ಪಣಿಯನ್ನು ರಚಿಸಿದುದರಿಂದ ಇವರಿಗೆ "ಪರಿಮಳಾಚಾರ್ಯ" ರೆಂಬ ಘನವಾದ ಪ್ರಶಸ್ತಿಯು ದೊರಕಿತು. ಶ್ರೀಸುಧೀಂದ್ರತೀರ್ಥರು ವೃಂದಾವನ ಪ್ರವೇಶ ಮಾಡುವುದಕ್ಕೆ ಕೆಲಕಾಲ ಮುಂಚಿತವಾಗಿ ಅಂದರೆ ಕ್ರಿ. ಶ. ೧೬೨೩ರಲ್ಲಿ ವೆಂಕಣ್ಣಭಟ್ಟರಿಗೆ ಚತುರ್ಥಾಶ್ರಮವನ್ನೂ ಮಠಾಧಿಪತ್ಯವನ್ನೂ ಕೊಟ್ಟರಲ್ಲದೆ "ಶ್ರೀರಾಘವೇಂದ್ರತೀರ್ಥ"ರೆಂದು ನಾಮಕರಣವನ್ನೂ ಮಾಡಿದರು. ಇವರು ಅನೇಕ ತಾತ್ತ್ವಿಕ ಗ್ರಂಥಗಳನ್ನೂ ದೇವರನಾಮಗಳನ್ನೂ ರಚಿಸಿರುತ್ತಾರೆ. ಇವುಗಳಲ್ಲಿ ಪರಿಮಳ, ಭಾವದೀಪಗಳು, ಚಂದ್ರಿಕಾಪ್ರಕಾಶ ಮತ್ತು ಉಪನಿಷತ್‌ಖಂಡಾರ್ಥಗಳು ಮುಖ್ಯವಾದವುಗಳು. ಇವರು ಶ್ರೀವ್ಯಾಸರಾಯರ ಅವತಾರಸಂಭವರೆಂದು ಮಧ್ವಮತಾನುಯಾಯಿಗಳ ನಂಬುಗೆ. ಅಕ್ಬರ್‌ಬಾದಷಹನ ಆಸ್ಥಾನದಲ್ಲಿ ಬಿಜಾಪುರದ ಸುಲ್ತಾನರ ರಾಯಭಾರಿಯಾಗಿದ್ದ ನಾರಣಪ್ಪನ ಮಗ ವೆಂಕಣ್ಣನೆಂಬಾತನು ಆದವಾನಿಯ ನವಾಬನ ಬಳಿ ಮುಖ್ಯ ಮಂತ್ರಿಯಾಗಿದ್ದನು. ಈ ವೆಂಕಣ್ಣನು ಶಾಸ್ತ್ರಿಕಮನೆ

ತನದ ಹವೇಲಿವಂಶಸಂಭವನೆಂಬುವ ವಿಚಾರ ಇಲ್ಲಿ ಮತ್ತೊಮ್ಮೆ ಹೇಳಬೇಕಾಗಿಲ್ಲ. ಈ ವೆಂಕಣ್ಣನು ಮಂತ್ರಾಲಯ (ಮಂಚಾಲೆ) ಕ್ಷೇತ್ರವನ್ನು ಆದವಾನಿ ನವಾಬನಿಂದ ಶ್ರೀರಾಘವೇಂದ್ರಸ್ವಾಮಿಗಳಿಗೆ ಇನಾಂ ಆಗಿ ಕೊಡಿಸಿದನು. ಈತನು ಮಂತ್ರಾಲಯದಲ್ಲಿ ೬೦ ಮನೆಗಳನ್ನು ಕಟ್ಟಿಸಿ ಅವುಗಳನ್ನು ತಮ್ಮ ಬಂಧುಗಳಾದ ಪಾಷ್ಟಿಕರಿಗೆ ವಾಸಲಾಗಿಟ್ಟನು. ಅನಂತರ ತನ್ನ ಗುರುಗಳಾದ ಶ್ರೀರಾಘವೇಂದ್ರತೀರ್ಥರ ಆಣತಿಯಂತೆ ಕರಿಯಶಿಲೆಯಿಂದ ಶೋಭಾಯಮಾನವಾದ ವೃಂದಾವನವನ್ನು ನಿರ್ಮಿಸಲು ಅಣಿಮಾಡಿಟ್ಟನು. ದೇವಾಂಶಸಂಭೂತರಾದ ಶ್ರೀರಾಘವೇಂದ್ರಸ್ವಾಮಿಗಳು ಶಾಲೀವಾಹನಶಕ ೧೫೯೩ನೆ ಶ್ರಾವಣ ಕೃಷ್ಣ ಬಿದಿಗೆಯ ದಿನ (ಕ್ರಿ. ವರ್ಷ ೧೬೭೧) ಸಶರೀರರಾಗಿ ವೃಂದಾವನ ಪ್ರವೇಶ ಮಾಡಿದರು. ಇದು ಆಗಿಹೋಗಿ ૩೦೯ ವರ್ಷಗಳಾಗಿದ್ದಾಗ್ಯೂ ಈಗಲೂ ಇವರ ಕೀರ್ತಿಯು ಶರತ್ಕಾಲದ ಹುಣ್ಣಿಮೆಯ ಚಂದ್ರನ ಪ್ರಕಾಶದಂತೆ ಬೆಳಗುತ್ತಲಿದೆ. ಇವರ ಮಹಾತ್ಮೆಯನ್ನು ತಿಳಿಸತಕ್ಕ ಗ್ರಂಥಗಳು ಹೇರಳವಾಗಿದೆಯಾದರೂ ಅವುಗಳಲ್ಲಿ ವರ್ಣಿತವಾಗದಿರುವ ಕೆಲವಂಶಗಳನು ಮಾತ್ರ ಈ ಲೇಖನದಲ್ಲಿ ತಿಳಿಸಿರುತ್ತೇವೆ.

## ತೃಣಪುರದ ರಾಘವೇಂದ್ರಪ್ಪ

ಪಾಷ್ಟಿಕರಲ್ಲಿ "ತೃಣಪುರದರಸ"ರೆಂಬ ಹೆಸರಿನ ಬೇರೊಂದು ಮನೆತನದವರಿದ್ದಾರೆ. ಇವರನ್ನು ಗ್ರಾಮ್ಯಭಾಷೆಯಲ್ಲಿ "ಹುಲ್ಲುಬಂಡಿ"ಯವರೆಂದು ಸಂಭೋಧಿಸಿರುವರು. ಇವರ ಹಿರಿಯರು ವಿಜಯನಗರ ಚಕ್ರಾಧಿಪತ್ಯದಲ್ಲಿ ರೈತರಿಂದ "ಧಾನ್ಯರೂಪ" ಕಂದಾಯವನ್ನೆತ್ತುವ ರಾಜ್ಯಾಂಗದ ವರಿಷ್ಠಾಧಿಕಾರಿಗಳಾಗಿದ್ದರು. ಈ ಮನೆತನದಲ್ಲಿ ರಾಘವೇಂದ್ರಪ್ಪನೆಂಬಾತನು ಕ್ರಿ ಶ. ೧೮ನೆಯ ಶತಮಾನದ ಕೊನೆಯ ಭಾಗದಲ್ಲಿ ಜನ್ಮತಾಳಿದನು. ಈತನು ಗೀರ್ವಾಣ ಮತ್ತು ಕನ್ನಡ ಭಾಷೆಗಳಲ್ಲಿ ಪೂರ್ಣಪಾಂಡಿತ್ಯವನ್ನು ಸಂಪಾದಿಸಿದ್ದನು; ಈತನಿಗೆ ಉರ್ದು, ಹಿಂದೀ, ಮಹಾರಾಷ್ಟ್ರ ಮತ್ತು ಫಾರಸೀ ಭಾಷೆಗಳೂ ಬರುತ್ತಲಿದ್ದುವು; ಕ್ರಿ. ಶ. ೧೭೯೯ನೆಯ ಸಂವತ್ಸರದಲ್ಲಿ ಮೈಸೂರಿನ ರೆಸಿಡೆಂಟರಾಗಿದ್ದ ಕರ್ನಲ್ ಕ್ಲೋಸ್ ಸಾಹೇಬರ ಬಳಿ ಈತನು

ಆಪ್ತಕಾರಕೂನನಾಗಿದ್ದನು. ಈ ವಿಚಾರವನ್ನು ಈತನು ತನ್ನಿಂದ ರಚಿತವಾದ ಸಾರಸ್ವತೀಪರಿಣಯದಲ್ಲಿ ಸ್ಪಷ್ಟಪಡಿಸಿರುವನು.

ಪದ:–ಆಂಗ್ಲರಾಯರ ಮಂತ್ರಿವರ ಕ್ಲೋಸೆಂಬರಾತನ ಪೂರ್ಣನಾಮಕ
ವಿಪ್ರನೋರ್ವನು ಮಂತ್ರಿ ಮತ್ತೋರ್ವ ।
ಇರುವ ಕಾಲದಿ ರಾಘವೇಂದ್ರರ ನಾಮಧಾರಕನವರ ಬಳಿಯಲಿ
ಕರಣಿಕನು ತಾನಾಗಿ ನೆಲಸಿದ ಹೂಣದೊರೆಯೊಳಗೆ ॥

ಈ ಗ್ರಂಥರಚನೆಗೆ ಸಹಾಯ ಮಾಡಿದ ಆಂಗ್ಲೇಯ ಅಧಿಕಾರಿಗೆ ಈತನು ತನ್ನ ಕೃತಜ್ಞತೆಯನ್ನು ವ್ಯಕ್ತಪಡಿಸಿದ್ದಾನೆ.

ಪದ:-ಪಂಪ ರಚಿಸಿದ ಕಾವ್ಯದಿಂ ಸಂಪನ್ನವೆನಿಸುವ ಪದ್ಧತಿಯ ಪೆಂಪಪಡೆದೀ
ಕಾವ್ಯರಚಿಸಿದೆ ನಾನು ಸಮ್ಮುದದಿ ।
ಕೆಂಪುವರ್ಣದ ಒಡಲು ಹೊತ್ತಿಹ ಕುಂಫಣಿಯ ಸರ್ದಾರರೊಬ್ಬರು
ಪೆಂಪಿನಿಂದ ಸಹಾಯ ನೀಡಿದರು ॥

ಮೈಸೂರಿನ ರಾಜಕೀಯದಲ್ಲಿ ಹೆಸರುವಾಸಿಯಾಗಿದ್ದ ಆಂಗ್ಲೇಯಾಧಿಕಾರಿಗಳಲ್ಲಿ ಮಾರ್ಕ್ವಿಸ್ ಆಫ್ ವೆಲ್ಲಿಸ್ಲಿ ಮತ್ತು ಕರ್ನಲ್ ಕ್ಲೋಸ್ ಇವರು ಪ್ರಮುಖರು. ಕ್ರಿ. ಶ. ೧೮೦೩ರವರೆಗೆ ಬ್ರಿಟಿಷ್ ರೆಸಿಡೆಂಟರಾಗಿದ್ದಂತೆ ಗೊತ್ತಾಗುವುದು. ಆದುದರಿಂದ ಈತನಿಗೆ ಸಹಾಯ ಮಾಡಿದವರು ಇವರಿಬ್ಬರಲ್ಲಿ ಒಬ್ಬರಾಗಿರಬೇಕು. ಬ್ರಹ್ಮ ಮತ್ತು ಸರಸ್ವತಿ ಇವರ ವಿವಾಹ ವೃತ್ತಾಂತವೇ ಈ ಕಾವ್ಯದ ಕಥಾವಸ್ತುವು. ಇದನ್ನು ಬ್ರಹ್ಮಾಂಡಪುರಾಣದಿಂದ ಆರಿಸಿ ತೆಗೆದು ಕೊಂಡಿರುವುದಾಗಿ ಈತನು ಹೇಳಿರುವನು ಈ ಕಾವ್ಯದಲ್ಲಿ ಒಂದು ನವೀನತೆ ಇದೆ ; ಯತಿ, ಗಣ, ಪ್ರಾಸುಗಳೆಂಬುವ ಕಟ್ಟುಪಾಡಿಗೆ ಒಳಗಾಗಿ ಈತನು ಕಾವ್ಯರಚನೆ ಮಾಡಿಲ್ಲ. ಕವಿಯ ಹೃದಯವನ್ನು ನಿರಾತಂಕವಾಗಿ ತಿಳುಹಿಸುವುದಕ್ಕೆ ಸಹಕಾರಿಯಾಗಿ ಪಂಪಮಹಾಕವಿಯಿಂದ ಪ್ರಣೀತವಾದ "ಪದ" ಎನ್ನುವ ನೂತನ ಶೈಲಿಯಲ್ಲಿ ಕಾವ್ಯರಚನೆ ಮಾಡಿರುವುದಾಗಿ ಉಲ್ಲೇಖಿಸಿದ್ದಾನೆ. ಇದರ ಲಕ್ಷಣವನ್ನು ತಿಳಿಸುವ "ಪದ"ವನ್ನು ಇಲ್ಲಿ ಕೊಡಲಾಗಿದೆ.

ಪದ –ಮೊದಲೆರಡು ಪಾದಗಳು ಮುಂದಿನ ಪಾದ ನಾಲ್ಕೈದಾಗಲದು ಸಾರ್ಥಕ
ವಾಗಲು ಬೇಕು ವಾಕ್ಯಲಕ್ಷಣ ಕೆಡದೆ ಇರಬೇಕು ।
ಅಕ್ಷರದಲಕ್ಷಣವು ಶಬ್ದದಲಕ್ಷಣವು ತಾನಿದರ ಜತೆಯಲಿ ವಾಕ್ಯಲಕ್ಷಣ
ಶ್ರಾವ್ಯಲಕ್ಷಣವಿರಲು ಪೇಳ್ವರು ಸಪ್ತಪದಿಯೆಂದು ॥
ಇದಕೆ ಛಂದಶ್ಶಾಸ್ತ್ರಕಾರರು ಪದಪದೆಂದೇ ನಾಮಕೊಟ್ಟರು ಪದವು
ವೇದದೊಳಡಗಿಕೊಂಡಿದೆ ಕ್ರಮವು ಜಟಿಸಹಿತ ।
ಇದನು ಕನ್ನಡದೊಳಗೆ ಪಂಪನು ಪೇಳ್ದ ನಾನದನನುಸರಿಸಿ ಪೇಳ್ದಿಹೆನು
ಕೇಣವ ತೊರೆದು ಸುಜನರು ಮೆಚ್ಚುವಂದದಲಿ ॥

ಕವಿಯು ಇದನ್ನು ಹತ್ತು ಸಂಧಿಗಳನ್ನಾಗಿ ವಿಭಾಗಿಸಿದ್ದಾನೆ ಪ್ರತಿ ಸಂಧಿಯ ಕೊನೆಯಲ್ಲಿಯೂ ಈ "ಪದ"ವಿರುತ್ತದೆ,

ಪದ:–ವರದೆನೀಸಾರಸ್ವತಾಖ್ಯದ ಪರಿಣಯುವ ಸುರಸಕೃತಿ ಇದು ನಿರತಬರ
ದೋದುತ್ತ ಕೇಳುವರ ।
ಪರಮ ಮಂಗಳನಾಮ, ರಾಘವನಾಮ ಸರಸತಿ ಬೊಮ್ಮ ಮಾರುತಿ ಸಹಿತ
ಸುಜ್ಞಾನವನು ಕರುಣಿಸಿ ನಿರುತಪೊರೆವನು ಪರಮ ಮಂತ್ರಾಲಯದ
ಕ್ಷೇತ್ರದಲಿದ್ದು ಜಗವೆಲ್ಲ ॥

ಈತನು ಗ್ರಂಥಾರಂಭದಲ್ಲಿ ತನ್ನ ಇಷ್ಟದೇವತೆಯನ್ನೂ ಮತಾಚಾರ್ಯರಾದ ಶ್ರೀಮನ್ಮಧ್ವಾಚಾರ್ಯರನ್ನೂ ಬಳಿಕ ಶ್ರೀವ್ಯಾಸರಾಯಸ್ವಾಮಿಗಳನ್ನೂ ಸ್ತೋತ್ರ ಮಾಡಿದ್ದಾನೆ.

ಈ ಕಾವ್ಯದ ಮೊದಲಿನಲ್ಲ ತನ್ನ ವಂಶದ ಅನುಪೂರ್ವಿಯನ್ನು ತಿಳಿಸುವುದಕ್ಕಾಗಿ "ಕವಿವಂಶಾನುವರ್ಣನ ಸಂಧಿ" ಎನ್ನುವ ಪ್ರತ್ಯೇಕ ಸಂಧಿಯನ್ನು ರಚಿಸಿದ್ದಾನೆ. ಮಾದರಿಗಾಗಿ ಕೆಲವು ಪದಗಳನ್ನು ಇಲ್ಲಿ ಎತ್ತಿ ಬರೆಯಲಾಗಿದೆ.

ಪದ:–ಈ ಚತುರ್ದಶ ಲೋಕದಂದದಿಲೋಚನಕೆ ಪ್ರಖ್ಯಾತರೆನಿಸಿದ ಸುಚರಿತರು
ಸುಜ್ಞಾನಿಗಳು ಶೂರರು ಗುರುಭಕ್ತಿ ಸಂಯುತರು ।

ಪ್ರಚಲಿಸುವ ಹದಿನಾಲ್ಕು ಋಷಿಗಳ ನಿಚಯಗೋತ್ರೋದ್ಭವರು ಸಂಜನಿ
ಸಿಹರು ಖೇಚರಾಂಶವ ಪಡೆದು ಷಾಷ್ಟಿಕರೆನಿಸಿ ಧರೆಯೊಳಗೆ ||

ಶ್ರೀಮನ್ಮಧ್ವಾಚಾರ್ಯರ ಶಿಷ್ಯತ್ವವನ್ನು ವಹಿಸಿದವರಲ್ಲಿ ಷಾಷ್ಟಿಕರೇ ಮೊದಲಿಗರೆಂದು ತಿಳಿಸುತ್ತಾನೆ.

ಪದ–ಭಾಗವತರಿವರೆಲ್ಲ ಮೊದಲಲಿ ಪೋಗಿ ಮಧ್ವಾಚಾರ್ಯವರ್ಯರ ಯೋಗ
ಭಕ್ತಿಗೆ ಮೆಚ್ಚಿ ಶಿಷ್ಯತ್ವವನು ತಾವಹಿಸಿ ।
ಭಾಗಿಗಳು ತಾವಾಗಿ ಸತ್ಸಂದಾಕಮಾರ್ಗದಿ ಪರಿಯೆ ಸರ್ವೋತ್ತಮನೆನಿಪ
ಮಾರ್ಗವನು ಸಾಧಿಸುತಲಿಹರವರು ಭಾರತನಾಮಭೂಮಿಯೊಳಗೆ ||

ಶ್ರೀವ್ಯಾಸರಾಯಸ್ವಾಮಿಗಳು ಷಾಷ್ಟಿಕರಿಗೆ ವಿಜಯನಗರಚಕ್ರಾಧಿಪತ್ಯದಲ್ಲಿ ಉನ್ನತಾಧಿಕಾರಗಳನ್ನು ದೊರಕಿಸಿ ಕೊಟ್ಟರೆಂದು ಅವರನ್ನು ಸ್ತೋತ್ರ ಮಾಡಿದ್ದಾನೆ.

ಪದಃ–ಬಂಧುಭಾವಗಳಿಂದ ತನ್ನವರೆಲ್ಲ ಒಂದಾಗಿರಲು ಕರದಾನಂದದಿಂದಲಿ
ವಿಜಯನಗರದೊಳು ।
ಸಂದಮಹದಧಿಕಾರ ವೃಂದದೊಳವರನಿರಿಸುತ ಬರದ ಬಹು ಭಾಗ್ಯಗಳ
ನನುಭವದಿಂದ ರಾಜ್ಯಬ್ರಿಂದದೊಳು ನೆರಳಾಗಿರುತಾ ಯುಧಿಷ್ಟಿರನ
ರವನೆ ಜನಿಸಿರ್ದ ಧರೆಯೊಳು ಕೃಷ್ಣನಾಮದಲಿ ॥
ಎಂದು ಸಂತೈಸುತ ಪೊರೆವುತಲಿರ್ದರಾ ಗುರುವ್ಯಾಸರಾಯರು, ಕರವ
ಧಾನ್ಯದ ರೂಪದಿಂದರಸಂಗೆ ಸಲ್ಲಿಸುವ ।
ಚೆಂಡಮುದ್ರೆಯ ಧರನು ಮಂತ್ರಿಗೆ ಅಖಂಡಲಾಧಿಪನಿತ್ತ ಬಂದುದು
ಹುಲುಬಂಡಿಯರಸಂತೆಂದು ಕರೆವರು ಎಲ್ಲರಾಪೆಸರಾ ॥

ಈತನು ಭರತಖಂಡವನ್ನು ಎರಡಾವೃತ್ತಿ ಸಂಚರಿಸುದುದಕ್ಕೆ ಈ ಕೆಳಕಂಡ ಕಾರಣವನ್ನು ಕೊಟ್ಟಿರುವನು,

ಪದ–ಆಗಲೇ ದುರ್ಮತಿಯುಸಂವತ್ಸರವಾಗ ಜನಗಣತೆಯನು ಭಾರತದಲ್ಲಿ
ಮಾಡುವದೆಂದು ಆಂಗ್ಲನಾಯಕರು ನಿರ್ಧರಿಸಿ ।
ನಮ್ಮ ಕ್ಲೋಸಾಖ್ಯರಿಗೆ ಮುಖ್ಯಾಧಿಕಾರವನಿತ್ತರಾಗಲು ನಾನೆ
ಕರಣಿಕನಾಗಿ ಇರುತಿರ್ದೆ ॥
ಯರಡು ವರುಷದ ಕಾಲ ಪರಿಯಂತರವು ನಾನೀಜನಗಣತೆಯ ಮಹಾ
ಕಾರ್ಯದಲ್ಲಿ ಭಾರತವ ।
ಯರಡು ಬಾರಿಯು ಸುತ್ತಿದೆನು ಬಹುಲಿಖಿತ ಪ್ರಾಚೀನ ವೈಭವದೆಸಕ
ಗೋಚರವಾಯ್ತು ಆದನೆಲ್ಲ ಸಂಗ್ರಹಿಸಿ ತಂದಿರುವೆ ॥

ಇವುಗಳನ್ನು ಗ್ರಂಥ ರೂಪದಲ್ಲಿ ಬರೆದಿಡಲು ಈತನು ಹೇಳಿರುವ ಕಾರಣವು ಗಮನಾರ್ಹವಾಗಿದೆ.

ಪದ–ನಮ್ಮ ಗುರುವರರಾಘವೇಂದ್ರರು ಕೊಟ್ಟರೆನಗಪ್ಪಣೆಯನಿದನೀಂ
ಬರೆದಿಡುವುದೆಂದೆನುತ ।
ಅವರ ಭರವಸೆಯಿಂದ ಬರೆದೆನು ದೋಷವಿದರೊಳಗಿಲ್ಲ ಪುನರಪಿಯು
ಪೇಳ್ವೆನು ರಾಘವೇಂದ್ರರ ನಾಮಪೊತ್ತಿಹ ಮೂಢ ಮಾನವನು॥

ಪ್ರಥಮತಃ ಭರತಖಂಡದಲ್ಲಿ ಜನಗಣತೆಯು ಆರಂಭವಾದುದು ಕ್ರಿ.ಶ. ೧೮೦೧ ನೆಯ ವರುಷದಲ್ಲಿ. ಇದು ಸರ್ಕಾರಿ ಕಾಗದ ಪತ್ರಗಳಿಂದಲೂ ಸೆನ್‌ಸಸ್ ವರದಿಗಳಿಂದಲೂ ಧೃಡಪಟ್ಟಿದೆ.

ಹತ್ತೊಂಭತ್ತನೆಯ ಶತಮಾನದ ಆರಂಭಕಾಲಕ್ಕೆ ಷಾಷ್ಟಿಕರು ತಮ್ಮ ಪ್ರಾಚೀನ ವೈಭವವನ್ನು ಕಳೆದುಕೊಂಡು ದರ್ಶನದ ಚಂದ್ರನಂತೆ ಕಳಾಹೀನರಾಗಿದ್ದರೆಂಬ ಹೃದಯವಿದ್ರಾವಕ ದೃಶ್ಯವನ್ನು ಈತನು ಈ ರೀತಿ ಚಿತ್ರಿಸಿರುವನು.

ಪದ–ಈಗ ನಮ್ಮವರಲ್ಲಿ ಹಿಂದಿನತೆರೆದ ಪ್ರಖ್ಯಾತರುಗಳಿಲ್ಲದೆ ಉಳಿದ ವಿಪ್ರನಿ
ಕಾಯ ನಮ್ಮೊಳು ಅಪ್ಪರಂದದಿನಟಿಸಿ ಮನದೊಳು ದ್ವೇಷಬುದ್ಧಿಯಲಿ।

ಬರಿದೆ ಕೊರಗುವರೇಕೆ ನಾವೆಲ್ಲರಲಿ ಸಮತಾಭಾವದಿಂದಿರುತಿಹೆವು
ಗುರುವರವ್ಯಾಸರಾಯರ ದ್ವೇಷಗೈವರ ಪ್ರತ್ಯಕ್ಷದಲಿ ಕಂಡಿರುವೆ ॥
ಬೀಗಮುದ್ರೆಯ ಗೌತಮಾನ್ವಯ ವೀಣೆ ವೆಂಕಣ್ಣಾರ್ಯರೆಂಬರು
ರಾಘವೇಂದ್ರಸನಾಮ ಯತಿವರರಾಗಿ ಪ್ರತ್ಯಕ್ಷದಲಿ ಶೋಭಿಸುತ ।
ಬೇಡಿದಿಷ್ಟಾರ್ಥಗಳ ಸಕಲರಿಗೀವ ಕರುಣಾಸಿಂಧುವವರನು ಸೇವಿಸುತ
ಬೇಡುತಿರ್ಪರೆ ಪಾಷ್ಟಿಕಕುಲವರರೋತ್ತಮರೆಂದು ಪೇಳ್ವರೆ
ಸೇದಿನೋಯುವರು

ಶ್ರೀಮನ್ಮಧ್ವಾಚಾರ್ಯರ "ಬ್ರಹ್ಮಸೂತ್ರಭಾಷ್ಯ" ಗ್ರಂಥಕ್ಕೆ "ಭಾಷ್ಯದೀಪಿಕೆ" ಎನ್ನುವ ಅಮೂಲ್ಯವಾದ ವ್ಯಾಖ್ಯಾನವನ್ನು ರಚಿಸಿ ಭಾಷ್ಯದೀಪಿಕಾಚಾರ್ಯರೆಂಬ ಹೆಸರಿನಿಂದ ಪ್ರಖ್ಯಾತರಾಗಿರುವ ಪಾಷ್ಟಿಕವಂಶಸಂಭೂತ ಶ್ರೀಜಗನ್ನಾಥತೀರ್ಥರ ವಿಚಾರವನ್ನು ಈತನು ಪ್ರಕಾಶಕ್ಕೆ ತಂದಿರುವನು.

ಪದ-ಸೂತ್ರಭಾಷ್ಯಗಳೆರಡಶೋಧಿಸಿ ದೀಪಿಕೆಯ ಪೆಸರಿನಲಿ ವ್ಯಾಖ್ಯಾನವನು
ರಚಿಸುತ ವ್ಯಾಸರಾಯರ ಪೀಠದಲಿ ಅತಿಪ್ರಖ್ಯಾತರೆಂದೆನಿಸಿ ।
ತಂಗಿಹಳ್ಳಿಯ ಮನೆತನದ ಕೌಂಡಿಣ್ಯಗೋತ್ರೋದ್ಭವರು ವರವಣಿ ಪಂಚ
ಗ್ರಾಮದ ವೃತ್ತಿವಂತರು ಜಗನ್ನಾಥಾಖ್ಯತೀರ್ಥರು ವೃಂದಾವನವ
ಸೇರ್ದರು ಎಂಟು ಮಾಸದಲಿ ॥

ಭಾಷ್ಯದೀಪಿಕೆ–ಇದು ಒಂದು ಮಧ್ವಸಿದ್ಧಾಂತದ ವಿಶ್ವಕೋಶದಂತಿರುವ ಗ್ರಂಥ. ಶ್ರೀಜಗನ್ನಾಥತೀರ್ಥರು, ಶ್ರೀಜಯತೀರ್ಥರ ಭಾಷ್ಯದ ಟೀಕೆಯಾದ ತತ್ತ್ವಪ್ರಕಾಶಿಕೆಯನ್ನು ಅನುಸರಿಸಿಯೇ ಭಾಷ್ಯಕ್ಕೆ ವ್ಯಾಖ್ಯಾನವನ್ನು ರಚಿಸಿದ್ದಾರೆ. ಗ್ರಂಥದ ಆದಿಯಲ್ಲಿರುವ ಮಂಗಳ ಶ್ಲೋಕಗಳಿಂದಲೇ ಇದು ತಿಳಿದು ಬರುತ್ತದೆ. ಮಂಗಳ ಶ್ಲೋಕವು ಹೀಗಿದೆ—

ಜಯಾರ್ಯರಚಿತಾಂ ಟೀಕಾಮನುಸೃತ್ಯ ಯಥಾಮತಿ ।
ಜಗನ್ನಾಥಾಖ್ಯಯತಿನಾ ಕ್ರಿಯತೇ ಭಾಷ್ಯದೀಪಿಕಾ ॥
ಕ್ವಚಿದ್ಭಾಷ್ಯವಿವ್ಯಕ್ತ್ಯೈವ ಟೀಕಾರ್ಥೋಽಪಿ ವಿವಚ್ಯತೇ ।
ತತ್ತ್ವಪ್ರದೀಪತಾತ್ಪರ್ಯಚಂದ್ರಿಕಾದ್ಯುಕ್ತಮಾರ್ಗತಃ ॥

ಭಾಷ್ಯದಲ್ಲಿ ಸಂಕೋಚವಾಗಿ ಸೂಚಿತವಾಗಿರುವ ಶ್ರುತಿಸ್ಮೃತಿಗಳು ಪೂರ್ಣವಾಗಿ ಸೂಚಿತವಾಗಿವೆ. ಅವು ಎಲ್ಲಿಂದ ಉದ್ಧೃತವಾಗಿವೆ ಎಂಬುದೂ ತಿಳಿಸಲ್ಪಟ್ಟಿವೆ. ಈ ಮಹಾತ್ಮರ ವೃಂದಾವನವು ವಿದ್ಯಾನಗರವೆಂದು ಪ್ರಸಿದ್ಧವಾದ ಕುಂಭಕೋಣೆಯ ರಾಜಬೀದಿಯಲ್ಲಿ ವಿಸ್ತೃತವಾದ ಕಲ್ಪವೃಕ್ಷಾರಾಮದ ಮಧ್ಯದಲ್ಲಿ ದೇದೀಪ್ಯಮಾನವಾಗಿದೆ. ಅಂತ್ಯ ಶ್ಲೋಕವು ಹೀಗಿದೆ—

"ಮನ್ಮಾನಸಾಂಬುಜಸ್ಥೇನ ಹರಿಣಾ ಕೃತಯಾಂಜಸಾ ।
ಭಾಷ್ಯದೀಪಿಕಯಾ ಕೃಷ್ಣಃ ಪ್ರೀಯತಾಂ ಕಮಲಾಕರಃ ॥"

ಮೈಸೂರುಸೀಮೆಯ ದಿವಾನ್ ರೀಜಂಟರಾಗಿದ್ದ ಪೂರ್ಣಯ್ಯನವರು ದುರ್ಬಲರಾಗಿದ್ದ ಷಾಷ್ಟಿಕರ ಮೇಲೆ ಬಲವಾದ ಗದಾಪ್ರಹಾರ ಮಾಡಿ ಮುಂದೆ ಒಂದು ಶತಮಾನದವರೆಗೂ ಅವರು ತಲೆ ಎತ್ತದಂತೆ ಮಾಡಿದ್ದರು. ಇವರು ದೊಡ್ಡಬಳ್ಳಾಪುರದಲ್ಲಿ ಪ್ರಸಿದ್ಧರಾಗಿದ್ದ ದೇಶಪಾಂಡೆಯವರ ಇನಾಂಗ್ರಾಮ ಭೂಮಿಗಳನ್ನು ಸರ್ಕಾರಕ್ಕೆ ಮುಟ್ಟುಕೋಲು ಹಾಕಿಸಿದ ವಿಚಾರವು ಇಂದಿಗೂ ಆ ಕುಟುಂಬದವರ ಮನೆ ಮಾತಾಗಿದೆ. ರಾಘವೇಂದ್ರ ಕವಿಯು ಈ ವಿಚಾರವನ್ನು ತನ್ನ ಗ್ರಂಥದಲ್ಲಿ ಈ ರೀತಿ ಚಿತ್ರಿಸಿದ್ದಾನೆ.

ಪದ–ಅವರಿಗಾಶ್ರಯದಾತರೀಗಲು ಪೂರಣಯ್ಯ ಮಹಾನುಭಾವರು ನಮ್ಮ
ನಾಡಿನ ಜನತೆಗೀತನೆ ರಾಜಪ್ರತಿನಿಧಿಯು ।
ಷಾಹಿ ಬಹಮನಿ ಮೊಗಲ ಸಾಮ್ರಾಟರಿಗೆ ಪ್ರಣಿಧಿಯರಾಯಭಾರಿಗಳಾದ
ನಾರಣಪ್ಪನ ಪ್ರಪೌತ್ರರಿಗೆಲ್ಲ ಪರಶಿವನ ಕರಪಾತ್ರೆಯನು ಕರುಣಿಸಿ
ಹೆಮ್ಮೆ ಪಡುವವರು ॥

ಈ ರಾಘವೇಂದ್ರಪ್ಪನೂ, ಪೂರ್ಣಯ್ಯನವರೂ ಸಮಕಾಲೀನರು. ಶ್ರೀಜಗನ್ನಾಥತೀರ್ಥರು ವೃಂದಾವನಸ್ಥರಾದುದನ್ನು ಈತನು ಕಂಡು ಕೇಳಿ

ಬರೆದವನಾಗಿದ್ದಾನೆ. ಆದುದರಿಂದ ಈತನ ಹೇಳಿಕೆಯು ಸತ್ಯಾಂಶಗಳಿಂದ ಕೂಡಿದೆ ಎಂಬುದನ್ನು ವಾಚಕರು ಗಮನದಲ್ಲಿಡುತಕ್ಕುದಾಗಿದೆ. ಆಗ ಮೈಸೂರು ದೇಶದ ಮೇಲ್ವಿಚಾರಣೆಯು ಮದ್ರಾಸ್ ಗವರ್ನರ್‌ರ ಅಧಿಕಾರಕ್ಕೆ ಒಳಪಟ್ಟಿದ್ದಿತಾಗಿ ಸಮಾಜದ ಹಲವು ಮುಖಂಡರು ಅವರಿಗೆ ಈ ವಿಚಾರವಾಗಿ ಫಿರ್ಯಾದು ಮಾಡಿದ್ದರೆಂದು ಈ ಕೆಳಗಣ ಪದ್ಯದಿಂದ ತಿಳಿದು ಬರುವುದು.

ಪದ—"ಚಿಕ್ಕಬಳ್ಳಾಪುರದ ವೆಂಕಟಕೃಷ್ಣನಾಯಕಪೂಜ್ಯರೋರ್ವರು ನಮ್ಮ ತಂದೆಯು ದೇಶಪಾಂಡೆಯ ಕೃಷ್ಣರಾಯರು ಗುರುಜಗನ್ನಾಥವಿರಲರು, ಈಗ ಈರೋಡಿನಲ್ಲಿರುವ ಶಾಮಾಚಾರ್ಯರೊಬ್ಬರು ನಮ್ಮವರು. ನೆಲ್ಲಿಯ ತಿಮ್ಮಪ್ಪಾಖ್ಯರೆಲ್ಲರು ದೂರನಿತ್ತಿಹರೀಗ ಮದ್ರಾಸದ ಗೌರ್ನರ ಸಾಹೇಬರ ಬಳಿಯೊಳಗೆ ||

ಇನ್ನು ಮುಂದೆಯಾದರೂ ಪಾಷ್ಟಿಕರು ಕಳೆದುಕೊಂಡಿರುವ ತಮ್ಮ ಸ್ಥಾನಮಾನಗಳನ್ನು ಪುನಃ ಸಂಪಾದಿಸಿಕೊಂಡು ಸುಖವಾಗಿ ಬಾಳುವಂತೆ ಶ್ರೀರಾಘವೇಂದ್ರಗುರುಗಳು ಅನುಗ್ರಹ ಮಾಡಬೇಕೆಂದು ಈತನು ಗುರುರಾಯರನ್ನು ಪ್ರಾರ್ಥಿಸಿರುವನು :—

ಪದ–ಮುಂದೆ ಗುರುವರ ರಾಘವೇಂದ್ರರು ತಮ್ಮ ಪಾಷ್ಟಿಕವೃಂದಸಹಿತ ಬಂದ
ಬಹುಭಾಗ್ಯಗಳನನುಭವಿಸುತ್ತ ಬಹು ವಿಧದಿ |
ಹಿಂದಿನಿಂದದಿ ಮೆರವರೀತಿಯು ಪೊಂದೆ ಕರುಣಿಪುದೆಂದು ಪ್ರತಿದಿನ
ನಿಂದು ಬೇಡುವ ರಾಘವೇಂದ್ರರ ನಾಮಧಾರಕನು ||

ಈತನು ಕಾಶ್ಮೀರದೇಶದಲ್ಲಿ ನಡೆಸಿದ ಗ್ರಂಥಪರಿಶೋಧನೆಯಿಂದ ಮಾಧ್ವಮತಾನುಯಾಯಿಗಳಿಗೆ ಉಪಯುಕ್ತವಾದ "ವಾಯುಲೀಲಾವಿಸ್ತರಣ" ವೆನ್ನುವ ಮಹದ್ಗ್ರಂಥವು ದೊರಕಿತು. ಇದನ್ನು ರಚಿಸಿದವರು ಶ್ರೀಪದ್ಮನಾಭತೀರ್ಥರು. ಇದರಲ್ಲಿ ಎಂಟು ಸರ್ಗಗಳೂ, ೧೦೦೦ ಶ್ಲೋಕಗಳೂ ಇವೆ. ಈ ಗ್ರಂಥ ವಿಚಾರದಲ್ಲಿ ರಾಘವೇಂದ್ರ ಕವಿಯು :—

"ಪದ - ವಾಯುಲೀಲಾವಿಸ್ತರಣವಿಂತೆಂಬ ಕಾವ್ಯಪವೆಂಟುಸರ್ಗದ ಸಾವಿರದ
ನೂರೊಂದು ಶ್ಲೋಕದಲಿ ।
ಪದ್ಮನಾಭಸುತೀರ್ಥವರ್ಯರು ಬರದರದು ಶ್ರೀನಗರದೊಳು ಕಾಶ್ಮೀರ
ದೇಶದಿ ರಾಜತರಂಗಿಣಿಯ ಪುಸ್ತಕದಭಂಡಾರದಲ್ಲಿದೆ ದ್ವಿಪ್ರತಿ
ಗೈದು ತಂದಿರುವೆ ॥"

ಎಂದು ಉಲ್ಲೇಖಿಸಿದ್ದಾನೆ.

ಈತನು ಪಂಜಾಬ್ ಪ್ರಾಂತ್ಯದಲ್ಲಿ ಸಂಚರಿಸಿದ ಕಾಲದಲ್ಲಿ ಆಲಂ ಎಂಬ ಕವಿಯಿಂದ ರಚಿತವಾದ "ಫಿರೋಜನಾಮ" ಎಂಬುವ ಗ್ರಂಥವನ್ನು ಪರಿಶೀಲಿಸಿ ಅದರಿಂದ ಭಾರತಇತಿಹಾಸಕ್ಕೆ ಸಂಬಂಧಪಟ್ಟ ಮುಖ್ಯ ವಿಚಾರಗಳನ್ನು ಆರಿಸಿ ತೆಗೆದು ಅವುಗಳನ್ನು ತನ್ನ ಕೃತಿಯಲ್ಲಿ ಸೇರಿಸಿದ್ದಾನೆ.

ಶ್ರೀವಿದ್ಯಾರಣ್ಯಸ್ವಾಮಿಗಳಿಗೂ ವಿಜಯನಗರಸಾಮ್ರಾಜ್ಯಸ್ಥಾಪನೆಗೂ ಇರತಕ್ಕ ನಿಕಟ ಸಂಬಂಧವನ್ನು ಈತನು ಚೆನ್ನಾಗಿ ವಿಮರ್ಶೆ ಮಾಡಿ ಒಂದು ಜಟಿಲ ಪ್ರಶ್ನೆಯನ್ನು ಬಿಡಿಸಿರುತ್ತಾನೆ. ಇದರ ಸಂಕ್ಷಿಪ್ತ ವಿವರಣೆಯನ್ನು ಪಾಠಕರ ಅವಗಾಹನೆಗೋಸ್ಕರ ಇಲ್ಲಿ ಕೊಟ್ಟಿರುತ್ತೇವೆ.

ಶ್ರೀವಿದ್ಯಾರಣ್ಯಸ್ವಾಮಿಗಳೂ, ಬಹಮನೀರಾಜ್ಯಸ್ಥಾಪಕನಾದ ಗಂಗಾಧರಭಟ್ಟನೂ ಬಾಲ್ಯಸ್ನೇಹಿತರೂ ಸಹಾಧ್ಯಾಯಿಗಳೂ ಆಗಿದ್ದರು. ಯವನರಿಂದ ತಮ್ಮ ನಾಡಿಗೂ ತಮ್ಮ ಜನತೆಗೂ ಮೇಲಿಂದ ಮೇಲೆ ಆಗುತ್ತಿದ್ದ ಕಷ್ಟನಷ್ಟಗಳ ನಿವಾರಣೆಗೆ ತಕ್ಕ ಉಪಾಯಗಳನ್ನು ಚಿಂತಿಸುತ್ತಲಿದ್ದರು. ಇವರ ಈ ಯೋಜನೆಯು ಬಗೆಹರಿಯಲಿಲ್ಲ. ಪಂಢರಾಪುರಕ್ಕೆ ಹೋಗಿ ಶ್ರೀಕೃಷ್ಣ ಪರಮಾತ್ಮನದರ್ಶನದಿಂದ ಕೃತಾರ್ಥರಾಗಬೇಕೆಂದು ಇವರು ನಿರ್ಧರಿಸಿದರು. ಈ ಕರ್ಮಯೋಗಿಗಳು ಒಂದು ದಿನ ಉಷಃಕಾಲದಲ್ಲಿ ಕಂಪಿಲಿಯಿಂದ ಪಂಢರಾಪುರಮಾರ್ಗವಾಗಿ ಪ್ರಯಾಣ ಬೆಳೆಸಿದರು. ಕೆಲಹರಿದಾರಿಗಳು ನಡೆದ ಮೇಲೆ ಸೂರ್ಯನು ಅಸ್ತಂಗತನಾಗಲು ದಟ್ಟವಾದ ಕಾನನಮಧ್ಯದಲ್ಲಿ ಇವರು ಮೆಲ್ಲಮೆಲ್ಲನೆ ಹೆಜ್ಜೆಗಳನ್ನಿಡುತ್ತಾ ಮುಂದಕ್ಕೆ ಸಾಗಿದರು.

ಆಗ ಇವರ ಪಾರ್ಶ್ವದಲ್ಲಿದ್ದ ಒಂದು ತರುಮೂಲದಿಂದ ಕಾರ್ಮುಗಿಲ ಮಿಂಚು ಹೊಳೆದಂತಾಯಿತು. ಇವರು ಭಯಭ್ರಾಂತರಾಗಿ ಕಣ್ಣು ಮುಚ್ಚಿದರು, ಕೆಲವು ನಿಮಿಷಗಳ ತರುವಾಯ ಕಣ್ಣು ತೆರೆದು ನೋಡಲು ರತಿದೇವಿಯ ರೂಪವನ್ನು ತಿರಸ್ಕರಿಸುವಂತಿದ್ದ ರೂಪವುಳ್ಳ ಓರ್ವ ನಾರೀಮಣಿಯು ತಮ್ಮ ಎದುರಿಗೆ ನಿಂತಿರುವುದನ್ನು ಕಂಡರು. ಆಕೆಯ ವಯಸ್ಸು ಪ್ರಾಯಃ ಮೂವತ್ತಾರು ವರ್ಷಗಳಿಗೆ ಮೀರಿರಲಿಲ್ಲ. ಧೀರವೀರರಮಣಿಯಂತೆ ಕಂಡುಬಂದಳು ಆಕೆಯು ಆ ಯುವಕವಿಪ್ರರನ್ನು ಕುರಿತು "ನೀವು ಹೆದರಬೇಡಿ ; ನಾನು ಕಂಪಿಲಿಯ ರಾಮರಾಯನ ಸಹೋದರಿ ! ನನ್ನನ್ನು ಭುವನೇಶ್ವರಿಯೆಂದು ಕರೆಯುವರು. ದ್ವಾರಸಮುದ್ರದ ಭಾಸ್ಕರಬಲ್ಲಾಳರಾಯನಿಗೆ ನನ್ನನ್ನು ಕೊಟ್ಟು ವಿವಾಹವಾಗಿದ್ದಿತು ಆ ವೀರಾಗ್ರಣಿಯು ವಿಗ್ರಹದಲ್ಲಿ ಯವನರಿಂದ ಸಂಹೃತನಾದನು. ನನ್ನ ಪತಿದೇವನು ಕೂಡಿಟ್ಟಿದ್ದ ಅಪಾರಧನರಾಶಿಯು ನನ್ನ ವಶದಲ್ಲಿದೆ ನಮ್ಮ ಮಾತೃಭೂಮಿಯ ಮೇಲೆ ಸಮುದ್ರದ ತೆರೆಗಳಂತೆ ಏರಿಬರುತ್ತಲಿರುವ ಪರಕೀಯರ ಆಕ್ರಮಣವನ್ನು ನಿರ್ಮೂಲಮಾಡಿ ಆರ್ಯ ಸಂಸ್ಕೃತಿಯನ್ನು ಜೀರ್ಣೋದ್ಧಾರ ಮಾಡುವುದಕ್ಕೋಸ್ಕರ ನೀವು ಹೆಣಗಾಡುತ್ತಲಿರುವ ವಿಚಾರವು, ಒಬ್ಬಾನೊಬ್ಬ ಮಹಾತ್ಮನ ಮುಖದಿಂದ, ಈಗಲೇ ನನಗೆ ತಿಳಿಯಬಂದಿತು ಈ ನಿಮ್ಮ ಮಹೋದ್ಯಮಕ್ಕೆ, ನನ್ನಲ್ಲಿರುವ ಅಗಣಿತದ್ರವ್ಯ ರಾಶಿಯನ್ನು ನೀವು ಉಪಯೋಗಿಸಿಕೊಳ್ಳಬೇಕೆಂದು ನಿಮ್ಮನ್ನು ನಾನು ಪ್ರಾರ್ಥಿಸುತ್ತೇನೆ" ಎಂದು ಸಂತೈಸಿದಳು ಆಕೆಯ ವಾಣಿಯನ್ನು ಕೇಳಿದ ಬ್ರಾಹ್ಮಣಶ್ರೇಷ್ಠರು ದಿಗ್ಭ್ರಾಂತರಾಗಿ ಆಕೆಗೆ ಏನೊಂದುತ್ತರವನ್ನೂ ಕೊಡದೆ ಪ್ರಯಾಣೋನ್ಮುಖಳಾದ ಆಕೆಯನ್ನು ಮೌನದಿಂದ ಹಿಂಬಾಲಿಸಿದರು. ಬಳಿಕ ಇವರು ದ್ವಾರಸಮುದ್ರವನ್ನು ತಲುಪಿದರು ; ಭುವನೇಶ್ವರಿಯು ಗುಪ್ತವಾಗಿದ್ದ ಧನರಾಶಿಯನ್ನು ಶ್ರೀವಿದ್ಯಾರಣ್ಯರು ಹಾಗೂ ಗಂಗಾಧರಭಟ್ಟರ ವಶಪಡಿಸಿ "ಇದನ್ನು ನೀವು ಸ್ವೀಕರಿಸಬೇಕು. ನೀವು ನನ್ನ ಸಹೋದರ ರಾಮರಾಜನಿಗೆ ಬೆಂಬಲರಾಗಿದ್ದು ಶತ್ರುಗಳ ನಿಗ್ರಹದಲ್ಲಿ ಅವನಿಗೆ ಸಹಾಯ ಮಾಡಿ. ನಾನು ಈ ನದಿಯಲ್ಲಿ ಮುಳುಗಿ ನನ್ನ ದೇಹವನ್ನು ಕಳೆಯುವೆನು" ಎಂದು ಹೇಳಿ ನದಿಯ ದಡದಮೇಲೆ ಯೋಗಾಸನದಲ್ಲಿ ಕುಳಿತು ಹರಿಹರರ ಧ್ಯಾನದಲ್ಲಿ ಮೈಮರೆತಳು. ಕೊಂಚ ಕಾಲಾನಂತರ ಆಕೆಯ ಮನಸ್ಸು ವಿಕಾಸ

ವಾದಂತೆ ಕಂಡು ಬಂದಿತು. ಆಕೆಯು ಎಚ್ಚೆತ್ತು ನೋಡಿದಾಗ ತನ್ನ ಉಭಯ ಪಾರ್ಶ್ವಗಳಲ್ಲಿಯೂ ಕೈಕಟ್ಟಿಕೊಂಡು ನಿಂತಿದ್ದ ತರುಣ ಯೋಗಿಗಳನ್ನು ನೋಡಿ "ನೀವು ಬ್ರಾಹ್ಮಣರು, ಬೆಳದಿಂಗಳ ಬಿಸಲು ಯಾರನ್ನೂ ಹೇಗೆ ಸುಡಲಾರದೋ ಹಾಗೆ ಪ್ರಾಣಿವಧೆಮಾಡುವ ಕೆಲಸವು ನಿಮ್ಮಿಂದ ಆಗಲಾರದು. ನೀವು ಗುರುಪದವಿಗೂ, ಮಂತ್ರಿಪದವಿಗೂ ಅರ್ಹರಾದವರು. ನಿಮ್ಮ ಆಶೀರ್ವಾದವು ನನ್ನ ಮೇಲಿರಲಿ ನಾನು ಶತ್ರುಗಳ ನಂಗಡ ಕಾದಾಡುವೆನು. ಜಯಾಪಜಯಗಳು ಸರ್ವಶಕ್ತನಾದ ಪರಮಾತ್ಮನ ಅಧೀನ" ಎಂದಳು. ಅನಂತರ ಈ ಮೂವರೂ ಮುಂದೆ ತಾವು ಕೈಗೊಳ್ಳಬೇಕಾಗಿರುವ ಮಹತ್ಕಾರ್ಯದ ವಿಚಾರವನ್ನು ವಿಮರ್ಶೆ ಮಾಡಿ ಒಂದು ತೀರ್ಮಾನಕ್ಕೆ ಬಂದರು, ಇವರು ಅಲ್ಲಿಂದ ಹೊರಟು ಕಂಪಿಲಿಗೆ ಸಮೀಪವಾಗಿಯೂ ತುಂಗಭದ್ರಾನದಿಯಿಂದ ಸುತ್ತುವರಿಯಲ್ಪಟ್ಟು ಶತ್ರುಗಳಿಗೆ ಅಭೇದ್ಯವಾಗಿಯೂ ಇದ್ದ ಒಂದು ಪ್ರಸ್ಥಭೂಮಿಯನ್ನು ಹುಡುಕಿ ಅಲ್ಲಿ ಒಂದು ಶುಭದಿನ ವಿಜಯನಗರ ರಾಜ್ಯದ ನಿರ್ಮಾಣ ಶಂಕುಸ್ಥಾಪನೆಯ ಮುಹೂರ್ತವನ್ನು ನೆರವೇರಿಸಿದರು. ಭುವನೇಶ್ವರಿಯ ಸಲಹೆಯಂತೆ ವೀರಾಗ್ರಣಿಯೂ ಸನಾತನಧರ್ಮರಕ್ಷಕನೂ ಆಗಿದ್ದ ಸಂಗಮವಂಶದ ಹರಿಹರರಾಯನನ್ನು ಇವರು ಆ ನೂತನ ಸಾಮ್ರಾಜ್ಯದ ಗದ್ದುಗೆಯ ಮೇಲೆ ಕೂಡಿಸಿ ಅಭಿಷೇಕ ಮಾಡಿದರು. ಇದಾದ ತರುವಾಯ ಶ್ರೀವಿದ್ಯಾರಣ್ಯಸ್ವಾಮಿಗಳು ಹಾಗೂ ಭುವನೇಶ್ವರಿಯವರ ಪ್ರೇರಣೆಯಂತೆ ಗಂಗಾಧರಭಟ್ಟನು ಬಹಮನೀರಾಜ್ಯವನ್ನು ಸ್ಥಾಪಿಸಿದನು. ಈ ರಾಜ್ಯ ನಿರ್ಮಾತೃಗಳಿಗೆ ನಾರಾಯಣಯೋಗಿ ಎಂಬ ಮಹಾತ್ಮನು ಬೆಂಬಲವಾಗಿದ್ದನು. ಆತನ ಜೀವನವೃತ್ತಾಂತವು ಅದ್ಭುತವೂ ಆಶ್ಚರ್ಯಜನಕವೂ ಆಗಿದೆ. ನಾರಾಯಣಯೋಗಿಯು ಕುಮಾರಿಲಭಟ್ಟರ ವಂಶಸಂಜಾತನು ಆತನು ಬಾಲ್ಯದಿಂದಲೂ ಯೋಗಾಭ್ಯಾಸದಲ್ಲಿ ನಿರತನಾಗಿ ತನ್ನ ಆಯುಷ್ಯವನ್ನು ಕಳೆಯುತ್ತಿದ್ದನು. ಹಂಪೆಗೆ ಸಮೀಪದಲ್ಲಿದ್ದ ಗಹನವಾದ ಕಾನನಮಧ್ಯದಲ್ಲಿ ಆತನ ಆಶ್ರಮವಿದ್ದಿತು. ಆತನಿಗೆ ಮೂವರು ಶಿಷ್ಯರು. ಚಿದ್ವಿಲಾಸ, ಚಿದ್ವಲ್ಲಭ ಮತ್ತು ಚಿದಾನಂದ. ಈತನು ತೆರೆಮರೆಯಲ್ಲಿದ್ದುಕೊಂಡು ಶ್ರೀ ವಿದ್ಯಾರಣ್ಯರಿಗೂ ಅನಂತರ ಗಂಗಾಧರಭಟ್ಟನಿಗೂ ಪ್ರಥಮತಃಭುವನೇಶ್ವರಿಯ ದರ್ಶನಲಾಭವನ್ನು ದೊರಕಿಸಿಕೊಟ್ಟನು.

ಈ ಗೆಳೆಯರಿಬ್ಬರೂ ತಮ್ಮ ಸುದೈವದಂತಿದ್ದ ನಾರಾಯಣಯೋಗಿಯನ್ನು ಆರಾಧಿಸಿದರು. ಆತನು ತನ್ನ ಮೂವರು ಶಿಷ್ಯರನ್ನೂ ಶ್ರೀವಿದ್ಯಾರಣ್ಯಸ್ವಾಮಿಗಳ ವಶಪಡಿಸಿದನು. ಅವರು ವಿದ್ಯಾರಣ್ಯಸ್ವಾಮಿಗಳ ಅಪ್ಪಣೆಯನ್ನು ಪಡೆದು ಉತ್ತರಹಿಂದೂಸ್ಥಾನಕ್ಕೆ ಹೋಗಿ ಅಲ್ಲಿ ಅದ್ವೈತಮತ ಪ್ರಚಾರ ಮಾಡಿದರು. ನಾರಾಯಣಯೋಗಿಯು ಗಂಗಾಧರಭಟ್ಟನಿಗೂ ಅವನ ಮಗ ಭಟ್ಟೋತ್ಪಲನಿಗೂ ಜ್ಯೋತಿಶ್ಶಾಸ್ತ್ರವನ್ನು ಉಪದೇಶ ಮಾಡಿದನು. ಬಳಿಕ ಆತನು ಗಂಗಾಧರಭಟ್ಟನನ್ನು ಕುರಿತು "ಅಯ್ಯಾ ! ನಿನ್ನ ಪ್ರಪಿತಾಮಹ ರುದ್ರಭಟ್ಟನಿಗೆ ನಾನು ದರ್ಶನವನ್ನು ಕೊಟ್ಟು, ಸನ್ಮಾರ್ಗಕ್ಕೆ ತಂದೆನು ! ನೀನು ಅದೃಷ್ಟಶಾಲಿಯು। ಇನ್ನು ಮುಂದೆ ನಿನ್ನಿಂದ ಮಹಾತ್ಕಾರ್ಯಗಳು ನಡೆಯಲಿವೆ" ಎಂದು ಹೇಳಿ ಆ ಗೆಳೆಯರಿಬ್ಬರನ್ನೂ ಬೀಳ್ಕೊಟ್ಟನು. ಇದಾದ ಬಳಿಕ ನಾರಾಯಣಯೋಗಿಯು ಅಗ್ನಿಪ್ರವೇಶಮಾಡಿ ದೇಹತ್ಯಾಗ ಮಾಡಿದನೆಂದು ತಿಳಿದು ಬಂದಿದೆ. ಈ ಮಹಾತ್ಮನನ್ನೇ ನಾರಾಯಣಭೂತನೆಂದು ಕರೆದರು. ಈ ಯೋಗಿವರ್ಯನಿಂದ ತಮಗಾದ ಮಹೋಪಕಾರಜ್ಞಾಪಕಾರ್ಥವಾಗಿ ಶ್ರೀವಿದ್ಯಾರಣ್ಯಸ್ವಾಮಿಗಳು ಶೃಂಗೇರಿಯಲ್ಲಿ ಆತನ ಹೆಸರಿನಲ್ಲಿ ಒಂದು ದೇವಾಲಯವನ್ನು ಕಟ್ಟಿಸಿ ಅಲ್ಲಿ ಪ್ರತಿದಿನವೂ ಆರಾಧನೆ ನಡೆಯುವಂತೆ ಏರ್ಪಡಿಸಿದರು ಗಂಗಾಧರಭಟ್ಟನು ತನ್ನ ಕುಟುಂಬದಲ್ಲಿ ಶುಭ ಕಾರ್ಯಗಳು ನಡೆಯುವುದಕ್ಕೆ ಪೂರ್ವಭಾವಿಯಾಗಿ ನಾರಾಯಣಯೋಗಿಯ ಆರಾಧನೆಯನ್ನು ಮಾಡತಕ್ಕದೆಂದು ಕಟ್ಟುಪಾಡು ಮಾಡಿದನು. ಈತನ ವಂಶೀಯರು ಮಧುಗಿರಿ ತಾಲ್ಲೂಕು ಶಿವನಗೆರೆಯೆನ್ನುವ ಗ್ರಾಮದಲ್ಲಿ ವಾಸವಾಗಿದ್ದಾರೆ. ಈ ಗ್ರಾಮಕ್ಕೆ ಇವರೇ ಇನಾಂದಾರರು. ಇವರು ಪ್ರತಿವರ್ಷವೂ ತಮ್ಮ ಗ್ರಾಮದ ಊರು ಬಾಗಿಲಿನಲ್ಲಿರುವ ಭೂತನಾಥನದೇವಸ್ಥಾನಕ್ಕೆ ಹೋಗಿ ನಾರಾಯಣಯೋಗಿಯನ್ನ ಆರಾಧಿಸುತ್ತಾರೆ ಈ ಯೋಗಿವರ್ಯನು ದೇಹತ್ಯಾಗ ಮಾಡುವ ಮುನ್ನ ವಿದ್ಯಾರಣ್ಯರಿಗೂ, ಗಂಗಾಧರಭಟ್ಟನಿಗೂ ಮಾಡಿದ ಹಿತೋಪದೇಶವು ಅನುಕರಣೀಯವಾಗಿದೆ.

ಪದ– ಕರದ ತನ್ನಯ ಶಿಷ್ಯರನು ಮೂವರನು ವಿದ್ಯಾರಣ್ಯಗುರುಗಳಿಗಿತ್ತು
ಇವರಿಂದುತ್ತರದೇಶದಲಿ ಅದ್ವೈತಮತವನು ಹರಡುವುದು ।

ದ್ವೈತಅದ್ವೈತಗಳ ಭೇದವು ಸಧ್ಯದಲಿ ತಾ ಬೇಡ ವೈದಿಕಧರ್ಮ ಕೆಡ
ದಂದಲಿ ಎಚ್ಚರದಿಂದ ಕಾಯ್ವುದು ನಿಮ್ಮಿಬ್ಬರಿಗೆ ಸೇರಿದ
ಹವಣಾ ಕೇಳೆಂದ ॥

ಪದ–ಗುರುಗಳೀರ್ವರು ಸುಖದಿ ಬಾಳಿರಿ ನಿಮ್ಮ ರಾಜ್ಯದ ಸರ್ವಸಂಪದ ಬೆಳೆದು
ವರ್ಧಿಸುತಿರಲಿ ಶಿಷ್ಯವೃಂದವು ನಿಮ್ಮ ಸೇವಿಸಲಿ ।
ಗಂಗ ತಾ ಸರ್ವಾಧಿಕಾರವ ವಹಿಸಿ ನಿಮ್ಮನು ಅನುಸರಿಸಿ ನಡೆಯುತಲಿರು
ವನು ಅಕ್ಷೋಭ್ಯಮುನಿಗಳು ರಾಜಯೋಗಿಗಳು ॥

ಗಂಗಭಟ್ಟನ ಮಗ ಭಾಸ್ಕರಭಟ್ಟನ ವಂಶಸ್ಥರಾದ ಗಂಗಾಧರಶಾಸ್ತ್ರಿಗಳೆಂಬುವರು ಕ್ರಿ. ಶ. ೧೮೦೨ನೆಯ ವರ್ಷದ ಸುಮಾರಿನಲ್ಲಿ ಬರೋಡದೇಶದ ದಿವಾನರಾಗಿದ್ದರೆಂತಲೂ ಈ ರಾಘವೇಂದ್ರಪ್ಪನು ಅವರ ಮನೆಯಲ್ಲಿ ಎರಡು ತಿಂಗಳು ಕಾಲ ಅತಿಥಿಯಾಗಿದ್ದನೆಂತಲೂ ಹೇಳಿಕೊಂಡಿರುವನು

ಪದ–ಗಂಗಭಟ್ಟನ ಮಗನು ಭಾಸ್ಕರನಿಂದ ಬೆಳೆದುದು ವಂಶಕ್ರಮದಲಿ ಹತ್ತು
ತಲೆ ಪರ್ಯಂತ ವಿಸ್ತರಿಸುದುದು ಶೋಭಿಸುತ ।
ಈಗ ತಾನುಳಿದಿಹನು ಗಾಯಕವಾಡರಾಜನ ಬಳಿಯೊಳಗೆ ಬದೋಡಾ
ನಗರದಲಿ ಮಂತ್ರಿತ್ವವನು ಮಾಡುತ ಗಂಗಾಧರಶಾಸ್ತ್ರಿ ಎಂಬುವನು
ತನ್ನ ಹಿರಿಯರ ಪೆಸರನಿರಿಸುತಲಿ ॥

ಪದ–ಆತ ವೈಷ್ಣವನಾದೊಡೆಯು ಹರಿಹರರ ಸಮಭಕ್ತಿಯಲಿ ತಾನಿಹನು
ಸ್ಮಾರ್ತಾಚಾರವರೆಸಿ ನಡೆಯುವನು ।
ನನ್ನ ನಾನಗರಿಯಲಿ ದಿನ ಐವತ್ತು ಪರಿಯಂತರವು ಬಿಡದಲೆ ಬಹಳ
ಸತ್ಕಾರವನು ಆತನನು ನಾ ಮರೆಯದಂದದಿ ಬಹು ಪ್ರಾಚೀನ
ಲಿಖಿತವನೆಲ್ಲ ಕೊಟ್ಟಿಹನು ॥

ಗಂಗಾಧರಭಟ್ಟನ ಆತ್ಮೀಯರಾದ ಷಾಷ್ಟಿಕರು ಬಿಜಾಪುರದಲ್ಲಿ ಉನ್ನತಾಧಿಕಾರಗಳಲ್ಲಿದ್ದರೆಂಬುದನ್ನು ಈ ಪದದಲ್ಲಿ ಶೃತಪಡಿಸಿದ್ದಾನೆ.

ಪದ-ಆಗ ಗಂಗಾಧರನ ಬಾಂಧವವೃಂದಷಾಷ್ಟಿಕವೀರರೆಲ್ಲರು ಸೇರಿ ಸುಖ
ದಲ್ಲಿ ಬಾಳುತಿರ್ದರು ವರಬಿಜಾವುರದಿ ।
ಅವರನರಪತ್ಕ್ಯಾಕ್ಕಂಲೆಂಬುವ ಘನತೆರೆದ ಪೆಸರಿಂದ ಸಂಬೋಧನೆ
ಮಾಡ್ದರು ಪಕ್ಕಲೆಂಬುದು ಹಿರಿಮೆಯ ಪೆಸರದಾಗಿತ್ತು ॥

ಬಹಮನಿರಾಜ್ಯದ ಮೇರೆಯನ್ನು ಈ ಪದದಲ್ಲಿ ವರ್ಣಿಸಿದ್ದಾನೆ :

ಪದ–ಅಲ್ಲನು ಜಿತೇಂದ್ರಿಯ ಕೃತಜ್ಞನು ಗಂಗನು ತಂದೆ ಎಂದೇ ಕಾಣುತಿದ್ದನು
ಗಂಗ ವಿಸ್ತರಿಸಿದನು ರಾಜ್ಯವನು ।
ಮಗಧ ವುತ್ಕಲ ವಂಗದೇಶವು ಕಾಶಿ ಕೋಸಲ ಸಿಂಧು ದೇಶವು
ಮೇರೆಯಾಗಿತ್ತದಕೆ ನಮ್ಮಯ ದೊಡ್ಡ ಒಳ್ಳಾಪುರವು ಸಹಿತಾಗಿ ದಕ್ಷಿಣಕೆ
ವಿಸ್ತರಿಸಿ ಮೆರೆಯುತ್ತಿತ್ತು ಅಗಲು ಬಂದರೈ ಕಟ್ಟಿದರು ಬಳ್ಳಾಪುರದ
ಗ್ರಾಮವನು ॥

ಗಂಗಭಟ್ಟನ ಮಗ ಭಾಸ್ಕರಭಟ್ಟನಿಂದ ಆದಿಯಾಗಿ ಹತ್ತನೆಯ ತಲೆಯ ವರೆಗೂ ಅವರ ವಂಶವು ಬೆಳೆಯಿತು. ಈ ಪರಿವಿಡಿಯಲ್ಲಿ ಈಗ ಬದೋಡಾ ಮಹಾರಾಜರ ಮುಖ್ಯಮಂತ್ರಿಪದವಿಯಲ್ಲಿರುವ ಗಂಗಾಧರಶಾಸ್ತ್ರಿಯು ಬಹಳ ಪ್ರಖ್ಯಾತನಾಗಿರುವನು. ಅವನು ವೈಷ್ಣವನಾದಾಗ್ಯೂ ಹರಿಹರರನ್ನು ಸಮ ಭಕ್ತಿಯಿಂದ ಪೂಜಿಸುತ್ತ ಸ್ಮಾರ್ತಾಚಾರ ನಿರತರಾಗಿರುವನು. ನಾನು ಬದೋಡಾ ನಗರಕ್ಕೆ ಹೋದಾಗ ನನ್ನನ್ನು ಆತನು ಐವತ್ತು ದಿನಗಳವರೆಗೂ ತನ್ನ ಗೃಹದಲ್ಲಿ ಇಟ್ಟುಕೊಂಡಿದ್ದು ವಿವಿಧೋಪಚಾರಗಳಿಂದ ಸತ್ಕರಿಸುದದಲ್ಲದೆ ಷಾಷ್ಟಿಕರಿಗೆ ಸಂಬಂಧಿಸಿದ ಅನೇಕ ಪ್ರಾಚೀನ ಲೇಖನಗಳನ್ನು ಕಾಣಿಕೆಯಾಗಿತ್ತನು. ಆತನು ಮಾಡಿದ ಆತ್ಮೀಯ ಉಪಚಾರಗಳನ್ನು ನಾನು ಚಿರಕಾಲ ಮರೆಯುವಂತಿಲ್ಲ, ಎಂದಿರುವನು.

ಈತನ ಗ್ರಂಥವೆಂದರೆ ಅದು ಒಂದು ವಿಶ್ವಕೋಶದಂತಿದೆ. ಅವುಗಳನ್ನು ವಿಸ್ತರಿಸುತ್ತ ಹೋದರೆ ಅದು ಒಂದು ಬೃಹದ್ಗ್ರಂಥವೇ ಆಗುವುದು. ಆದುದ ರಿಂದ ಅದರ ಗೋಜಿಗೆ ಹೋಗದೆ, ಷಾಷ್ಟಿಕಮನೆತನಕ್ಕೆ ಸಂಬಂಧಪಟ್ಟ ಹಲ ವಾರು ಮುಖ್ಯಾಂಶಗಳನ್ನು ಮಾತ್ರ ಇಲ್ಲಿ ಸಂಕ್ಷಿಪ್ತವಾಗಿ ಉಲ್ಲೇಖಿಸಿರುವೆವು.

ಈ ರಾಘವೇಂದ್ರಕವಿಯು ಷಾಷ್ಟಿಕವಂಶತನದ ಗಗನಮಧ್ಯದಲ್ಲಿ ರಾರಾಜಿಸುವ ದಿನಮಣಿಯಂತಿರುವನೆಂದರೆ ಅದು ಅತಿಶಯೋಕ್ತಿಯಾಗಲಾರದು.

ಈತನು ತನ್ನ ಜನ್ಮಭೂಮಿಯಾದ ಕನ್ನಡನಾಡನ್ನು ಮನೋಹರವಾಗಿ ವರ್ಣಿಸಿರುವನು, ಈತನ ಕವಿತೆಯಿಂದ ಕೆಲವು ಪದಗಳನ್ನು ಆಯ್ದು, ಅವುಗಳನ್ನು ಪಾಠಕರ ಮುಂದಿಟ್ಟು ಈ ಪ್ರಕರಣವನ್ನು ಪರಿಸಮಾಪ್ತಿ ಗೊಳಿಸುವೆವು.

ಪದ–ಕನ್ನಡವು ಲಕ್ಷ್ಮೀನಿವಾಸವು ಕನ್ನಡವು ಶ್ರೀಕೃಷ್ಣನಿಂದಿಹ ನಾಡುಕನ್ನಡದಿ
ಪಣೆಗಣ್ಣನಿಂದನು ಹಂಪೆ ಮನೆಮಾಡಿ ।
ಕನ್ನಡವು ತಾ ಶ್ರೇಷ್ಠವೆಂದೇ ತಿಳಿದು ವಿಠಲ ಪಾಂಡುರಂಗನು ಬಂದು
ನೆಲಸಿದ ಪಂಢರಾಪುರದಿ ॥

ಕ್ರಮುಕ ದಾಡಿಮ ಪೂಗ ಜಂಬೂ ಬದರಿ ಫಲಗಳಿಗಿದುವೆ ನೆಲಮನೆ
ಹಲವು ಜಾತಿಯ ಗೆಡ್ಡೆಗೆಣಸುಗಳು ।
ಋಷಿಗಳಾಹಾರಕ್ಕೆ ತೌರೂರಾಗಿ ಮೆರೆಯುತ್ತಿಹದು ಪಾಲ್ಮೊಸರುನವನೀತ
ಘೃತ ಮಧುವಿಲ್ಲಿ ಜಗಕೆಲ್ಲ ಸೋಜಿಗವಿತ್ತು ನೆಲಸಿಹುದು ॥

ಪರಶುರಾಮನಿಗಿದುವೆ ಆಶ್ರಮ ವೀರರಘುರಾಮನಿಗೆ ಆಶ್ರಮ,
ವರವಿಭೀಷಣವಾಲಿಸುಗ್ರೀವರಿಗೆ ಆಶ್ರಮವು ।
ಪವನನಂದನ ಹನುಮನಿಗೆ ನೆಲೆಮನೆಯು ಇಂದ್ರಕುಮಾರವಾಲಿಯ
ಶೌರ್ಯಕಿದು ನೆಲೆಮನೆಯು ಪಾಂಡವರಾಯರಜ್ಞಾತದಲ್ಲಿ ಜಯ
ಗಳಿಸಿರ್ದುದೀನಾಡು ॥

ಶಕಪುರುಷ ಪ್ರಖ್ಯಾತಶಾಲಿಯು ಸಾರ್ವಭೌಮನು ಮೊದಲು ಕನ್ನಡ
ದೊಳಗೆ ಸತ್ಯಾಶ್ರಯನು ಪುಲಿಕೇಶಿಗಳು ತರುವಾಯ ।
ಆ ತ್ರಿಣೇತ್ರಕದಂಬನಾತನತನಯ ಶೂರಮಯೂರರಾಳಿದ ನಾಡು
ಶಿರಿಗೆ ತೌರೂರಾದ ಕನ್ನಡವು ॥

ಇದು ಕದಂಬ ಚಾಲುಕ್ಯ ಹೊಯ್ಸಳ ವೀರಬಲ್ಲಾಳರಿಗೆ ಶಿರಿಮನೆ
ಇದುವೆ ಯಾದವ ಗಂಗ ಪಲ್ಲವರರಸರಿಗೆ ತೌರೂರು ।

ವಿದಿತನಾಮರು ಸಕಲಜಗವಿಖ್ಯಾತನಾಮರು ವಿಜಯನಗರದ ಸಾರ್ವ
ಭೌಮರ ಶಿರಿಗೆ ನೆಲೆಯೆನಿಪ ಕನ್ನಡವು ||

## ದೇಶಪಾಂಡೆ ಕೃಷ್ಣರಾಯರು ಮತ್ತು ಯಾದವರಾಯರು

ಇವರು ಷಾಷ್ಟಿಕರಲ್ಲಿ "ಕೊಚರಸ" ಕುಟುಂಬಕ್ಕೆ ಸೇರಿದವರು ಭಾರ ಧ್ವಾಜಗೋತ್ರ ಇವರದು ; ಮೂಲಪುರುಷ ನಾಗಪ್ಪ ; ಆತನು ಕ್ರಿಸ್ತವರ್ಷ ೧೫೦೫ರಲ್ಲಿ ಬಿಜಾಪುರದಿಂದ ದೊಡ್ಡಬಳ್ಳಾಪುರಕ್ಕೆ ಬಂದನು ವಿಜಯನಗರ ಚಕ್ರವರ್ತಿಗಳಲ್ಲಿ ಪ್ರಖ್ಯಾತನಾದ ಕೃಷ್ಣದೇವರಾಯನು ದೊಡ್ಡಬಳ್ಳಾಪುರ ಪ್ರಾಂತದ ದೊರೆತನವನ್ನು ಬೈರೇಗೌಡನಿಗೂ, ಮಂತ್ರಿ ಪದವಿಯನ್ನು ನಾಗಪ್ಪ ನಿಗೂ ದಯಪಾಲಿಸಿದನು ಆತನ ಮಗ ಕೃಷ್ಣಪ್ಪನಿಗೆ ನರಸಪ್ಪನೆಂಬ ಪುತ್ರ ನಿದ್ದನು. ನರಸಪ್ಪನ ತನಯ ಗಿರಿಯಪ್ಪನಿಗೆ ದೀರ್ಘಕಾಲ ಸಂತಾನವಿರಲಿಲ್ಲ. ಬಳಿಕ ಆತನು ಶ್ರೀಸುಧೀಂದ್ರತೀರ್ಥರನ್ನು ಸೇವಿಸಿ ಅವರ ಅನುಗ್ರಹದಿಂದ ಸಪ್ತಶರಧಿಗಳಂತೆ ಹೆಸರುವಾಸಿಯಾದ ಏಳು ಮಂದಿ ಪುತ್ರರನ್ನು ಪಡೆದನು. ಇವರಲ್ಲಿ ಹಿರಿಯನ ಹೆಸರು ಕುಚ್ಚಪ್ಪ. ಆತನು ಬಿಜಾಪುರಸುಲ್ತಾನರ ಸಖ್ಯವನ್ನು ಗಳಿಸಿ ಕೀರ್ತಿಯನ್ನು ಬೆಳೆಸಿದನು. ಉಳಿದ ಆರು ಮಂದಿ ಸಹೋದರರು ದೆಹಲಿ, ಮಹಾರಾಷ್ಟ್ರ ಇವೇ ಮುಂತಾದ ರಾಜಾಸ್ಥಾನಗಳಲ್ಲಿ ಪ್ರಭಾವಶಾಲಿಗಳಾದ ಅಧಿ ಕಾರಗಳಲ್ಲಿದ್ದುಕೊಂಡು ಕುಚ್ಚಪ್ಪನಿಗೆ ಸಹಾಯಕರಾಗಿದ್ದರು. ಈಗಲೂ ದೊಡ್ಡಬಳ್ಳಾರದಲ್ಲಿ ಕುಚ್ಚಪ್ಪನ ಹೆಸರಿನ ಒಂದು ಪೇಟೆ ಇದೆ.

ಈ ವಂಶದಲ್ಲಿ ಷಾಷ್ಟಿಕಕುಲಭೂಷಣರೂ ಭಾಗವತ್ತೋತ್ತಮರೂ ಆದ ಕೃಷ್ಣರಾಯರು ಕ್ರಿ. ಶ. ೧೭೫೮ನೆಯ ವರ್ಷದಲ್ಲಿ ಹುಟ್ಟಿದರು. ಇವರು ತಮ್ಮ ಬಾಲ್ಯವನ್ನು ದೊಡ್ಡಬಳ್ಳಾಪುರದಲ್ಲಿ ಕಳೆದರು. ಇವರ ಪ್ರೌಢವಿದ್ಯಾ ಭ್ಯಾಸವು ಮಾನವಿಯಲ್ಲಿದ್ದ ಇವರ ಜ್ಞಾತಿಸಹೋದರರೂ ಅಪರೋಕ್ಷಜ್ಞಾನಿ ಗಳಲ್ಲೊಬ್ಬರೂ ಆದ ಜಗನ್ನಾಥದಾಸರಾಯರ ನೇತೃತ್ವದಲ್ಲಿ ಜರುಗಿತು. ಕೃಷ್ಣರಾಯರು ಮಾನವಿಯಿಂದ ಹಿಂತಿರುಗಿದ ಬಳಿಕ ಗೃಹಸ್ಥಾಶ್ರಮಧರ್ಮವನ್ನು ಸ್ವೀಕರಿಸಿದರು. ಇವರು ಉಭಯಭಾಷಾಭಿಜ್ಞರೆಂಬ ವಿಚಾರವು, ಇವರು ರಚಿಸಿರುವ ಗ್ರಂಥಗಳಿಂದ ತಿಳಿಯ ಬರುವುದು. ಇವರು ಭಾಮಿನೀಷಟ್ಪದಿ

ಯಲ್ಲಿ "ಕೃಷ್ಣಕರ್ಣಾಮೃತ" ಮತ್ತು "ಸ್ತುತಿಸಾರ"ಗಳೆಂಬ ಗ್ರಂಥಗಳನ್ನೂ ಯಕ್ಷಗಾನಶೈಲಿಯಲ್ಲಿ "ಭಾಗವತದಶಮಸ್ಕಂಧ" ಮತ್ತು "ಹರಿಸರ್ವೋತ್ತಮ ಸಾರ"ಗಳೆಂಬ ಆಖ್ಯಾಯಿಕೆಗಳನ್ನೂ ರಚಿಸಿರುತ್ತಾರೆ

ಹರಿಸರ್ವೋತ್ತಮಸಾರಗ್ರಂಥದ ಪರಿಸಮಾಪ್ತಿಯಲ್ಲಿ :—

ವೃತ್ತ–ಹರಿಸರ್ವೋತ್ತುಮಸಾರವೆಂಬ ಕಥೆಯಂ ಬಳ್ಳಾಪುರೋದ್ಧಾಮದಾ
ಸರದೇಶಾಯಿ ವೆಂಕಟಾರ್ಯತನುಜ ಶ್ರೀಯಾದವಾತ್ಮೋದ್ಭವಂ ।
ವರಕೃಷ್ಣಾಖ್ಯನು ಪೇಳ್ದನಿಂತು ಮುದದಿಂ ಶ್ರೀನಾಥಕಾರುಣ್ಯದಿಂ
ಬರದೋದುತ್ತಿಹಲೋಕಕೀವುತ್ತಾನಂದಸಂದೋಹದಂ ॥

ಎಂದು ಪೂರ್ಣ ಮಾಡಿರುವರು. ಇವರ ಕವಿತೆಯು ಸುಲಭವಾಗಿಯೂ ಸರಳವಾಗಿಯೂ ಸುಶ್ರಾವ್ಯವಾಗಿಯೂ ಇರುವುದೆಂಬುದನ್ನು ಪಾಠಕರು ಮನ ಗಾಣಬಹುದು.

ಇವರ ಮತ್ತೊಂದು ಗ್ರಂಥವಾದ "ಕೃಷ್ಣಕರ್ಣಾಮೃತ" ಗ್ರಂಥವು ಹದಿನಾರು ಶತಕಗಳನ್ನೊಳಗೊಂಡಿದೆ. ಪ್ರತಿ ಶತಕದ ಆರಂಭದಲ್ಲಿಯೂ,

ಭಾ॥ ಷ॥ ಹರಿಯೆ ಹೃದಯಾಂಬುಜದಿ ನಿಂತೀ ಚರಿತೆಯನು ಪೇಳಿಸಿದ
ಬಳ್ಳಾಪುರದ ಯಾದವರಾಯನಾತ್ಮಜಕೃಷ್ಣನಿಂದಿದನು ।
ಹರುಷದಿಂದಲಿ ಕೇಳಿ ಸುಜನರು ಇರುವ ತಪ್ಪನು ತಿದ್ದಿ ಶ್ಲಾಘಿಪ
ತೆರನಮಾಳ್ಪುದು ಕೃಷ್ಣಕರ್ಣಾಮೃತವ ನೊಲವಿನಲಿ ॥

ಎಂಬುದಾಗಿ ಭಗವಂತನ ಗುಣಗಾನ ಮಾಡಿದ್ದಾರೆ

ಇವರ ಪೂರ್ವಿಕರು ಬಿಜಾಪುರಪ್ರಾಂತ್ಯದಿಂದ ದೊಡ್ಡಬಳ್ಳಾಪುರಕ್ಕೆ ಬಂದು ನೆಲಸಿದರೆಂಬ ವೃತ್ತಾಂತವನ್ನು ಈ ಸೀಸಪದ್ಯದ ಉತ್ತರಾರ್ಧದಲ್ಲಿ ಸ್ಪಷ್ಟಪಡಿಸಿದ್ದಾರೆ.

ಸೀಸ-ಮುನಿಭರದ್ವಾಜವಸ್ಪಯತಿಲಕನಾದ ವನಜಾಕ್ಷನಂಘ್ರಿಕಮಲವನಿರತನಂಬಿ
ಗುರುವ್ಯಾಸರಾಯರ ಕರುಣ ಪಡೆದ ।
ಮನುಮಥನ ನುರೆಪ್ಪೋಲ್ವ ಕಾಂತಿವೆತ್ತ ಧೀರಗಂಭೀರನಾಗಾರ್ಯವರ್ಯ
ಕೌಬೇರದಿಗ್ಭಾಗದಿಂದಿಂದ್ರದಿಶಗೆ ವರವಿಜಾನಗರದಿಂದೈತಂದ
ಪ್ರಸ್ತವುರಕೆ ॥

ಮತ್ತೊಂದು ಸೀಸಪದ್ಯದ ಉತ್ತರಾರ್ಧದಲ್ಲಿ ತಾವು ಜಗನ್ನಾಥರಾಯರ ಶಿಷ್ಯ ರೆಂದು ಹೇಳಿಕೊಂಡಿರುವುದು ಗಮನಾರ್ಹವಾಗಿದೆ.

ಸೀಸ–ಇರಲಾಗಿ ನರಸಾಖ್ಯಪೌತ್ರನಾತನಸುತನು ಗಿರಿಶರ್ಮ ಕೆಲಕಾಲ ಪುತ್ರರಿರದೆ
ಶ್ರೀಸುಧೀಂದ್ರರವರದಿ ಸಪ್ತಸುತರನು ಪಡೆದ ಪಿರಿಯಾತನೇ
ಪ್ರಖ್ಯಾತಕೂಸಾಖ್ಯನಾದ ।
ಇರಲೀತನಿಗೆ ಸೂನುಶಾಮಾಂಕಜನಿಸೆ ವೆಂಕಟಾರ್ಯನು ಕಿರಿಯ ಮಗ
ನಾದನಾತಂಗೆ ಅಷ್ಟಪುತ್ರರು ನೋಡೆ ವಸುಗಳಂತೆ ಅವರೊಳಗೆ
ಪಿರಿಯ ಕುವರನು ಯಾದವಾರ್ಯನುದರದಲಿ ಜನಿಸಿದನು ಕೃಷ್ಣನು
ಹರಿಯದಾಸ ಗುರುಜಗನ್ನಾಥವಿಠಲರ ಕರುಣದಿಂದಾವೇಣು
ಗೋಪಾಲನೆಂಬಂಕಿತವ ಮನೆದೇವಗರ್ಪಿಸುತ್ತ ರಚಿಸಿದನು ಕೃಷ್ಣ
ಕರ್ಣಾಮೃತವ ಸಜ್ಜನರು ಮೆಚ್ಚೆ ॥

ತೃಣಪುರದರಾಘವೇಂದ್ರಪ್ಪನು ಸಾರಸ್ವತಪರಿಣಯದ ಒಂದೆಡೆಯಲ್ಲಿ :—

ಪದ–ಇವರ ಮಕ್ಕಳು ಯಾದವಾರ್ಯರು ಹಿರಿಯ ಸುತರಿವರಿಗೆ ಕೃಷ್ಣರಾಯರ
ದೆಂಬ ನಾಮದ ಸುತರು ತಾವಿಹರು ಇವರು ರುಕ್ಮಾಂಗದನ ತೆರೆದೊಳು ।
ಹರಿಯ ಭಕ್ತಿಯಲಿ ನಿರತರು ಆಚಾರದಲಿ ನಿಷ್ಠರು ನಮ್ಮ ಜಗನ್ನಾಥಾಖ್ಯ
ದಾಸರ ಪ್ರಿಯಶಿಷ್ಯರು ಉಭಯಭಾಷಾಬಿಜ್ಞರಲ್ಲದೆ ಕಾಳಿದಾಸನ
ಪೋಲ್ವ ಕವಿವರರು ॥

ಎಂಬುದಾಗಿ ಕೊಂಡಾಡಿರುವನು.

೧೯ನೆಯ ಶತಮಾನದ ಉದಯಕ್ಕೆ ಕಳೆದುಳಿದ ಪಾಷ್ಟಿಕಮಹಾವ್ಯಕ್ತಿಗಳ ನಾಮಕೀರ್ತನೆಯನ್ನು ಈ ಕವಿಯು ನೊಂದ ಹೃದಯದಿಂದ ಈ ರೀತಿ ಗಾನ ಮಾಡಿರುವನು :—

ಪದ- ಈಗ ನಮ್ಮ ಅರವತ್ತೊಕ್ಕಲಾ ಜನರೊಳಗೆ ಹರಿದಾಸವರ್ಯರು ಅತಿ
ಜ್ಞಾನಿಗಳು ಅಪರೋಕ್ಷಿಗಳು ಮಾನವಿಯ ಜಗನ್ನಾಥವಿರಲರು।
ಇವರ ತೆರದೊಳು ದೇಶಪಾಂಡೆಯ ಕೃಷ್ಣರಾಯರು ಹತಶೇಷದಲಿ
ವುಳದಿಹರು ॥

ಶ್ರೀಜಗನ್ನಾಥದಾಸರು ದೊಡ್ಡಬಳ್ಳಾಪುರಕ್ಕೆ ಆಗಮಿಸಿ ತಮ್ಮ ಸ್ವಕೀಯರೂ ಶಿಷ್ಯಾಗ್ರೇಸರರೂ ಆಗಿದ್ದ ಕೃಷ್ಣರಾಯರ ಮನೆಯಲ್ಲಿ ದೀರ್ಘಕಾಲ ವಾಸವಾಗಿದ್ದರೆಂತಲೂ ಅವರು ವಾಸವಿದ್ದ ಮನೆಯ ಆವರಣದಲ್ಲಿ ಅವರ ನೆನಪಿಗೋಸ್ಕರವಾಗಿ ಶ್ರೀಪಾಂಡುರಂಗಸ್ವಾಮಿಯ ದೇವಾಲಯವನ್ನು, ರಾಘವೇಂದ್ರದಾಸರೆಂಬ (ಮುದ್ದುಮೋಹನದಾಸರು) ಮಹನೀಯರು ನಿರ್ಮಿಸಿದ್ದಾಗಿಯೂ ಆಖ್ಯಾಯಿಕೆ ಇರುವುದು.

ಆಧುನಿಕ ಬರಹಗಾರರೊಬ್ಬರು ಶ್ರೀಜಗನ್ನಾಥದಾಸರು ಕಾವೇರೀಸ್ನಾನಕ್ಕಾಗಿ ಶ್ರೀರಂಗಪಟ್ಟಣಕ್ಕೆ ದಯಮಾಡಿಸಿದ್ದರೆಂತಲೂ, ಆ ಕಾಲದಲ್ಲಿ ಅವರು ದಿವಾನ್ ಪೂರ್ಣಯ್ಯನವರ ಮನೆಗೆ ಅನಾಹೂತರಾಗಿ ಹೋಗಿದ್ದರೆಂತಲೂ, ಪೂರ್ಣಯ್ಯನವರು ದಾಸವರ್ಯರನ್ನು ಯುಕ್ತರೀತಿಯಲ್ಲಿ ಸ್ವಾಗತಿಸದೆ ಅಲ್ಪ ಕಾಣಿಕೆಯನ್ನು ಕೊಟ್ಟು ಕಳುಹಿಸಿದರೆಂತಲೂ ಬರೆದಿರುತ್ತಾರೆ.

ಯಾವ ಪೂರ್ಣಯ್ಯನವರು ತಮ್ಮ ಅಧಿಕಾರವೆಂಬ ಹರಿತವಾದ ಶಸ್ತ್ರದಿಂದ ಪಾಷ್ಟಿಕಕಲ್ಪಭೂರುಹದ ವಿಶಾಲವೂ ಪ್ರಫುಲ್ಲಿತವೂ ಆದ ಪಕ್ಷಗಳನ್ನು ಕತ್ತರಿಸಿಹಾಕಿ ವಿಜೃಂಭಿಸುತ್ತಲಿದ್ದರೋ ಅಂತಹವರ ಮನೆಗೆ, ಅವರಿಂದ ಆದ ಘಾಯವು ಇನ್ನೂ ಹಸಿಯಾಗಿರುವಾಗಲೇ, ಪಾಷ್ಟಿಕಕುಲಸಂಜಾತರೂ ಅಪರೋಕ್ಷಜ್ಞಾನಿಗಳೂ ಆದ, ಜಗನ್ನಾಥದಾಸರು ಅನಾಹೂತರಾಗಿ ಹೋಗಿ ಅವರಿಂದ ಅವಮಾನಿತರಾಗಿ ಹಿಂದಿರುಗಿ ಬಂದರೆಂದು ಮುಂತಾಗಿ ಸೃಜಿಸಿರುವ ಈ ದಂತ ಕಥೆಯು ನಂಬಲರ್ಹವಾದುದಲ್ಲವೆಂದು ಪ್ರತ್ಯೇಕ ಹೇಳಬೇಕಾಗಿಲ್ಲ.

ಪೂರ್ಣಯ್ಯನವರಿಗೆ ಷಾಷ್ಟಿಕರ ಮೇಲೆ ಈ ರೀತಿ ಕ್ರೋಧವಿರಲು ಕಾರಣವೇ ನಿತ್ತೆಂಬುದನ್ನು ತಿಳಿದುಕೊಳ್ಳಲು ವಾಚಕರು ಆತುರರಾಗಿರಬಹುದು ಇದನ್ನು ಸ್ಪಷ್ಟಪಡಿಸುವುದು ನಮ್ಮ ಕರ್ತವ್ಯಗಳಲ್ಲೊಂದಾಗಿದೆ. ಅದರ ಕಾರಣವು ಈ ರೀತಿ ಇರುವುದು :— ಕೃಷ್ಣರಾಯರ ಹಿರಿಯರಿಗೆ ದೊಡ್ಡಬಳ್ಳಾಪುರಪ್ರಾಂತದ ಮಂತ್ರಿಪದವಿಯು ಇದ್ದಿತೆಂಬ ವಿಚಾರವನ್ನು ಈ ಲೇಖನದ ಪ್ರಾರಂಭದಲ್ಲಿಯೇ ಉಲ್ಲೇಖಿಸಿದೆ. ಮೊಗಲ್‌ಚಕ್ರವರ್ತಿಗಳ ಆಳ್ವಿಕೆಯಲ್ಲಿ ದೊಡ್ಡಬಳ್ಳಾಪುರವು ಅಬ್ಬಾಸ್‌ಅಲಿಕ್‌ಖಾನರಿಗೆ ಜಹಗೀರಾಗಿ ಬಂದಿತು. ಆಗಲೂ ಮುಲ್ಕೀ ವಿಚಾರಣೆಯ ಸರ್ವಾಧಿಕಾರವು ನಾಗಪ್ಪನ ಮಗ ಕೃಷ್ಣಪ್ಪನಿಗೇ ಇದ್ದಿತು. ಇವರ ವಂಶೀಯರು ರಾಜಾಸ್ಥಾನದಲ್ಲಿ ಪ್ರಬಲರಾಗಿದ್ದರು. ಈ ಎಲ್ಲ ಕಾರಣಗಳಿಂದ ಹವೇಲಿ ಮತ್ತು ದೇಶಪಾಂಡೆ ಈ ಎರಡು ಅಧಿಕಾರಗಳ ಗೌರವಕ್ಕೋಸ್ಕರ ೩೫ ಗ್ರಾಮಗಳು ಇವರಿಗೆ ಸರ್ವಮಾನ್ಯವಾಗಿ ನಡೆದು ಬಂದಿತು. ಇವುಗಳು ಹೊರತು ಉಳಿದ ಎಲ್ಲ ಗ್ರಾಮಗಳ ಆಡಳಿತವು ಖಾನರಿಗೇ ಸೇರಿದ್ದಿತು ಮೈಸೂರುರಾಜ್ಯದ ಸರ್ವಾಧಿಕಾರಿಯಾಗಿದ್ದ ಹೈದರಾಲೀಖಾನನು ಅಬ್ಬಾಸ್ ಅಲಿಕ್‌ಖಾನನನ್ನು ಬಂಧಿಸಿ ಅವನ ಜಹಗೀರನ್ನು ಮುಟ್ಟುಗೋಲು ಹಾಕಿಕೊಂಡನು ಆಗಲೂ ಷಾಷ್ಟಿಕರ ಸರ್ವಮಾನ್ಯಗ್ರಾಮಗಳನ್ನು, ಹೈದರಾಲಿಯು, ಅವರಿಗೇ ಉಳಿಸಿಕೊಟ್ಟನು. ಇದರ ಹಿಂಬದಿಯಲ್ಲಿ ಪ್ರಬಲ ರಾಜಕೀಯ ಸಂಬಂಧವೇನಿದ್ದಿತೆಂಬುದನ್ನು ಪಾಠಕರು ಗಮನಿಸತಕ್ಕುದಾಗಿದೆ. ಅದಕ್ಕೆ ಈ ನಾಗಪ್ಪನ ಜ್ಞಾತಿಸಹೋದರರಲ್ಲೊಬ್ಬನಾದ ಹರಿಪಂತನೇ ಕಾರಣ. ಈತನಿಗೆ ನರಸಣ್ಣನೆಂಬ ಪ್ರತಿನಾಮಧೇಯವೂ ಇತ್ತು.

ಶ್ರೀಯುತ ಲೂಯಿಸ್ ರೈಸ್‌ರವರ ಮೈಸೂರು ಗೆಜೆಟಿಯರ್ ೩೮೯ನೆ ಪುಟದಲ್ಲಿ "ಮಹಾರಾಷ್ಟ್ರಸೇನಾಧಿಪತಿಯಾಗಿದ್ದ ಹರಿಪಂತನು ಅರವತ್ತು ಸಾವಿರ ದಂಡಿನೊಂದಿಗೆ ತನ್ನ ಮೇಲೆ ಸಾಗಿ ಬರುತ್ತಿರುವುದನ್ನು ಹೈದರನು ಅರಿತು ಹದಿಮೂರು ಲಕ್ಷ ಪೆಗೋಡಾಗಳನ್ನು ತೆಗೆದುಕೊಂಡು ಅಲ್ಲಿಂದ ಹಿಂತಿರುಗಿ ಹೋಗುವಂತೆ ಕರಾರನ್ನು ಮಾಡಿಕೊಂಡನು" ಎಂದಿದೆ. ಇದರಿಂದ ರಾಘವೇಂದ್ರಕವಿಯ ಪ್ರತಿಯೊಂದು ಹೇಳಿಕೆಯೂ ಐತಿಹಾಸಿಕಸತ್ಯದಿಂದ ಕೂಡಿದುದಾಗಿದೆ ಎಂಬುದನ್ನು ಪಾಠಕರು ಗಮನಿಸತಕ್ಕುದು.

ಈ ಹರಿಪಂತನು ಮಹಾರಾಷ್ಟ್ರದೇಶದ ಭಾಗ್ಯವಿಧಾತರಾದ ಪುಣೆಯ ಪೇಷ್ವೆಗಳ ಮುಖ್ಯಸೇನಾಧೀಶನಾಗಿದ್ದನು. ಈತನೂ ಹೈದರಾಲೀಖಾನನೂ ಪರಮಮಿತ್ರರಾಗಿದ್ದರು. ಈತನಿಗೆ ಮೂರು ಮಂದಿ ಮಕ್ಕಳು. ಇವರಲ್ಲಿ ಮೊದಲನೆಯವನ ಹೆಸರು ಭೀಮರಾಯನೆಂದು. ಈತನು ಟೀಪೂಸುಲ್ತಾನರ ಅಂತರಂಗ ಮಿತ್ರನೂ ಅಂಗರಕ್ಷಕನೂ ಆಗಿದ್ದನು. ಈತನು ಹುಲಿಕಾಳಗದಲ್ಲಿ ನಿಪುಣನಾದಾಗ್ಯೂ, ಅದರಿಂದಾದ ಘಾಯದಿಂದಲೇ ಮೃತನಾದನು

ಎರಡನೆಯವನಾದ ರಾಮರಾಯನು ಟೀಪೂಸುಲ್ತಾನರಿಗೂ ಕಾಬೂಲಿನ ಅಮೀರರಿಗೂ ಸ್ನೇಹವನ್ನುಂಟುಮಾಡಲು ಕಾಬೂಲಿಗೆ ಹೋಗಿ ಅಲ್ಲಿಂದ ಸ್ವದೇಶಕ್ಕೆ ಹಿಂದಿರುಗಿ ಬರುತ್ತಿರುವಾಗ ಶೀತಜ್ವರದಿಂದ ಪೀಡಿತನಾಗಿ ಅಲ್ಲಿಯೇ ಕಾಲಾಧೀನನಾದನು. ರಾಘವೇಂದ್ರಕವಿಯು ಈ ಸನ್ನಿವೇಶವನ್ನು ಈ ರೀತಿ ವರ್ಣಿಸುತ್ತಾನೆ.

ಪದ–ಪುನಹೆ ರಾಜ್ಯಕೆ ಘಡ್ನವೀಸರು ಮಂತ್ರಿ ಹರಿಪಂತಾಖ್ಯನೇ ಸೇನಾಧೀಶ
ಬಾರಾಭಾಯಿಗಳ ಮೈತ್ರಿಯನು ಜೊತೆಗೊಳಿಸಿ।

ಹೈಂದವರೆ ಭಾರತಕೆ ಚಕ್ರಾಧೀಶರೆಂಬಂತಿರ್ದರೈ–ಮೃತಿ ಬಂದುದವ
ರೀರ್ವರಿಗೆ ಮಾಸ ದ್ವಯದಿ ರವದಿ ಯಲಿ, ಅತ ನರಸಾಖ್ಯ ಹರಿಪಂತ
ರಿಗೆ ಮಕ್ಕಳು ಮೂವರದರೊಳು ಭೀಮಾಖ್ಯ ಪೆಸರಿನ ರಾಯ
ಟಿಪ್ಪುಪ್ರಭುವಿಗೆ ಪ್ರಿಯದ ಮಿತ್ರನು ಅಂಗರಕ್ಷಕನು — ಆತ ಹುಲಿ
ಕಾಳಗದಿ ಜಯವನು ಗಳಿಸಿ ತನ್ನರಸಂಗೆ ಸಾಹಸದೋರಿರ ವಿಜನ
ಪುರವ ಸೇರ್ದನು !

ಬಹಳ ರೋದನಗೈದರೈ ಸುಲ್ತಾನ್ ಪ್ರಭುವರರು–ಎರಡನೆಯ ರಾಮ
ರಾಯ ಕಾಬೂಲಿನ ಅಮೀರರ ಮೈತ್ರಿ ಸುಲ್ತಾನರಿಗೆ ಘಟನೆಯ
ಗೈವುತಿರ್ಪಾ ರಾಯಭಾರದಲಿ ।

ಸೇರಿದನು ಕಾಬೂಲು ನಗರದೊಳಲ್ಲಿ ಕಾರ್ಯ ಸಾಧಿಸಿದ ತರುವಾಯ
ಕಾಶಿಯು ನಗರದಲಿ ಮೃತಿ ಪೊಂದಿದನು ಶೀತಜ್ವರದ ತಾಪದಲಿ ॥

ಪದ–ಮೂರನೆಯ ಬಾಲಕನು ನನ್ನಯ ಪೋಷಣೆಯೊಳಿರುತಿರ್ಪ ವಿದ್ಯಾಭ್ಯಾಸ
ವಾಯಿತು–ವರುಷ ಹದಿನಾರಾಯ್ತು ಮದುವೆಯ ಗೈದಿಹೆನು ಚಿಕ್ಕ
ಬಳ್ಳಾಪುರದ ಗಿರಿಧರಕುಲದ ಋಷಿವರರು ।

ಮಗಳನಿತ್ತರು ನಾಮ ನರಸಮ್ಮೆಂದು ಕರೆವರು ತಂದೆ ಏಂ ಸಾಮಾನ್ಯರೇ
ವೆಂಕಟಕೃಷ್ಣಾಚಾರ್ಯನಾಮಕರು ॥

ಈ ಮೇಲೆ ಹೇಳಿದ ಕಾರಣಗಳಿಂದ ಆಗಿನ ರಾಜಕೀಯದಲ್ಲಿ ಷಾಷ್ಟಿಕರ ಕೈ ಮೇಲಾಗಿದ್ದಿತಾಗಿ ಪೂರ್ಣಯ್ಯನವರು ತಮ್ಮ ಆಶೋತ್ತರಗಳನ್ನು ಸಾಧಿಸಲು ಶಕ್ತರಾಗಲಿಲ್ಲ. ಮೈಸೂರುದೇಶವು ಇಂಗ್ಲಿಷರ ವಶವಾಗುವ ಕಾಲಕ್ಕೆ ಪೂರ್ಣಯ್ಯನವರ ಸುದೈವದಿಂದ ಪೂರ್ವೋಕ್ತ ಷಾಷ್ಟಿಕಮಹಾವ್ಯಕ್ತಿಗಳು ವಿಧಿ ವಶರಾಗಿದ್ದುದರಿಂದ—ಪೂರ್ಣಯ್ಯನವರಿಗೆ ಈ ದೇಶದ ಮಂತ್ರಿಪದವಿಯು ಅನಾಯಾಸವಾಗಿ ದೊರಕಿತು. ಆಗ ಅವರು ತಮ್ಮ ಪೂರ್ವವೈರವನ್ನು ನೆನೆದು—ಹತಶೇಷರಾಗಿದ್ದ ಷಾಷ್ಟಿಕರ ತಲೆಯ ಮೇಲೆ ಗದಾಪ್ರಹಾರ ಮಾಡಿದರು. ಇದರಿಂದ ಈ ಮನೆತನದವರಿಗೆ ವರ್ಣನಾತೀತವಾದ ಕಷ್ಟನಷ್ಟಗಳುಂಟಾದುವೆಂಬುದಕ್ಕೆ ಅನೇಕ ನಿದರ್ಶನಗಳಿವೆ.

ಕೃಷ್ಣರಾಯರ ಜೀವನಚರಿತ್ರೆ ಮತ್ತು ಗ್ರಂಥಗಳ ವಿಚಾರವಾಗಿ "ಕವಿಚರಿತ್ರೆ"ಗಾರರು ಶ್ರೀ ಆರ್. ನರಸಿಂಹಾಚಾರ್ಯರು ಪಟ್ಟಿರತಕ್ಕ ಅಭಿಪ್ರಾಯವನ್ನು ವಿಚಾರ ಮಾಡೋಣ. "ಈತನು ೧೮೮೯ನೆ ಶುಕ್ಲ ಸಂವತ್ಸರದಲ್ಲಿ ಪರಂಧಾಮವನ್ನು ಹೊಂದಿದ ಜಗನ್ನಾಥವಿಠಲರನ್ನು ತನ್ನ ಗುರುವೆಂದು ಹೇಳುತ್ತಾನೆ. ಈತನ ಕಾವ್ಯಸರಣಿಯು ಭಕ್ತಿ ಮತ್ತು ಪ್ರಮೇಯ ವಿಚಾರಗಳಲ್ಲಿ ಬಹುಮಟ್ಟಿಗೆ ಜಗನ್ನಾಥವಿಜಯಕಾವ್ಯವನ್ನು ಹೋಲುತ್ತದೆಯಾದರೂ ಈತನು ಸಂಸ್ಕೃತ ಮತ್ತು ಹಳೆಗನ್ನಡಗಳಲ್ಲಿ ಉದ್ದಾಮ ಪಂಡಿತನಾಗಿದ್ದನು. ಮಾದರಿಗಾಗಿ ಕೆಲವು ವೃತ್ತಪದ್ಯಗಳನ್ನು ಉದಾಹರಿಸಿರುತ್ತೆ. ಈತನು ೧೭೫೮ನೇ ಬಹುಧಾನ್ಯಸಂವತ್ಸರದಲ್ಲಿ ಹುಟ್ಟಿ ೧೮೨೮ನೇ ಸರ್ವಧಾರಿ ಸಂವತ್ಸರದಲ್ಲಿ

ನಿರ್ಯಾಣ ಹೊಂದಿದಂತೆ ತಿಳಿಯಬರುತ್ತೆ. ಜನ್ಮಸ್ಥಳ · ದೊಡ್ಡಬಳ್ಳಾಪುರ
ಜೀವಿತಕಾಲ · ೭೦ ವರ್ಷಗಳು.

ವೃತ್ತ :— ಶ್ರೀಕಾಂತಾಂಬಕನೀಲನೀರಜವ್ಯುಗಾಂಕಾನಂದದಾತಾ ಶ್ರಿತಾನೀಕಾಂ
ಭೋರುಹಲೋಕಬಂಧು ಕರುಣಾಪಾಂಗಾಪಾಲಿತಾ ಜಾಂಡನೇ
ಪಾಕಾರಿ ಪ್ರಮುಖಾಮರಸ್ತುತಪದಪ್ರಾಣಾತ್ಮಜಾಧೀಶನೇ ಏಕಾಂತಾ
ಮಲಭಕ್ತನೆಂದೆನಿಸಿ ನೀ ಸಂರಕ್ಷಿಸೈ ಮಾಧವಾ ||

ವೃತ್ತ– ಶ್ರೀಕುವಲಯಾಪ್ತಾನುಜಾಧವ ಲೋಕಾಚ್ಛನಲಾಬ್ಜನೇತ್ರಾನೇಕ
ಪಾಸುರವೈರಿಮುಖಸುರರಕ್ಷಕಾಂಬುನಿಧಿ ಮೇಖಲಾಭರಣಾ ಶ್ರೀಶಾಸಕ
ಲೋಕಪಾಲಕ ಸಲಿಸು ಕೋರ್ಕೆಯ ವೀರನರಸಿಂಹ ||

ಭಾ|| ಷ|| ತನ್ನ ಬಿಸಿಲಿಕೆಯನ್ನು ನೋಡದೆ ಅನ್ಯರಾಸರ ಕಳೆವ ಸಜ್ಜನರನ್ನೆ
ತೋರುತ ವೃಕ್ಷತತಿಗಳು ತಪನಕರದಿಂದಾ |

ಬನ್ನಬಟ್ಟಾದರೆಯು ಪಥಿಕರ ಮನ್ನಿಸುತ ನೆಲಳೀವುತಾದರವನ್ನು ಮಾಡು
ವವಲ್ಲಿ ಕರುಣಾಳುಗಳ ತೆರದಿಂದಾ ||

## ಯಾದವರಾಯರು

ಕೃಷ್ಣರಾಯರಿಗೆ ಯಾದವರಾಯನೆಂಬ ಏಕೈಕ ಪುತ್ರನಿದ್ದನು. ಆತನು ಬಾಲ್ಯದಲ್ಲಿ ವಿದ್ಯಾಭ್ಯಾಸಕ್ಕಾಗಿ ಕಾಶೀನಗರಕ್ಕೆ ಹೋದನು. ಕೃಷ್ಣರಾಯರು ಮಗನ ಈ ತೀರ್ಮಾನಕ್ಕೆ ಒಪ್ಪಿಗೆಯನ್ನು ಕೊಡಲಿಲ್ಲ.

ಈ ಸಂದರ್ಭದಲ್ಲಿ ತೃಣಪುರದ ರಾಘವೇಂದ್ರಕವಿಯು ತಾನು ಪ್ರತ್ಯಕ್ಷದಲ್ಲಿ ಕಂಡುದನ್ನು ಈ ರೀತಿ ವರ್ಣಿಸಿದ್ದಾನೆ:—

ಪದ- ಇವರಿಗೋರ್ವನು ತನಯ ಯಾದವರಾಯನೆಂಬನು ಬಾಲ ಕಾಶಿಯೊಳ
ವನು ವಿದ್ಯವ ಕಲಿಯುತಿರುತಿಹನು |

ವ್ಯಾಕರಣ, ಸಾಹಿತ್ಯ, ವೇದಾಂತಗಳು ದರ್ಶನಸಹಿತ ಕಂಠದ ಪಾರ
ವಾತಗೆ ಕಾಶಿಯಲಿ ತಾನಿರ್ದನಾತನು ತಂದೆಗವಿಧೇಯದಲಿ
ತಾ ಪೋದ ॥

ಯಾದವರಾಯನು ಕಾಶಿಯಿಂದ ಹಿಂತಿರುಗಿದ ತರುವಾಯ ಮುಮ್ಮಡಿಕೃಷ್ಣ ರಾಜಒಡೆಯರ ಆಸ್ಥಾನವಿದ್ವಾಂಸನಾಗಿದ್ದನು. ಈತನು "ಕಲಾವತೀ ಪರಿಣಯ"ವೆಂಬ ಹಳೆಗನ್ನಡ ಗದ್ಯಕಾವ್ಯವನ್ನು ರಚಿಸಿದ್ದಾನೆ. ಈ ಗ್ರಂಥದ ಶೈಲಿಯು ಮನೋಹರವಾಗಿಯೂ ಕಿವಿಗಿಂಪಾಗಿಯೂ ಲಲಿತಪದಗಳಿಂದ ಮಿಳಿತವಾಗಿಯೂ ಚಿತ್ತಾಕರ್ಷಣೀಯವಾದ ಕಥಾಸಂವಿಧಾನವುಳ್ಳದಾಗಿಯೂ ಇರುವುದು. ಈ ಗ್ರಂಥವನ್ನು ಈಗ್ಗೆ ಸುಮಾರು ೫೦ ವರ್ಷಗಳ ಹಿಂದೆ ಮದ್ರಾಸು ವಿದ್ಯಾನಿಲಯದ ಬಿ. ಎ., ಪರೀಕ್ಷೆಗೆ ಪಠ್ಯಪುಸ್ತಕವನ್ನಾಗಿ ನಿಯಮಿ ಸುತ್ತಿದ್ದರೆಂದು ಗೊತ್ತಾಗಿದೆ. ಈಗ ಬಳಕೆಯಲ್ಲಿರುವ ಪ್ರಸಿದ್ಧವಾದ ಹಳೆ ಗನ್ನಡ ವಚನಕಾವ್ಯಗಳಲ್ಲಿ ಇದೇ ದೊಡ್ಡದು. ಹನ್ನೆರಡು ಆಶ್ವಾಸಗಳಿಂದ ಕೂಡಿ ೩೦೦ ಪುಟಗಳಿಗಿಂತ ಹೆಚ್ಚಾಗಿರುವುದು. ಯಾದವರಾಯನ ಸ್ವಹಸ್ತ ಲಿಖಿತಪ್ರತಿಯು ಆತನ ಮಗನ ಬಳಿ ಇದ್ದಿತೆಂತಲೂ ಆತನು ಈ ಕೃತಿಯನ್ನು ತನ್ನ ಬಂಧುಮಿತ್ರರೂ ಇಷ್ಟರೂ ಸೇರಿದ ಸಭೆಗಳಲ್ಲಿ ಆಗಾಗ ಸುರಸವಾಗಿ ಓದಿ ಅರ್ಥ ಹೇಳುತಿದ್ದನೆಂತಲೂ ತಿಳಿಯಬಂದಿದೆ. ಈತನ ಮಗನ ಹೆಸರು ವೆಂಕಟರಾಯ. ಈತನು ಕಡೆಯತನಕ ನೈಷ್ಠಿಕ ಬ್ರಹ್ಮಚಾರಿಯಾಗಿದ್ದು ತನ ೮೦ನೆಯ ವಯಸ್ಸಿನಲ್ಲಿ ದೈವಾಧೀನನಾದನು ಈ ಗ್ರಂಥದ ಆದಿಯಲ್ಲಿ ಕವಿಯು—"ಶ್ರೀಮನ್ಮುಕುಂದಚರಣಾರವಿಂದರುಚಿರಾತಪತ್ರಛಾಯಾಶ್ರಯಾ ಪಾಸ್ತಭವಾತಪಾವಾಪ್ತಸಂತಾಪನಾದ ಯಾದವನೆಂಬ ಕಬ್ಬಿಗಂ ಪಬ್ಬಿಸಿದನೀ ಕಥಾಲತೆಯನತಿರುಚಿರವಾಗಮೃತವರ್ಷದಿಂ ಪದಶಯ್ಯಾಪಾಕರೀತಿಗಳಿಂ ಧ್ವನಿ ರಸಾಲಂಕಾರನೀತಿಗಳಿಂದಭಿನವಪ್ರೌಢಸಂವಿಧಾನಂಗಳಿಂ ರುಚಿರತರಮಾಗಿರ್ಪ ಕಲಾವತೀಪರಿಣಯಮೆಂಬೀ ವಚನಪ್ರಬಂಧಮಂ" ಎಂದು ಹೇಳಿದ್ದಾನೆ. ರಾಜಕಾರ್ಯಪ್ರಸಕ್ತ ಶ್ರೀಮಾನ್ ಬೆಳ್ಳಾವೆ ವೆಂಕಟನಾರಾಯಣಪ್ಪನವರು ೧೯೨೫ನೇ ಇಸವಿ ಜನವರಿ ತಿಂಗಳು ಕರ್ನಾಟಕಸಾಹಿತ್ಯಪರಿಷತ್‌ಪತ್ರಿಕೆಯಲ್ಲಿ

ಈ ಕವಿಯ ವಿಚಾರವಾಗಿಯೂ ಈತನ ಗ್ರಂಥದ ವಿಚಾರವಾಗಿಯೂ ಒಂದು ದೀರ್ಘ ಲೇಖನವನ್ನು ಬರೆದಿದ್ದಾರೆ. ಅದರಿಂದ ಆರಿಸಿ ತೆಗೆದ ಕೆಲವು ವಾಕ್ಯಗಳನ್ನು ಇಲ್ಲಿ ಉದ್ಧರಿಸುತ್ತೇವೆ. "ಈತನ ಹೆಸರು ಯಾದವರಾಯ. ಮತ ಅರವತ್ತೊಕ್ಕಲು ಮಾಧ್ವ ಬ್ರಾಹ್ಮಣ. ಆದರೂ ಗ್ರಂಥದಲ್ಲಿ ಶಿವಮಾಹಾತ್ಮ್ಯವೇ ಹೆಚ್ಚಾಗಿದೆ. ವಾಸಸ್ಥಳ ಬೆಂಗಳೂರು ಡಿಸ್ಟ್ರಿಕ್ಟಿನಲ್ಲಿರುವ ದೊಡ್ಡಬಳ್ಳಾಪುರ. ಈತನು ಮುಮ್ಮಡಿ ಕೃಷ್ಣರಾಜ ಒಡೆಯರ ಆಸ್ಥಾನಪಂಡಿತನು ದೊರೆಯು ಆತನಲ್ಲಿ ಬಹಳ ವಿಶ್ವಾಸವನ್ನೂ ಗೌರವವನ್ನೂ ಇಟ್ಟಿದ್ದಂತೆ ತೋರುವುದು. ಆಸ್ಥಾನದಲ್ಲಿ ಗಂಭೀರವಾಗಿಯೂ ಚಾತುರ್ಯದಿಂದಲೂ ಸಂದರ್ಭಾನುಸಾರವಾಗಿ ಮಾತಾಡುತ್ತಿದ್ದನಂತೆ. ಒಂದಾನೊಂದು ಸಂದರ್ಭದಲ್ಲಿ ದೊರೆಯು ಒಡ್ಡೋಲಗದಲ್ಲಿದ್ದಾಗ ಒಬ್ಬ ಶ್ರೀಮಂತನು ಯಾದವರಾಯನನ್ನು ಕುರಿತು ಹಾಸ್ಯಮಾಡಲೆಳಿಸಿ "ಇದೇನು ರಾಯರೇ ! ಇಷ್ಟು ದೊಡ್ಡ ಮೀಸೆಗಳನ್ನಿಟ್ಟುಕೊಂಡಿರುವಿರಿ" ಎಂದು ಕೇಳಿದನಂತೆ ಅದಕ್ಕೆ ಆತನು "ಸ್ವಾಮಿ ! ತಮ್ಮಂತಹ ಶ್ರೀಮಂತರ ಮನೆಗಳನ್ನು ಗುಡಿಸುವುದಕ್ಕಾಗಿಟ್ಟುಕೊಂಡಿರುವೆನು" ಎಂದು ಉತ್ತರ ಕೊಟ್ಟನಂತೆ. ಮತ್ತೊಂದು ಸಂದರ್ಭದಲ್ಲಿ ರಾಜಾಸ್ಥಾನದಲ್ಲಿ ಗೌರವಸ್ಥನೊಬ್ಬನು ತನ್ನ ಕುಲಪ್ರಶಂಸೆ ಮಾಡಿಕೊಳ್ಳುವಲ್ಲಿ "ನಾವು ದೇಶಸ್ಥ ಪಿಂಡಗಳು" ಎಂದು ಜಂಭ ಕೊಚ್ಚಿಕೊಂಡನಂತ. ಇದನ್ನು ಕೇಳಿದ ಯಾದವರಾಯನು "ನಾನೊಬ್ಬ ಅರವತ್ತೊಕ್ಕಲು ಕಾಗೆ" ಎಂದು ಥಟ್ಟನೆ ಹೇಳಿದನಂತೆ. (ಕಾಗೆಯು ಪಿಂಡಗಳನ್ನು ತಿನ್ನುವುವು.) ಈ ಕವಿಯ ವಿಷಯವಾಗಿ ಇಂತಹ ಮಾತುಗಳು ಇನ್ನೂ ಇರುವುವು. ದೊರೆಯ ವಿಶ್ವಾಸಕ್ಕೆ ಪಾತ್ರನಾಗಿ ದೊರೆಯೊಡನೆ ಸಲಿಗೆಯಿಂದಿರುವವರ ಮೇಲೆ ಅನೇಕರ ಕಣ್ಣಿರುವುದು ಪ್ರಪಂಚದ ರೀತಿ. ಯಾದವರಾಯನಿಗೆ ರಾಜಾಸ್ಥಾನದಲ್ಲಿ ಹಗೆಗಳಿಲ್ಲದಿರಲಿಲ್ಲ. ಅವರು ದೊರೆಯೊಡನೆ ಈತನ ಮೇಲೆ ದೂರುಗಳನ್ನು ಹೇಳಿ ಈತನಲ್ಲಿ ದೊರೆಗೆ ಅಸಹ್ಯವುಂಟಾಗುವಂತೆ ಮಾಡಲು, ಯಾದವರಾಯನು ರಾಜಾಶ್ರಯವನ್ನು ಬಿಟ್ಟು ತನ್ನ ಹಳ್ಳಿಗೆ ಬಂದು ಸೇರಿ ಅಲ್ಲಿ ಈ "ಕಲಾವತೀಪರಿಣಯ"ವನ್ನು ರಚಿಸಿ, ಅದರ ಒಂದು ಪ್ರತಿಯನ್ನು ದೊರೆಗೆ ಕಳುಹಿಸಿಕೊಟ್ಟನಂತೆ. ದೊರೆಯು ಇದನ್ನು ನೋಡಿ ಬಹು ಸಂತೋಷಪಟ್ಟು ತನಗೆ ಓದಿಹೇಳಲು ಯಾದವರಾಯನನ್ನೇ ಮರಳಿ ಕರೆಯಿಸಿಕೊಂಡನಂಕತೆ." ಎಂತೆಯ ಧೋರಣೆಯನ್ನು ವಾಚಕ

ರಿಗೆ ಸ್ವಲ್ಪಮಟ್ಟಿಗೆ ತಿಳಿಸಲು ಕೆಲವು ಭಾಗಗಳನ್ನು ಉದ್ಧರಿಸಿ ಬರೆಯುತ್ತೇವೆ.

"ಮತ್ತಮಾರಾಜ್ಯದೊಳ್ ನಾಸ್ತಿಕ್ಯ ಶಶಶೃಂಗಗಳಲ್ಲಿ ತಾನಲ್ಲದೆ ನರರ ವಾಕ್ಯದೊಳಿಲ್ಲ – ಕಾಠಿಣ್ಯ ಮಂಬಲಾಪಯೋಧರಗಳನ್ನುಳಿದು ಜನರ ಹೃದಯದೊಳಿಲ್ಲ, ಕಾರ್ಶ್ಯಮದು ಕಾಮಿನೀಜನರ ಪುರ್ಬಿನಲ್ಲಿಯೇ ಹೊರತು ಬುಧರ ಬುದ್ಧಿಯೊಳಿಲ್ಲ, ಹರಿಯ ವಿದ್ವೇಷವೆಂಬುವುದು ಹಸ್ತಿಗಳಲ್ಲಿಯೇ ಹೊರತು ನರರ ಚಿತ್ತದೊಳಿಲ್ಲ, ಮತ್ತಮಾರಾಷ್ಟ್ರದಲ್ಲಿರ್ಪ ಮಾನವರಿಂಗೆ ಭೀತಿಯು ಪರರ್ಗಿಂದೆ ಪಳಿದಾಡಿಕೊಂಬುವಳಿಗಜ್ಜಗಳನೊರ್ಮೆಯಾದೊಡೆಯು ಗೈವುದರಲ್ಲಿ– ಕ್ಲೇಶವನ್ಯರೊದಗಿದಾ ಪದವ ಲೋಕನದಿ–ಶ್ರಮ ಕುಲೋಚಿತವಾದ ಬಿಜ್ಜೆಗಳ ಕಲಿವಲ್ಲಿ–ಪರಮುಸಾಪರವು ಪರರವಗುಣಗ್ರಹಣದಲಿ–ಚಿಂತೆ ಪರಲೋಕಗಳ ಸಂಪಾದಿವುದರಲ್ಲಿ–ಮೂರ್ಛೆ ನಿಧುವನದಲ್ಲಿ–ನಿಂದೆ ದುರ್ವಿಷಯದಲಿ–ಪೌರುಷವು ನಿಜನಿಜೇಂದ್ರಿಯಗಳ ಪರಾಜಯದೊಳಿಂತು ಲೋಕಾತಿಶಯಮಾದ ಜನ ಪದವನ್ನು ನನ್ನಿಯಿಂ ನೋಡುತ್ತ ಸಿದ್ಧಪತಿ ಮನದಲ್ಲಿ ಧನ್ಯನೀತಿರಿಯಾಣ್ಮನೆಂದು ತಾಳಿ ಪೊಗಳುತ ಪತ್ತನದ ಸಾಮೀಪ್ಯವನ್ನೈದಿ,"

ಇದೇ ರೀತಿಯಲ್ಲಿ ಕವಿತಾ ಸರಣಿಯು ಮುಂದಕ್ಕೂ ತೆರಳುವುದು. ಇದರ ಧಾಟಿಯು ದಂಡಕದಂತಿರುವುದು. ಕವಿತೆಯೆಲ್ಲವೂ ಇದೇ ರೀತಿಯಾಗಿದ್ದಿರಬಹುದು. ಕವಿಯು ಈ ರೀತಿಯಾಗಿ ಲಲಿತಪದ ಸರಣಿಯಿಂದ ಇಷ್ಟು ದೊಡ್ಡ ಗದ್ಯಗ್ರಂಥವನ್ನೆಲ್ಲಾ ದಂಡಕರೂಪವಾಗಿ ರಚಿಸಬೇಕಾದರೆ ಆತನ ಪಾಂಡಿತ್ಯವು ಸಾಮಾನ್ಯವಾದುದಾಗಿರಲಾರದು.

ಕವಿಯು ಅಲ್ಲಲ್ಲಿ ತಕ್ಕ ಅಲಂಕಾರಗಳನ್ನು ಸುಲಕ್ಷಣವಾಗಿ ಸೇರಿಸಿರುವನು :

"ಸರ್ವತೋಮುಖ ಸಮುತ್ಸಕಜನಾಕೀರ್ಣಮಾಗಿರ್ಪ ಸಭೆಯೆಂಬ ಸರಸಿಯೊಳು ಸುಳಿದಾಡುವಂಚೆಗಳ ತೆರದಿಂದ ಕಂಕಣಕ್ವಣಕಲಿತ ಕಾಮಿನೀಕರಕಮಲ ಚಲಿತಚಾಮರಗಳಿಂ ರಾಜಿಸಿತಿರ್ಪುದಾ ಮಹೀಶನಾಸ್ಥಾನಮಂಟಪವು–ಭೋಗಿವ್ಯೂಹಸೇವ್ಯಮಾದೊಡೆಯು ಗರುಡನಾಲಯುವಲ್ಲ— ಕವಿರಾಜ ಬುಧ–ವಿರಾಜಿತ

ಮಾಡೊಡೆಯುಂ ನಭಮುದಲ್ಲ-ವಿದ್ಯಮಾಲಂಕೃತಮಾದೊಡೆಯುಂ ವನಮಲ್ಲ-ಬಿಂತು ಲೋಕಾತಿಶಯಮಾದ ಆ ರಾಜಸಭೆಯಂಗಲ್ಪ ಭಾಗ್ಯರಿಗೆ ಅಸಾಸಾಧ್ಯಮು ಪ್ರೌಢರಿಗಜೇಯ ಮರಿಗಳಿಗೆ ನಿಷಿದ್ಧಮು ಪ್ರಬುದ್ಧರಿಗ ಸಾವಲೋಕನೀಯಮು ಧೀರರಿಗಿಂತು ಪೊಗಳಲಸದಳಮಾದ ಸಭಾಸ್ಥಾನದೊಳ್"

ಶ್ರೀಯುತ ರಾಜಸೇವಾಪ್ರಸಕ್ತ ಬೆಳ್ಳಾವೆ ವೆಂಕಟನಾರಾಯಣಪ್ಪನವರು ಈ ಕವಿಯ ವಿಚಾರವಾಗಿ ಒಂದು ದೀರ್ಘ ಲೇಖನವನ್ನು ಪ್ರಕಟಿಸಿರುತ್ತಾರೆಯಷ್ಟೆ. ಸ್ಥಳ ಸಂಕೋಚದಿಂದ ಅದನ್ನು ಇಲ್ಲಿ ಪೂರ್ತಿಯಾಗಿ ಎತ್ತಿ ಬರೆಯಲು ಅವಕಾಶವಿಲ್ಲ. ಈ ಕವಿಯು ಷಡ್ದರ್ಶನಗಳಲ್ಲಿಯೂ ಆಳವಾದ ಪಾಂಡಿತ್ಯವನ್ನು ಗಳಿಸಿದ್ದನಲ್ಲದೆ "ತತ್ತ್ವರಂಜಿನಿ"ಯೆನ್ನುವ ತಾತ್ತ್ವಿಕ ಉದ್ಗ್ರಂಥವನ್ನು ರಚಿಸಿರುವುದಾಗಿ ಗೊತ್ತಾಗಿದೆ. ಈತನ ಮಗ ವೆಂಕಟರಾಯನು ಭೀಷ್ಮಾಚಾರ್ಯರು ಹೇಗೋ ಹಾಗೆ ಆಜನ್ಮ ಬ್ರಹ್ಮಚಾರಿಯಾಗಿದ್ದು ಕ್ರಿ. ಶ. ೧೮೮೨ನೇ ವರ್ಷದಲ್ಲಿ ತನ್ನ ೮೦ನೆಯ ವಯಸ್ಸಿನಲ್ಲಿ ಇಹಲೋಕ ವ್ಯಾಪಾರದಿಂದ ಬಿಡುಗಡೆ ಹೊಂದಿದನು.

ದೇಶಪಾಂಡೆ ಕೃಷ್ಣರಾಯರು ಭಾಗವತಾಗ್ರೇಸರರೂ ಅಪರೋಕ್ಷಜ್ಞಾನಿಗಳೂ ಶ್ರೀಜಗನ್ನಾಥದಾಸರ ಪ್ರಿಯಶಿಷ್ಯರೂ ಕರ್ನಾಟಕಕವಿತಾವಿಚಕ್ಷಣರೂ ಷಾಷ್ಟಿಕವಂಶಭೂಷಣರೂ ಆಗಿ ಉದ್ದಾಮಕೀರ್ತಿಯನ್ನು ಗಳಿಸಿದ್ದರು. ಇವರ ಪವಿತ್ರನಾಮವು ಪ್ರಾತಃಸ್ಮರಣೀಯವಾದುದೆಂಬುದರಲ್ಲಿ ಸಂದೇಹವಿಲ್ಲ. ಇವರ ಮಕ್ಕಳು ಯಾದವರಾಯರು ಉಭಯಭಾಷಾಪಂಡಿತರೂ ವರಕವಿಗಳ ಗುಂಪಿಗೆ ಸೇರಿದವರೂ ಆಗಿದ್ದರು. ಇವರಿಂದ ರಚಿತವಾದ ಗ್ರಂಥಗಳು ಪಂಡಿತರ ಮನ್ನಣೆಗೆ ಪಾತ್ರವಾಗಿವೆ.

ಇದುವರೆಗೆ ಷಾಷ್ಟಿಕ ಕುಲದಲ್ಲಿ ಪ್ರಸಿದ್ಧರಾಗಿದ್ದ ಕೆಲವು ಪ್ರಾಚೀನ ವ್ಯಕ್ತಿಗಳ ಪರಿಚಯವನ್ನು ಮಾಡಿಕೊಟ್ಟಿದ್ದೇವೆ. ಈಗ ಕೆಲವು ಆಧುನಿಕರ ಸೂಕ್ಷ್ಮ ಪರಿಚಯವನ್ನು ಮಾಡಿಕೊಡುತ್ತೇವೆ. ಮುಖ್ಯವಾಗಿ ಇಷ್ಟು ತಿಳಿಸಬಹುದು.

ಶ್ರೀರಾಘವೇಂದ್ರಸ್ವಾಮಿಗಳ ಮಠದಲ್ಲಿ ಕವೀಂದ್ರರಿಂದ ಆರಂಭಿಸಿ ಈಗ ಆ ಪೀಠದಲ್ಲಿ ವಿರಾಜಮಾನರಾಗಿರುವ ಶ್ರೀಸುಜಯೀಂದ್ರತೀರ್ಥರವರಿಗೂ

ಎಲ್ಲರೂ ಷಾಷ್ಟಿಕಕುಲೋತ್ಪನ್ನರು ಹಾಗೆಯೇ ಶ್ರೀವ್ಯಾಸರಾಜಮಠದಲ್ಲಿ ಶ್ರೀಅಕ್ಷೋಭ್ಯತೀರ್ಥರಿಂದ ಆರಂಭಿಸಿ ಶ್ರೀಜಗನ್ನಾಥತೀರ್ಥರ (ಭಾಷ್ಯದೀಪಿಕಾ ಚಾರ್ಯರೂ)ವರಿಗೂ ಷಾಷ್ಟಿಕಕುಲೋತ್ಪನ್ನರು, ಶ್ರೀಶ್ರೀಪಾದರಾಜಮಠದಲ್ಲಿ ಶ್ರೀಸ್ವರ್ಣವರ್ಣತೀರ್ಥರಿಂದ ಆರಂಭಿಸಿ ಈಗ ಆ ಪೀಠದಲ್ಲಿ ವಿರಾಜಮಾನರಾಗಿ ರುವ ಶ್ರೀವಿಜಯಸಿಧ್ಧಿತೀರ್ಥರವರಿಗೂ ಎಲ್ಲರೂ ಷಾಷ್ಟಿಕಕುಲದೀಪಕರು. ಪೀಠಾಧಿಪತಿಗಳಲ್ಲದೆ ಅನೇಕ ಪ್ರಸಿದ್ಧ ಹರಿದಾಸರೂ ಸಹ ಈ ಕುಲಕ್ಕೆ ಸೇರಿ ದವರು. ಇವರಲ್ಲಿ ಮುಖ್ಯರಾದವರು ವ್ಯಾಸರಾಜರಿಂದ ಅಂಕಿತ ಪಡೆದ ವಿಜಯದಾಸರು ಶ್ರೀಪುರಂದರದಾಸರು. ಅಲ್ಲದೆ ಗೋಪಾಲದಾಸರು, ಜಗನ್ನಾಥ ದಾಸರು ಪಂಗನಾಮ ತಿಮ್ಮಣ್ಣದಾಸರು ಮುಂತಾದವರು. ಇವರೆಲ್ಲರೂ ಅಪ ರೋಕ್ಷ ಜ್ಞಾನಿಗಳು. ಬಹು ಶಿಷ್ಯಸಮೂಹವುಳ್ಳವರು. ಅನೇಕ ದೇವರನಾಮಗಳು ಸುಳಾದಿಗಳು, ಉಗಾಭೋಗಾದಿಗಳನ್ನು ರಚಿಸಿರುವ ಮಹನೀಯರು.

ವಸ್ತುತಃ ಷಾಷ್ಟಿಕರು ಭರತಖಂಡದಲ್ಲಿ ಆಸೇತುಹಿಮಾಲಯ ಪರ್ಯಂತ ಅಲ್ಲಲ್ಲಿ ವಾಸಿಸುತ್ತಿದ್ದಾರೆ. ಉನ್ನತ ಪದಾಧಿಕಾರಗಳಲ್ಲಿಯೂ ವಿರಾಜಮಾನ ರಾಗಿದ್ದಾರೆ. ಈಚೀಚೆಗೆ ಇವರು ವಿದೇಶಗಳಲ್ಲಿಯೂ ಹರಡಿರುತ್ತಾರೆ. ದಕ್ಷಿಣಾ ಪಥದ ದೊಡ್ಡಬಳ್ಳಾಪುರ, ಚಿಕ್ಕಬಳ್ಳಾಪುರ, ಗೌಡಗೆರೆ, ಹೊಳವನಹಳ್ಳಿ, ಮುಳಬಾಗಲು, ತೀರ್ಥಹಳ್ಳಿ, ಧಾರಾಪುರ ಮುಂತಾದ ಊರುಗಳು ಷಾಷ್ಟಿಕ ಕುಲೋತ್ಪನ್ನಪ ಚುರವಾಗಿವೆ. ಎಲ್ಲರ ಜೀವನ ಚರಿತ್ರೆಯನ್ನು ತಿಳಿಸಲು ಗ್ರಂಥಗೌರವಭಯದಿಂದ ಸಾಧ್ಯವಿಲ್ಲ. ಉಪಲಕ್ಷಣಾರ್ಥವಾಗಿ ಕೆಲವರ ಚರಿತ್ರೆಯನ್ನು ಇಲ್ಲಿ ಸೂಕ್ಷ್ಮವಾಗಿ ಸೂಚಿಸಲಾಗಿದೆ.

# ಸ್ವರ್ಗವಾಸಿಗಳಾದವರು

## ಬೆಟ್ಟದ ವೆಂಕಟರಮಣಾಚಾರ್ಯರು

ಬೆಟ್ಟಾಚಾರ್ಯಮನೆತನದ ಹಿರಿಮೆಯ ವಿಚಾರವಾಗಿ ಈ ಗ್ರಂಥದ ಪೂರ್ವಾಧ್ಯಾಯಗಳಲ್ಲಿ ಸಾಕಷ್ಟು ವಿಶದವಾಗಿ ಶ್ರುತಪಡಿಸಿದ್ದೇವೆ. ಶೇಷಗಿರಿ ಶರ್ಮರ ಐವರು ಗಂಡು ಮಕ್ಕಳೂ ಸನ್ಯಾಸವನ್ನು ಸ್ವೀಕರಿಸಿದ್ದರಿಂದ ಅವರ

ಸಂತತಿಯು ಅಲ್ಲಿಗೇ ಕೊನೆಗೊಂಡು ಅವರ ಸಹೋದರ ತೀರ್ಥಾಚಾರ್ಯರ ಸಂತತಿಯು ವೃದ್ಧಿಹೊಂದಿತು. ಈ ಪರಿವಿಡಿಯಲ್ಲಿ ಒಂದೂವರೆ ಶತಮಾನದ ಹಿಂದೆ ವಾಸುದೇವಾಚಾರ್ಯರೆಂಬ ಮಹನೀಯರು ಜನ್ಮ ತಾಳಿದರು. ಇವರ ವಾಸಸ್ಥಳ ಚಿಕ್ಕಬಳ್ಳಾಪುರದ ಸಮೀಪದ ಗೌಡಗೆರೆ. ಇವರ ಹಿರಿಯರು ಹೇಗೋ ಹಾಗೆ ಇವರೂ ಷಡ್ದರ್ಶನಗಳಲ್ಲಿ ಪಾರಂಗತರು. ಈ ವಾಸುದೇವಾಚಾರ್ಯರಿಗೆ ನಾಲ್ವರು ಗಂಡು ಮಕ್ಕಳು: ಗುಂಡಾಚಾರ್ಯರು, ರಾಘವೇಂದ್ರಾಚಾರ್ಯರು, ವೆಂಕಟನರಸಿಂಹಾಚಾರ್ಯರು, ವೆಂಕಟರಮಣಾಚಾರ್ಯರು. ಎಲ್ಲರೂ ಚತುಶ್ಶಾಸ್ತ್ರಗಳಲ್ಲಿ ಹೆಸರುವಾಸಿಯಾದ ಘನವಿದ್ವಾಂಸರು; ಆದರೆ ಇವರಲ್ಲಿ ಕಿರಿಯರಾದ ವೆಂಕಟರಮಣಾಚಾರ್ಯರು ಉಳಿದ ಮೂವರಿಗಿಂತಲೂ ಹೆಚ್ಚು ಕೀರ್ತಿಯನ್ನು ಗಳಿಸಿದ್ದರು.

ಇವರು ಭರತಖಂಡದ ನಾನಾಭಾಗಗಳಲ್ಲಿ ಸಂಚಾರಮಾಡಿ—ವಿದ್ವಜ್ಜನರಿಂದ ಮರ್ಯಾದಿತರಾಗಿದ್ದರು ತಿರುವನಂತಪುರ ಮತ್ತು ಬರೋಡಾ ಮಹಾರಾಜರು ಇವರಿಗೆ ಸುವರ್ಣಕಂಕಣಗಳನ್ನೂ ವರ್ಷಾಶನವನ್ನೂ ಕೊಟ್ಟು ಸನ್ಮಾನಿಸಿದ್ದರು. ಶೃಂಗೇರಿಯ ಜಗದ್ಗುರುಪೀಠಾಧೀಶರಾಗಿದ್ದ ಶ್ರೀನರಸಿಂಹಭಾರತಿ ಸ್ವಾಮಿಗಳು ವೆಂಕಟರಮಣಾಚಾರ್ಯರನ್ನು ಗೌರವದಿಂದ ಕಾಣುತ್ತಲಿದ್ದರು ನಮ್ಮ ಆಳಿದ ಮಹಾಸ್ವಾಮಿಯವರು ಇವರಿಗೆ "ಪಂಡಿತರತ್ನಂ" ಎಂಬ ಬಿರುದನ್ನು ದಯಪಾಲಿಸಿದ್ದರು. ಶ್ರೀಮನ್ಮಹಾರಾಜರ ಆಸ್ಥಾನದ ಮಹಾವಿದ್ವಾಂಸರಲ್ಲಿ ಇವರೂ ಒಬ್ಬರು. ಎಲ್ಲ ಮಾಧ್ವಮಠಾಧಿಪತಿಗಳೂ ಇವರಿಗೆ ಅಗ್ರಮರ್ಯಾದೆಯನ್ನು ಸಲ್ಲಿಸುತ್ತಿದ್ದರೆಂದು ಪ್ರತ್ಯೇಕ ಹೇಳಬೇಕಾಗಿಲ್ಲ. ಇವರು ರಚಿಸಿದ ಗ್ರಂಥಗಳು ಇವು—

## ಚಂದ್ರಿಕಾಪ್ರಕಾಶಪ್ರಸರ

ಮಹಾಮಹೋಪಾಧ್ಯಾಯ ಶ್ರೀಯುತ ರಾಮಸುಬ್ಬಾಶಾಸ್ತ್ರಿಗಳು ತಿರುವಿಶೆನಲ್ಲೂರಿನವರು; ಇವರು ಅದ್ವೈತ ವೇದಾಂತ ಶಾಸ್ತ್ರದಲ್ಲಿ ಅಪ್ರತಿಮ ಪಂಡಿತರು. ಶ್ರೀವ್ಯಾಸರಾಯಸ್ವಾಮಿಗಳ ಗ್ರಂಥತ್ರಯಗಳಲ್ಲೊಂದಾದ "ತಾತ್ಪರ್ಯಚಂದ್ರಿಕಾ" ಗ್ರಂಥವನ್ನು ಇವರು ಖಂಡಿಸಿ ಕ್ರಿ. ಶ. ೧೯೧೯ರ

ಸುಮಾರಿನಲ್ಲಿ "ಮಾಧ್ವಚಂದ್ರಿಕಾಖಂಡನ" ಎಂಬ ಹೆಸರಿನ ಒಂದು ಗ್ರಂಥವನ್ನು ಪ್ರಕಟಿಸಿದರು. ಇದರಿಂದ ಮಾಧ್ವಸಮಾಜದಲ್ಲಿ ಒಂದು ದೊಡ್ಡ ಆಂದೋಳನವೆದ್ದಿತು. ದ್ವೈತಸಿದ್ಧಾಂತದ ಧವಳಕೀರ್ತಿಗೆ ಇದು ಕಳಂಕಪ್ರಾಯವಾದುದೆಂದು ವಿಚಾರಪರರು ತರ್ಕಿಸಿದರು. ಬಂಧುಪಾರಂಪರ್ಯವಾಗಿ ಪೀಠಾರೋಹಣ ಮಾಡುತ್ತಿರುವ ಅರ್ವಾಚೀನ ಮಾಧ್ವಮಠಾಧಿಪತಿಗಳ್ಯಾರೂ ರಾಮಸುಬ್ಬಾಶಾಸ್ತ್ರಿಗಳ ಗ್ರಂಥವನ್ನು ಸಕಾರಣವಾಗಿ ಖಂಡಿಸುವ ಗೋಜಿಗೆ ಹೋಗಲಿಲ್ಲ; ಆದರೆ ಉತ್ತರಾಧಿಮಠದ ಅಧಿಪತಿಗಳಾಗಿದ್ದ ಶ್ರೀಸತ್ಯಧ್ಯಾನತೀರ್ಥರು ಮುಂದೆ ಬಂದು—"ಚಂದ್ರಿಕಾಮಂಡನ" ಎಂಬ ಗ್ರಂಥವನ್ನು ರಚಿಸಿದರೂ, ಅದು ಕಾರಣಾಂತರದಿಂದ ಸಂಪೂರ್ಣವಾಗಿ ಪ್ರಕಟವಾಗದೆ ಹೋದುದು ಜನಜಂಗುಳಿಯಲ್ಲಿ ಹೆಚ್ಚಿನ ಅಸಮಾಧಾನಕ್ಕೆ ಕಾರಣವಾಯಿತು. ಇಂತಹ ವಿಷಮಪರಿಸ್ಥಿತಿಯಲ್ಲಿ, ಶ್ರೀಯುತ ಆಚಾರ್ಯರು—"ಚಂದ್ರಿಕಾಪ್ರಕಾಶಪ್ರಸರ" ಎಂಬ ಗ್ರಂಥವನ್ನು ರಚಿಸಿ—ದ್ವೈತಸಿದ್ಧಾಂತಧ್ವಜವನ್ನು ಎತ್ತಿ ಹಿಡಿದರು.

ಶ್ರೀವ್ಯಾಸರಾಯರ ಬಂಧುವರ್ಗಕ್ಕೆ ಸೇರಿದ ರಾಮಾಚಾರ್ಯರಿಂದ ರಚಿತವಾದ "ತರಂಗಿಣಿ", ಶ್ರೀರಾಘವೇಂದ್ರಸ್ವಾಮಿಗಳಿಂದ ವಿರಚಿತವಾದ "ಚಂದ್ರಿಕಾಪ್ರಕಾಶ" ಇವೇ ಮುಂತಾದವುಗಳಂತೆ ಶ್ರೀಯುತ ಆಚಾರ್ಯರ "ಚಂದ್ರಿಕಾಪ್ರಕಾಶಪ್ರಸರ" ಗ್ರಂಥವೂ ಉಚ್ಚತರಗತಿಯ ಪ್ರಾಮಾಣಿಕ ಗ್ರಂಥಗಳಲ್ಲೊಂದಾಗಿದೆ. ಇದು ಡೆಮ್ಮಿ ಅಷ್ಟಪತ್ರದ ಆಕಾರದಲ್ಲಿದ್ದು ೪೦೦ ಪುಟಗಳನ್ನೊಳಗೊಂಡಿದೆ. ಇದನ್ನು ಮೂರು ಭಾಗಗಳಾಗಿ ವಿಂಗಡಿಸಿರುವರು. ಮೊದಲನೆಯ ಭಾಗದಲ್ಲಿ "ಜಿಜ್ಞಾಸಾಧಿಕರಣ"ವನ್ನು ಅನುವಾದ ಮಾಡಿರುವರು; ಇದರ ಪುಟ ಸಂಖ್ಯೆ ೧೨೯. ದ್ವಿತೀಯ ತೃತೀಯ ಭಾಗಗಳಲ್ಲಿ ಜನ್ಮಾಧಿಕರಣ, ಶಾಸ್ತ್ರಯೋನಿತ್ವಾಧಿಕರಣ, ಆನಂದಮಯಾಧಿಕರಣ, ಅನ್ತಸ್ತತ್ವಾಧಿಕರಣ, ಆಕಾಶಾಧಿಕರಣ, ಪ್ರಾಣಾಧಿಕರಣ, ಜ್ಯೋತಿರಧಿಕರಣ, ಪಾದಾನ್ತ್ಯಪ್ರಾಣಾಧಿಕರಣ ಇವುಗಳ ಅಂತರಾರ್ಥಗಳನ್ನು ಸ್ಪಷ್ಟೀಕರಿಸಿದ್ದಾರೆ. ಇವುಗಳ ಪುಟ ಸಂಖ್ಯೆ ೨೭೨. ಇದರ ಭಾಷಾಶೈಲಿಯು ಲಲಿತವೂ ಹರಿತವೂ ಆಗಿರುವುದು. ಇವರು ತಮ್ಮ ಗ್ರಂಥಾರಂಭದಲ್ಲಿ,

ಶ್ಲೋ॥ ವಂದೇ ವಂದಾರುಮಂದಾರಮಾನಂದಾದಿಗುಣಾರ್ಣವಂ ।
ಇಂದಿರಾಮಂದರೋರಸ್ಕಮುದೋಷಂ ಶೇಷಶಾಯಿನಂ ॥ ।'೧॥
ಕಾಯಾಧವಮಹಾಯಾಸನಿರಾಸಾಯ ಕೃತೋದಯಃ ।
ಮಾಯಾವಾನುಷಹರ್ಯಕ್ಷಃ ಪಾಯಾದಸ್ಮಾನಪಾಯತಃ ॥೨॥
ಗುರೂನ್ಪ್ರಣಮ್ಯ ಶಿರಸಾ ತತ್ಕಾರುಣ್ಯಬಲಾಶ್ರಯಾತ್ ।
ಚಂದ್ರಿಕಾಖಂಡನಾಭಾಸತಮಸ್ತೋಮದಿವಾಕರಃ ॥೩॥
ತಾತ್ಪರ್ಯಚಂದ್ರಿಕಾಸಮ್ಯಕ್‌ಪ್ರಕಾಶಪ್ರಸರಾಭಿದಃ ।
ನಿಬಂಧಃ ಕ್ರಿಯತೇ ಪ್ರಾಚಾಮುಪಜೀವ್ಯ ಸರಸ್ವತೀಮ್ ॥೪॥

ಎಂದು ಉಲ್ಲೇಖಿಸಿರುವರು

ಈ ಗ್ರಂಥದ ಪರಿಸಮಾಪ್ತಿಯಲ್ಲಿ "ಇತ್ಥಂ ತತ್ತ್ವತೋ ದುರದ್ಧರೇಷು ಶ್ರೀಮತ್ತಾತ್ಪರ್ಯಚಂದ್ರಿಕೋಕ್ತಾದ್ವೈತಮತಸಂಶ್ಲಿಷ್ಟೇಷು ಬಹುಷು ದೋಷೇಷು ಭ್ರಾಂತ್ಯಾ ಕತಿಪಯದೋಷಾಣಾಮುದ್ಧಿಧೀರ್ಷಯಾ ಚಂದ್ರಿಕಾಖಂಡನಾರ್ಥಂ ಪ್ರವೃತ್ತ್ಯೈಃ ಖಂಡನಕಾರೈಃ ಪ್ರಾಗೇವ ನೂತನಾದ್ವೈತವಾದ್ಯುತ್ಪ್ರೇಕ್ಷಿತದೂಷಣಾಭಾಸಸ್ಯ ಸ್ವಪ್ರಕಾಶಿತಸ್ಯ ತತ್ತ್ವವಾದಿಭಿಃ ಪ್ರಾಚೀನಾಚಾರ್ಯೈರೇವ ಪರಾಯಣಮಿತಿ ಸಿದ್ಧಮಿತ್ಯಶೇಷಮತಿಮಂಗಲಂ— ಇತಿ ಶ್ರೀಮದ್ವಿದ್ವತ್ಕುಲತಿಲಕ ಮಹೀಧರಕುಲೋತ್ಪನ್ನ ವಾಸುದೇವಾಚಾರ್ಯಾತ್ಮಜೇನ ಗೌಡಗೆರೀ ವೆಂಕಟರಮಣಾಚಾರ್ಯೇಣ ಸಂಪಾದಿತಚಂದಿಕಾಪ್ರಕಾಶ ಪ್ರಸಾರಾಭಿದೋ ನಿಬಂಧಃ ಸಮಾಪ್ತಃ" ಎಂದಿದೆ.

## ಅದ್ವೈತದೀಪಿಕಾವಾತಾಗಮ

"ಚಂದ್ರಿಕಾಪ್ರಕಾಶಪ್ರಸರ" ಗ್ರಂಥವು ೧೯೨೦ರ ಸುಮಾರಿನಲ್ಲಿ ಹೊರಬಿದ್ದಿತು ಆಗ ಕಲ್ಕತ್ತಾ ವಿಶ್ವವಿದ್ಯಾಲಯದ ಅಧ್ಯಾಪಕರೂ ಅದ್ವೈತವಿಶಾರದೇತ್ಯಾದಿ ಬಿರುದಾಂಕಿತರೂ ಆದ ನೂರಣಿ ಅನಂತಕೃಷ್ಣಶಾಸ್ತ್ರಿಗಳು–ಶ್ರೀಯುತ ಆಚಾರ್ಯರ ಗ್ರಂಥವನ್ನು ತಿರಸ್ಕರಿಸಿ "ಅದ್ವೈತದೀಪಿಕಾ" ಎನ್ನುವ ಬೇರೊಂದು ಕೃತಿಯನ್ನು ರಚಿಸಿ ತಮ್ಮ ಪಾಂಡಿತ್ಯಪ್ರದರ್ಶನ ಮಾಡಿದರು. ಆಗಲೂ ಯಾರೊಬ್ಬ ಮಾಧ್ವ ಮಠಾಧಿಪತಿಗಳೂ ದ್ವೈತಮತ ತತ್ತ್ವಗಳನ್ನು ಸಮರ್ಥಿಸಿ

ತಮ್ಮ ಪೀಠಾಧಿಕಾರದ ಕರ್ತವ್ಯವನ್ನುಳಿಸಿಕೊಳ್ಳಲು ಶಕ್ತರಾಗಲಿಲ್ಲ. ಆದರೆ ಶ್ರೀಯುತ ಆಚಾರ್ಯರು ಈ ಜವಾಬ್ದಾರಿಯನ್ನು ತಾವೇ ವಹಿಸಿಕೊಂಡು ಅದ್ವೈತದೀಪಿಕಾವಾತಾಗಮ" ಎನ್ನುವ ಅದ್ಭುತವೂ ಆಶ್ಚರ್ಯಜನಕವೂ ಆದ ಗ್ರಂಥರಚನೆಯನ್ನು ಮಾಡಿ ಅಪಾಯಕ್ಕೊಳಗಾಗಿದ್ದ ಮತಸಿದ್ಧಾಂತವನ್ನು ಉಜ್ಜೀವನಗೊಳಿಸಿದರು. ಮಾದರಿಗಾಗಿ ಈ ಗ್ರಂಥದಿಂದ ಕೆಲವು ವಾಕ್ಯಗಳನ್ನು ಆಯ್ದು ಅವುಗಳನ್ನು ಈ ಕೆಳಗೆ ಉದ್ಧರಿಸಲಾಗಿವೆ.

"ಯದ್ಯಪ್ಯತ್ರ ಖಂಡನಕಾರವಚನಾನಾಮತಿಸ್ಪಷ್ಟಾರ್ಥಾನಾಂ ದೀಪಿಕಾಕಾರೀಯವಿವರಣಾನಪೇಕ್ಷತ್ವಾತ್ ತದ್ಬುದ್ಧಿಮಾತ್ರಪರಿಕಲ್ಪಿತಾರ್ಥಾಭಾಸಪರತ್ವವಿವಕ್ಷಾಜ್ಞಾಪಕಾಭಾವಾಚ್ಚ ಖಂಡನಗ್ರಂಥೋಪರಿ ಗ್ರಂಥಕೃದುಕ್ತದೂಷಣಾನಾಮನುದ್ಧಾರ್ಯತಯಾ ತಾನಿ ವಜ್ರಕಲ್ಪಾನ್ಯೇವ। ದೀಪಿಕಾಕಾರಕುಬುದ್ಧಿಕಲ್ಪಿತಸ್ವತಂತ್ರದೂಷಣಾಭಾಸಾನಾಂ ತ್ವತ್ಯಂತನಿರ್ದಲತ್ವೇನ ಕ್ಷೋದಾಕ್ಷಮತ್ವಾತ್ ತದ್ದೂಷಣಪ್ರಯಾಸೋಽಪಿ ಮೃತಮಾರಣವದ್ವಿಫಲ ಏವ। ತಥಾಪಿ ಮಂದಜನಮನೋವ್ಯಾಮೋಹಹೇತುತ್ವಾದದ್ವೈತದೀಪಿಕಾಕಾರೋತ್ಪ್ರೇಕ್ಷಿತದೂಷಣಾಭಾಸಾನಾಮಸಾರತಾವ್ಯುತ್ಪಾದನೇನಾತಿಹೇಯತಾವಶ್ಯಪ್ರದರ್ಶನೀಯೇತಿ ಪುನರಪಿ ಮೃತಮಾರಣಾಯಾಯಮಾರಂಭಃ ॥"

ಈ ಗ್ರಂಥವು ಡೆಮ್ಮಿ ಅಷ್ಟಪತ್ರರೂಪದಲ್ಲಿ ೨೨೪ ಪುಟಗಳುಳ್ಳದಾಗಿದೆ. ಇವುಗಳ ಹೊರತು ಶ್ರೀಯುತ ಆಚಾರ್ಯರು "ಜೀವಕರ್ತೃತ್ವವಿಚಾರ"ವೆನ್ನುವ ಮತ್ತೊಂದು ತಾತ್ತ್ವಿಕ ಗ್ರಂಥವನ್ನು ರಚಿಸಿ ಮಾಧ್ವರಿಗೆ ಮಹೋಪಕಾರವನ್ನು ಮಾಡಿದ್ದಾರೆ. ಮೈಸೂರು ವಿಶ್ವವಿದ್ಯಾಲಯದ ಸಂಸ್ಕೃತಶಾಖೆಯ ಮುಖ್ಯಾಧಿಕಾರಿಗಳಾಗಿದ್ದ ಇವರ ಮಕ್ಕಳು ಡಿ. ಶ್ರೀನಿವಾಸಾಚಾರ್ಯ ಎಂ.ಎ ಅವರು ಈ ಮೇಲ್ಕಂಡ ಗ್ರಂಥಗಳಿಗೆ ಆಂಗ್ಲ ಮತ್ತು ಗೀರ್ವಾಣ ಭಾಷೆಗಳಲ್ಲಿ ದೀರ್ಘವೂ ಪ್ರಬೋಧಕವೂ ಆದ ಪ್ರಸ್ತಾವನೆಗಳನ್ನು ಬರೆದಿರುತ್ತಾರೆ. ಶ್ರೀಯುತ ವೆಂಕಟರಮಣಾಚಾರ್ಯರ ಜೀವನವು ಪಾಷ್ಟಿಕ ಮನೆತನದವರಿಗೆ ಆದರ್ಶನೀಯವೂ, ಅನುಕರಣೀಯವೂ ಆದುದು. ಇವರು ದೀರ್ಘಕಾಲ ಜೀವಿಸಿದ್ದು ತಮ್ಮ ಸದ್ವರ್ತನೆಯಿಂದ ಮಾನ್ಯತೆಯ ಮಹೋನ್ನತ ಶಿಖರವನ್ನೇರಿ ಕ್ರಿ. ಶ ೧೯೨೬ ರಲ್ಲಿ ತಮ್ಮ ಇಹಜೀವನದಿಂದ ಮುಕ್ತರಾದರು. ಇಂತಹ ಪುಣ್ಯಪುರುಷರ ಅವತಾರದಿಂದ ಪಾಷ್ಟಿಕವಂಶದ ಕೀರ್ತಿಯು ಬೆಳೆಯಿತು.

## ಗೌಡಗೆರಿ ಶ್ರೀನಿವಾಸಾಚಾರ್ಯರು

ಶ್ರೀಯುತ ಗೌಡಗೆರಿ ವೆಂಕಟರಮಣಾಚಾರ್ಯರ ಹಿರಿಯ ಮಕ್ಕಳಿವರು. ಪಿತೃಪರ್ಯರಲ್ಲಿಯೇ ಸಂಸ್ಕೃತವಿದ್ಯಾಭ್ಯಾಸ. ಸಂಸ್ಕೃತ, ಕನ್ನಡ ಮತ್ತು ಆಂಗ್ಲ ಭಾಷೆಗಳಲ್ಲಿ ಪೂರ್ಣಪಾಂಡಿತ್ಯವಿತ್ತು. ಮೈಸೂರು ಮಹಾರಾಜ ಕಾಲೇಜಿನಲ್ಲಿ ಸಂಸ್ಕೃತವಿಭಾಗದ ಪ್ರಾಧ್ಯಾಪಕರಾಗಿಯೂ, ಓರಿಯೆಂಟಲ್ ಲೈಬ್ರೆರಿಯ ಮುಖ್ಯಾಧಿಕಾರಿಗಳಾಗಿಯೂ ಸರ್ಕಾರದ ಸೇವೆಸಲ್ಲಿಸಿ ನಿವೃತ್ತರಾಗಿದ್ದರು. ಇವರು ಸದಾಕಾಲದಲ್ಲಿಯೂ ಶಿಷ್ಯರಿಗೆ ಸಚ್ಛಾಸ್ತ್ರ ಪಾಠಪ್ರವಚನಮಾಡಿಸುತ್ತಿದ್ದರು. ಅನೇಕ ಗ್ರಂಥಗಳನ್ನು ರಚಿಸಿದ್ದಾರೆ ಅನೇಕ ವಿಶ್ವವಿದ್ಯಾನಿಲಯಗಳ ಸಂಸ್ಕೃತ ಭಾಗದಲ್ಲಿ ಪರೀಕ್ಷಕರಾಗಿದ್ದರು ಹಾಗೆಯೇ ವಿದ್ವತ್ಪರೀಕ್ಷೆಗಳಿಗೂ ಪರೀಕ್ಷಕ ರಾಗಿದ್ದರು. ಇವರು 92 ವರ್ಷಗಳಕಾಲ ಬದುಕಿದ್ದು ಕ್ರಿ. ಶ. 1969ರಲ್ಲಿ ನಿಧನರಾದರು. ಬೆಟ್ಟದಮನೆತನದ ವಿಶ್ವಾಮಿತ್ರ ಗೋತ್ರಕ್ಕೆ ಸೇರಿದವರು.

## ರಾವ್ ಬಹದೂರ್ ಬಿ. ವೆಂಕಟೇಶಾಚಾರ್ಯರು

ಇವರ ಜನ್ಮಸ್ಥಳ ಚಿಕ್ಕಬಳ್ಳಾಪುರದ ಸಮೀಪದ ಬಚ್ಚಹಳ್ಳಿ. ಚಿಕ್ಕ ಬಳ್ಳಾಪುರದಲ್ಲಿ ವಕೀಲರಾಗಿದ್ದ ಶ್ರೀಯುತ ವ್ಯಾಸರಾಯಾಚಾರ್ಯರ ದ್ವಿತೀಯ ಪುತ್ರರು. ತ್ರಿಭಾಷಾಪಂಡಿತರು – ಬೆಂಗಳೂರು ಸೆಂಟ್ರಲ್ ಕಾಲೇಜಿನಲ್ಲಿ ಭೌತಿಕಶಾಸ್ತ್ರ ಪ್ರಾಧ್ಯಾಪಕರಾಗಿಯೂ, ಅಧ್ಯಕ್ಷರಾಗಿಯೂ ಇದ್ದರು, ನಿವೃತ್ತಿ ನಂತರ ಬೆಂಗಳೂರಿನ ತಾತಾ ವಿಜ್ಞಾನಮಂದಿರದ ಅಧ್ಯಕ್ಷರಾಗಿದ್ದರು. ಇವರು ಬಹುಜನ ಲೌಕಿಕ ವೈದಿಕಶಿಷ್ಯರಿಗೆ ಮಧ್ವಶಾಸ್ತ್ರಗ್ರಂಥಗಳ ಪಾಠಪ್ರವಚನ ಮಾಡಿಸುತ್ತಿದ್ದರು. ಬೆಂಗಳೂರಿನಲ್ಲಿ ಲೌಕಿಕವೈದಿಕಜನರಿಗೆ ಶಾಸ್ತ್ರಗ್ರಂಥಪಾಠ ಹೇಳಿದವರಲ್ಲಿ ಇವರೇ ಪ್ರಥಮರು. ನೂರಾರು ಜನರು ಪ್ರತಿದಿನವೂ ಇವರ ಮನೆಯಲ್ಲಿ ಸೇರುತ್ತಿದ್ದರು. ಸದಾ ಸತ್ಕಾಲಕ್ಷೇಪದಲ್ಲಿರುತ್ತಿದ್ದರು. ಇವರು ಕೆಲವು ಸಂಸ್ಕೃತಗ್ರಂಥಗಳನ್ನು ಕನ್ನಡದಲ್ಲಿಯೂ, ಆಂಗ್ಲಭಾಷೆಯಲ್ಲಿಯೂ ತರ್ಜುಮೆ ಮಾಡಿದ ಮಹನೀಯರು. ಅನೇಕ ಪೀಠಾಧಿಪತಿಗಳಿಂದ ಪ್ರಶಸ್ತಿ ಗಳನ್ನು ಪಡೆದಿದ್ದರು. ಉಡುಪಿಯಲ್ಲಿ ಸೇರಿದ್ದ ಅಖಿಲಭಾರತ ಮಾಧ್ವಮಹಾ

ಮಂಡಲಿಗೆ ಅಧ್ಯಕ್ಷರಾಗಿದ್ದರು ಇವರ ಶಿಷ್ಯರಲ್ಲಿ ಕೆಲವರು ಈಗಲೂ ಪಾಠ ಪ್ರವಚನ ನಡಿಸುತ್ತಿದ್ದಾರೆ. ಸುಮಾರು 95 ವರ್ಷಗಳಕಾಲ ಜೀವಿಸಿದ್ದು, ಕಲವು ಕಾಲದ ಹಿಂದೆ ನಿಧನರಾದರು ಇವರು ಕಾಶ್ಯಪ ಗೋತ್ರದವರು ವಾಸಸ್ಥಳ ಬೆಂಗಳೂರು.

## ದುರ್ಗದ ಹುಲಿ ಹನುಮಂತಾಚಾರ್ಯರು

ವಾಸಸ್ಥಳ ಚಿತ್ರದುರ್ಗ ನ್ಯಾಯವೇದಾಂತ ಶಾಸ್ತ್ರಗಳಲ್ಲಿ ಘನ ವಿದ್ವಾಂಸರು ಹಿಂದಿನ ತಿರುಪತಿ ವಿದ್ವತ್ಸಭೆಯಲ್ಲಿ ಧರ್ಮಾಧಿಕಾರಿ ಗಳಾಗಿರುತ್ತಿದ್ದರು. ಅನೇಕ ಶಿಷ್ಯರಿಗೆ ಪಾಠಹೇಳಿ ವಿದ್ವಾಂಸರನ್ನಾಗಿ ಮಾಡಿದ್ದಾರೆ. ನಂಜನಗೂಡು ರಾಘವೇಂದ್ರಸ್ವಾಮಿಗಳ ಮಠದ ಅನೇಕರು ಇವರಲ್ಲಿ ವ್ಯಾಸಂಗಮಾಡಿರುತ್ತಾರೆ. ಇವರು ಈ ಶತಮಾನದ ಆದಿಭಾಗದಲ್ಲಿದ್ದವರು. ವಶಿಷ್ಠ ಗೋತ್ರದವರು ಮೈಸೂರು ಮಹಾರಾಜರ ಆಸ್ಥಾನ ಮಹಾ ವಿದ್ವಾಂಸರಾಗಿದ್ದರು.

## ದುರ್ಗದ ಹುಲಿ ಕೃಷ್ಣಾಚಾರ್ಯರು

ವಾಸಸ್ಥಳ ಚಿತ್ರದುರ್ಗ ಮತ್ತು ನಂಜನಗೂಡು. ವಿದ್ಯಾಭ್ಯಾಸ ತಮ್ಮ ಹಿರಿಯರಾದ ಹುಲಿಹನುಮಂತಾಚಾರ್ಯರಲ್ಲಿ ತಿರುಪತಿ ಮುಂತಾದ ಕಡೆ ವ್ಯಾಸಂಗಮಾಡಿ ನ್ಯಾಯಶಾಸ್ತ್ರದಲ್ಲಿ ಉಚ್ಚಶಿಕ್ಷಣವನ್ನು ಪಡೆದಿದ್ದರು. ಅನೇಕ ಜನ ಶಿಷ್ಯರಿಗೆ ಸಚ್ಛಾಸ್ತ್ರವ್ಯಾಸಂಗಮಾಡಿಸಿದ್ದರು. ಶ್ರೀಸುಶೀಲೇಂದ್ರರ ಕಾಲದಲ್ಲಿ ರಾಯರಮಠದ ದಿವಾನರಾಗಿದ್ದರು ಅನಂತರ ಅದೇಮಠದ ಪೀಠಾ ದಿಪತಿಗಳಾಗಿ ಶ್ರೀಸುಮತೀಂದ್ರತೀರ್ಥರೆಂದು ಪ್ರಸಿದ್ಧರಾಗಿದ್ದು ಮಂತ್ರಾಲಯ ದಲ್ಲಿ ನಿರ್ಯಾಣಹೊಂದಿ ಅಲ್ಲಿಯೇ ವೃಂದಾವನಸ್ಥರಾಗಿದ್ದಾರೆ. ಇವರು ವಶಿಷ್ಠ ಗೋತ್ರದವರು ಮೈಸೂರುಮಹಾರಾಜರ ಆಸ್ಥಾನಮಹಾ ವಿದ್ವಾಂಸ ರಾಗಿದ್ದರು

## ದುರ್ಗದ ಹುಲಿ ಭೀಮಾಚಾರ್ಯರು

ಇವರು ಹುಲಿಹನುಮಂತಾಚಾರ್ಯರ ಕಿರಿಯಪುತ್ರರು. ವಾಸಸ್ಥಳ

ಚಿತ್ರದುರ್ಗ ಮತ್ತು ನಂಜನಗೂಡು ವಿದ್ಯಾಭ್ಯಾಸ ತಪ್ಪಾ ಹಿರಿಯರಲ್ಲಿಯೇ. ನ್ಯಾಯವೇದಾಂತಶಾಸ್ತ್ರಗಳಲ್ಲಿ ಶ್ರೇಷ್ಠತರಗತಿಯ ವಿದ್ವಾಂಸರು. ಉತ್ತಮ ವಾಗ್ಮಿಗಳು ಸದಾಚಾರಸಂಪನ್ನರು. ಮೈಸೂರು ವಿದ್ವತ್ಪರೀಕ್ಷೆಗಳಲ್ಲಿ ಉತ್ತಮ ತರಗತಿಯಲ್ಲಿ ಉತ್ತೀರ್ಣರಾಗಿ ಬಹುಮಾನಗಳನ್ನು ಗಳಿಸಿದ್ದರು ಇವರು ನಂಜನ ಗೂಡಿನಲ್ಲಿಯೇ ಇರುತ್ತಿದ್ದು ಅನೇಕ ಶಿಷ್ಯಜನರಿಗೆ ಶಾಸ್ತ್ರಾಭ್ಯಾಸ ಮಾಡಿಸಿರು ತ್ತಾರೆ. ಸಾತ್ವಿಕ ಜೀವನವನ್ನು ನಡೆಸಿ ಒಂದು ದಶಕದಹಿಂದೆ ನಿಧನರಾದರು. ಇವರು ವಶಿಷ್ಠ ಗೋತ್ರದವರು. ಮೈಸೂರಿನ ಮಹಾರಾಜರ ಆಸ್ಥಾನಮಹಾ ವಿದ್ವಾಂಸರಾಗಿದ್ದರು.

## ಬೀಗಮುದ್ರೆ ಮರಿಯಾಚಾರ್ಯರು

ವಾಸಸ್ಥಳ– ಪರುಶುರಾಮಕ್ಷೇತ್ರವೆಂದು ಪ್ರಸಿದ್ಧವಾದ, ತುಂಗಾತೀರದ ಲ್ಲಿರುವ ತೀರ್ಥಹಳ್ಳಿ. ಇಲ್ಲಿನ ಮೂಲನಿವಾಸಿಗಳೆಲ್ಲರೂ ಶ್ರೀವ್ಯಾಸರಾಜಮಠದ ಶಿಷ್ಯರು. ನ್ಯಾಯವೇದಾಂತಶಾಸ್ತ್ರಗಳಲ್ಲಿ ಉದ್ದಾಮ ಪಂಡಿತರು ಹಿರಿಯ ರಲ್ಲಿಯೇ ವ್ಯಾಸಂಗ ಶ್ರೀಮಂತ ಕುಟುಂಬಕ್ಕೆ ಸೇರಿದವರು ಅನೇಕ ವಿಧ್ಯಾರ್ಥಿ ಗಳಿಗೆ ಅನ್ನವಸತಿಗಳನ್ನು ಕೊಟ್ಟು ಸಚ್ಛಾಸ್ತ್ರಾಭ್ಯಾಸ ಮಾಡಿಸಿದವರು. ಹಿಂದಿನ ತಿರುಪತಿ ಸಭೆಯಲ್ಲಿ ಧರ್ಮಾಧಿಕಾರಿಗಳಾಗಿದ್ದವರು. ಮಹಿಷಿಕ್ಷೇತ್ರ ದಲ್ಲಿನ ಹಲವು ಶಿಷ್ಯರಿಗೆ ಪಾಠಹೇಳಿರುತ್ತಾರೆ. ಸದಾಚಾರಸಂಪನ್ನರಾಗಿ ಸದಾ ಸತ್ಕಾಲಕ್ಷೇಮ ಮಾಡುತ್ತಿದ್ದವರು. ಅನೇಕ ಹಸ್ತಪ್ರತಿಗಳ ಲೇಖನವನ್ನೂ ಸಂಶೋಧನೆಯನ್ನೂ ಮಾಡಿರುತ್ತಾರೆ ಈ ಶತಮಾನದ ಮಧ್ಯದಲ್ಲಿ ಇದ್ದವರು. ಇವರು ಷಾಷ್ಟಿಕಕುಲದ ಬೀಗಮುದ್ರೆ ಮನೆತನದ ಗೌತಮ ಗೋತ್ರೋದ್ಭವರು ಮೈಸೂರುಮಹಾರಾಜರ ಆಸ್ಥಾನ ಮಹಾವಿದ್ವಾಂಸರಾಗಿದ್ದರು.

## ಜೇಬಿ ಶೇಷಾಚಾರ್ಯರು

ವಾಸಸ್ಥಳ ಕೊರಟಗೆರೆ ತಾಲ್ಲೂಕಿನ ಹೊಳವನಹಳ್ಳಿ. ಉದ್ದಾಮ ಪ್ರಾಚೀನ ಪಂಡಿತರು. ಹಿರಿಯರಲ್ಲಿಯೇ ನ್ಯಾಯವೇದಾಂತಶಾಸ್ತ್ರಗಳಲ್ಲಿ ಪ್ರವಚನ. ಶ್ರೀಮಂತ ಕುಟುಂಬದವರು. ಬಹುಮಂದಿ ವಿದ್ವಾಂಸರು ಇವರ ಶಿಷ್ಯರು ಶ್ರೀಮನ್ನ್ಯಾಯಸುಧಾ ಗ್ರಂಥಕ್ಕೆ ಸ್ವತಂತ್ರವಾದ ಟಿಪ್ಪಣಿಯನ್ನು ರಚಿಸಿರುತ್ತಾರೆ. ಇದಕ್ಕೆ ಹೊಳವನಹಳ್ಳಿ ಆಚಾರ್ಯರ ಟಿಪ್ಪಣಿಯೆಂದು ಪ್ರಸಿದ್ಧಿ. ಶ್ರೀರಾಘ

ವೇಂದ್ರಸ್ವಾಮಿಗಳಮಠದ ಶಿಷ್ಯರು. ಮಾಧ್ವಿಕಕುಲ. ಕಾಶ್ಯಪಗೋತ್ರೋದ್ಭವರು.

## ಪೌರಾಣಿಕರತ್ನ ಹೊಳವನಹಳ್ಳಿ ಶೇಷಾಚಾರ್ಯರು

ವಾಸಸ್ಥಳ ಹೊಳವನಹಳ್ಳಿ. ಹಿರಿಯರಲ್ಲಿಯೇ ವಿದ್ಯಾಭ್ಯಾಸಂಗ. ನ್ಯಾಯ ವೇದಾಂತಶಾಸ್ತ್ರಗಳಲ್ಲಿ ಪ್ರವೀಣರಾಗಿದ್ದರು. ಅನೇಕ ಶಿಷ್ಯರಿಗೆ ಪಾಠಹೇಳಿದ್ದರು. ಶಾಸ್ತ್ರಪಾರಂಗತರಲ್ಲದೆ ಭಾಗವತಾದಿ ಪುರಾಣಪ್ರವಚನದಲ್ಲಿಯೂ ಅದ್ವಿತೀಯರಾಗಿದ್ದರು ಉತ್ತಮವಾದ ಪಾಂಡಿತ್ಯ, ಮಧುರವಾದ ಕಂಠ, ಶ್ರಾವ್ಯವಾದ ಭಾಷಣ ಇವೇ ಶ್ರೋತೃಗಳನ್ನು ಆಕರ್ಷಿಸುತ್ತಿದ್ದವು. ಇವರು ಆಳಿದ ಮಹಾಸ್ವಾಮಿಗಳಾದ ನಾಲ್ಮಡಿಕೃಷ್ಣರಾಜಭೂಪಾಲರ ಆಸ್ಥಾನವಿದ್ವಾಂಸರಾಗಿ, ಅವರ ಮಾತೃಶ್ರೀ ಮಾಜೀ ರೀಜೆಂಟ್ ಮಹಾರಾಣಿಯವರಿಗೆ, ಅರಮನೆಯಲ್ಲಿ ಪುರಾಣಶ್ರವಣ ಮಾಡಿಸುತ್ತಿದ್ದರು ಮಹಾಸ್ವಾಮಿಗಳಿಂದ "ಪೌರಾಣಿಕರತ್ನ" ಎಂಬ ಬಿರುದನ್ನು ಹೊಂದಿದ್ದರು. ಇವರು ಶ್ರೇಷ್ಠ ಉಪನ್ಯಾಸಕರೂ ಆಗಿದ್ದರು. ಶ್ರೀಮದ್ಭಗವದ್ಗೀತೆಯನ್ನು ಕನ್ನಡಭಾಷೆಯಲ್ಲಿ ಅನುವಾದಮಾಡಿದ್ದಾರೆ. ಶ್ರೀರಾಘವೇಂದ್ರಸಾಮಿಗಳಮಠದ ಶಿಷ್ಯರಾದ ಇವರು ಕಾಶ್ಯಪಗೋತ್ರಕ್ಕೆ ಸೇರಿದವರು. ಮೈಸೂರು ಮಹಾರಾಜರ ಆಸ್ಥಾನದ ಮಹಾವಿದ್ವಾಂಸರಾಗಿದ್ದರು ಈ ಶತಮಾನದ ಮಧ್ಯದಲ್ಲಿದ್ದವರು.

## ಹೆಬ್ಬಣಿ ಹರಿಯಪ್ಪಾಚಾರ್ಯರು

ವಾಸಸ್ಥಳ–ಮುಳುಬಾಗಲು ಸಮೀಪದ ಹೆಬ್ಬಣಿಗ್ರಾಮ. ಇವರು ನ್ಯಾಯ ವೇದಾಂತಶಾಸ್ತ್ರಗಳಲ್ಲಿ ಅದ್ವಿತೀಯ ಪಂಡಿತರು. ಸದಾಚಾರಿಗಳು. ಶ್ರೀಮಂತ ಕುಟುಂಬದವರು. ಹಿರಿಯರಲ್ಲಿ ವಿದ್ಯಾಭ್ಯಾಸಂಗ. ದೈವದತ್ತವಾದ ಪ್ರತಿಭೆ. ಮುಳುಬಾಗಲು ಶ್ರೀಪಾದರಾಜರ ಮಠಾಧಿಪತಿಗಳಾಗಿ ಶ್ರೀಸುಧೀನಿಧಿತೀರ್ಥರೆಂದು ಮಹಾಪ್ರಸಿದ್ಧಿಯನ್ನು ಹೊಂದಿದ್ದರು. ಅಸಂಖ್ಯಾತ ಶಿಷ್ಯಜನರಿಗೆ ಸಚ್ಛಾಸ್ತ್ರಪ್ರವಚನಮಾಡಿಸಿದ್ದರು. ದಕ್ಷಿಣದೇಶದಲ್ಲಿ ಬಹುಜನ ಶಿಷ್ಯರು. ಈ ಮಹನೀಯರ ವೃಂದಾವನವು ಈರೋಡು ಸಮೀಪದ ಕಾವೇರೀತೀರದ ಪುದುಪಾಳ್ಯದಲ್ಲಿದೆ. ಮಾಧ್ವಿಕಕುಲದ ಆತ್ರೇಯಸಗೋತ್ರದವರು. ತಿರಚಾನೂರು

ಮಧ್ವಸಿದ್ಧಾಂತೋನ್ನಾಹಿನೀ ಸಭಾಮಂದಿರದಲ್ಲಿರುವ ಬಾದರಾಯಣದೇವರ ವಿಗ್ರಹವು ಇವರಿಂದ ಪ್ರತಿಷ್ಠಿತವಾಗಿ ಅಧ್ಯಾಪಿ ವಿರಾಜಮಾನವಾಗಿದೆ.

## ಹೆಬ್ಬಣಿ ದ್ವೈಪಾಯನಾಚಾರ್ಯರು

ಶ್ರೀಸುಧಿ ನಿಧಿತೀರ್ಥರ ಪೂರ್ವಾಶ್ರಮದ ಪುತ್ರರು. ವಾಸಸ್ಥಳ— ಮುಳಬಾಗಲು. ಹಿರಿಯರಲ್ಲಿಯೇ ವಿದ್ಯಾಭ್ಯಾಸ. ಆಂಗ್ಲ ಭಾಷೆಯಲ್ಲಿ ದ್ವಿಪದವೀಧರರು. ಮೈಸೂರು ಸರ್ಕಾರದ ಸೇವೆಯಲ್ಲಿದ್ದು ನಿವೃತ್ತರಾದವರು. ಮಹಾಮೌನಿಗಳು, ಘನವಿದ್ವಾಂಸರು, ಬೋಧನಾಚಾತುರ್ಯವುಳ್ಳವರು. ಅರ್ಥಗರ್ಭಿತಮಿತಭಾಷಿಗಳು, ಸದಾ ಹಸನ್ಮುಖಿಗಳು, ದಯಾಶೀಲರು, ಪಾರಪ್ರವಚನನಿರತರು ಮುಳಬಾಗಲು ಶ್ರೀಶ್ರೀಪಾದರಾಜರ ಮಠದ ಮೇಧಾನಿಧಿ ತೀರ್ಥರಿಂದ ಸಂನ್ಯಾಸಾಶ್ರಮವನ್ನು ಸ್ವೀಕರಿಸಿ ಶ್ರೀದಯಾನಿಧಿತೀರ್ಥರೆಂದು ಪ್ರಸಿದ್ಧರಾಗಿದ್ದರು. ಇವರು ಮಹಾವೈರಾಗ್ಯಶಾಲಿಗಳು. ಏಕಾಂತವಾಸಿಗಳು, ಇವರು ಪೀಠಾಧಿಪತಿಗಳಾಗಿದ್ದಾಗಲೇ ಇನ್ನೊಬ್ಬರಿಗೆ ಪೀಠಾಧಿಪತ್ಯವನ್ನು ವಹಿಸಿ ನಿರ್ಲಿಪ್ತರಾಗಿ ಸದಾ ಅಂತರ್ಮುಖಿಗಳಾಗಿದ್ದವರು. ಇವರ ವೃಂದಾವನವು ನರಸಿಂಹತೀರ್ಥದಲ್ಲಿದೆ. ಈ ಶತಮಾನದ ಮಧ್ಯಭಾಗದಲ್ಲಿದ್ದವರು. ಷಾಷ್ಟಿಕಕುಲದ ಆತ್ರೇಯಸಗೋತ್ರಕ್ಕೆ ಸೇರಿದವರು.

## ಹೆಬ್ಬಣಿ ಕೃಷ್ಣಮೂರ್ತಿಆಚಾರ್ಯರು

ವಾಸಸ್ಥಳ-ಮುಳಬಾಗಲು, ವ್ಯಾಸಂಗ ಹಿರಿಯರಲ್ಲಿ, ಮೇಧಾವಿಗಳು. ಲೌಕಿಕದಲ್ಲಿ ಚಾಣಾಕ್ಷರು, ಅನೇಕ ಲೌಕಿಕ ಸಮಿತಿಗಳಲ್ಲಿ ಭಾಗವಹಿಸಿದ್ದರು. ಜನೋಪಕಾರಕೆಲಸಗಳನ್ನು ಮಾಡಿ ಜನಾನುರಾಗಿಗಳಾಗಿದ್ದರು. ಮುಳಬಾಗಲು ಶ್ರೀಶ್ರೀಪಾದರಾಜಮಠಾಧಿಪತಿಗಳಾಗಿದ್ದ ಶ್ರೀದಯಾನಿಧಿಗಳಿಂದ ಆಶ್ರಮ ಪಡೆದು ಶ್ರೀಸತ್ಯನಿಧಿತೀರ್ಥರೆಂದು ಪ್ರಸಿದ್ಧರಾಗಿದ್ದವರು. ಸಂಸ್ಥಾನವನ್ನು ನಾನಾ ರೀತಿ ಯಲ್ಲಿ ಅಭಿವೃದ್ಧಿಪಡಿಸಿದ್ದವರು. ಬೆಂಗಳೂರಿನಲ್ಲಿ ರಾಘವೇಂದ್ರಕಾಲೋನಿ ಯಲ್ಲಿ ಮಠವನ್ನು ಸ್ಥಾಪಿಸಿ, ಕಲ್ಯಾಣಮಂಟಪವನ್ನೂ, ವಿದ್ಯಾರ್ಥಿನಿಲಯ ವನ್ನೂ ಸ್ಥಾಪಿಸಿದವರು. ಇವರು ಶತಾಯುಷಿಗಳಾಗಿ ಹೋದ ವರ್ಷ ತಾನೆ

ನಿರ್ಯಾಣಹೊಂದಿದ ಮಹನೀಯರು. ಬ್ರಾಹ್ಮಣರಿಗೆ ಅನ್ನದಾನಾದಿಗಳಲ್ಲಿ ಮಹಾ ಆಸಕ್ತಿ ಉಳ್ಳವರು, ಮಿತಭಾಷಿಗಳು. ಸದಾ ವ್ಯಾಸಂಗನಿರತರಾಗಿದ್ದವರು. ಇವರು ಪಾಷ್ಟಿಕಕುಲದ ಗೌತಮ ಗೋತ್ರಕ್ಕೆ ಸೇರಿದವರು. ಇವರ ವೃಂದಾವನವು ನರಸಿಂಹತೀರ್ಥದಲ್ಲಿದೆ.

## ಹೆಬ್ಬಣಿ ಶ್ರೀನಿವಾಸಾಚಾರ್ಯರು

ವಾಸಸ್ಥಳ–ಮುಳಬಾಗಲು, ವಿದ್ಯಾಭ್ಯಾಸ ಹಿರಿಯರಲ್ಲಿ, ವ್ಯಾಕರಣಶಾಸ್ತ್ರದಲ್ಲಿ ಪ್ರಗಲ್ಭ ಪಾಂಡಿತ್ಯ. ಆಯುರ್ವೇದ ನಿಷ್ಣಾತರೂ ಆಗಿದ್ದರು. ಲೌಕಿಕ ಮತ್ತು ವೈದಿಕ ವಿಷಯಗಳಲ್ಲಿ ಮಹತ್ತರ ಅನುಭವಿಗಳು. ಬಹುಜನ ಶಿಷ್ಯರನ್ನು ಉದ್ಧಾರ ಮಾಡಿದವರು. ಶ್ರೀಪಾದರಾಜರ ಆರಾಧನೆ ಮತ್ತು ಮಠದ ಮಹಾ ಸಮಾರಾಧನೆ ಕಾಲಗಳಲ್ಲಿ ಸಾವಿರಾರುಜನಕ್ಕೆ ಮೃಷ್ಟಾನ್ನಭೋಜನ ಮತ್ತು ಭೂರಿದಕ್ಷಿಣೆಗಳಿಂದ ಸಂತೃಪ್ತಿಪಡಿಸುತ್ತಿದ್ದವರು. ಮಠದ ಸ್ಥಿರಾಸ್ತಿಗಳನ್ನು ಅಭಿವೃದ್ಧಿಪಡಿಸಿದವರು. ಶ್ರೀಸುಧೀನಿಧಿತೀರ್ಥರಿಂದ ಸಂನ್ಯಾಸಾಶ್ರಮ ಪಡೆದು ಶ್ರೀಮೇಧಾನಿಧಿತೀರ್ಥರೆಂಬ ಯತಿನಾಮದಿಂದ ಶ್ರೀಶ್ರೀಪಾದರಾಜರಸಂಸ್ಥಾನದ ಅಧಿಪತಿಗಳಾಗಿ ಅನೇಕ ಜನ ಶಿಷ್ಯರನ್ನು ಉದ್ದಾಮ ಪಂಡಿತರನ್ನಾಗಿ ಮಾಡಿದ್ದವರು. ಇವರ ವೃಂದಾವನವು ಈರೋಡು ಸಮೀಪ ಪುದುಪಾಳ್ಯದಲ್ಲಿದೆ. ಇವರು ಪಾಷ್ಟಿಕಕುಲದ ಗೌತಮ ಗೋತ್ರಕ್ಕೆ ಸೇರಿದವರು,

## ಹೆಬ್ಬಣಿ ರಾಮಕೃಷ್ಣಾಚಾರ್ಯರು

ವಾಸಸ್ಥಳ–ಮುಳಬಾಗಲು, ಹರಿಯಪ್ಪಾಚಾರ್ಯರಲ್ಲಿ ವಿದ್ಯಾವ್ಯಾಸಂಗ. ನ್ಯಾಯ ವೇದಾಂತ ಶಾಸ್ತ್ರಗಳಲ್ಲಿ ಪ್ರಾಗಲ್ಭ್ಯ. ಮೈಸೂರು ಆಸ್ಥಾನದ ಮಹಾವಿದ್ವಾಂಸರು. ಅನೇಕರಿಗೆ ಪಾಠಪ್ರವಚನವನ್ನು ಮಾಡಿಸಿರುತ್ತಾರೆ. ಮೈಸೂರು ವಿದ್ವತ್ಪರೀಕ್ಷೆಗಳಿಗೆ ಪರೀಕ್ಷಕರಾಗಿದ್ದರು. ಇವರ ಸಂನ್ಯಾಸಾಶ್ರಮ ನಾಮ ಪ್ರೇಕ್ಷಾನಿಧಿಗಳೆಂದು. ವೃಂದಾವನ ಮುಳಬಾಗಲಿನಲ್ಲಿದೆ. ಈ ಶತಮಾನದ ಮಧ್ಯದಲ್ಲಿದ್ದವರು. ಪಾಷ್ಟಿಕಕುಲದ ಗೌತಮಗೋತ್ರಕ್ಕೆ ಸೇರಿದವರು.

## ಗೋವಿಂದಕೃಷ್ಣಾಚಾರ್ಯರು

ಷಾಷ್ಟಿಕರಲ್ಲಿ "ಚಂಡೂರಿನವರು" ಎಂಬ ಒಂದು ಮನೆತನದವರಿರುವರು ; ಹರಿತಸಗೋತ್ರ ಇವರದು ಷಾಷ್ಟಿಕರ ತವರೂರಾದ ದೊಡ್ಡ ಬಳ್ಳಾಪುರದಲ್ಲಿ ಈ ಕುಟುಂಬಕ್ಕೆ ಸೇರಿದವರು ವಾಸವಾಗಿರುವರು. ಈಗ್ಗೆ ಸುಮಾರು ಒಂದು ಶತಮಾನದ ಹಿಂದೆ ಈ ಮನೆತನದಲ್ಲಿ—ಗೋವಿಂದಕೃಷ್ಣಾಚಾರ್ಯರೆಂಬ ಮೇಧಾವಿಗಳು ಜನ್ಮ ತಾಳಿದ್ದರು, ಇವರ ಬಾಲ್ಯ ವಿದ್ಯಾಭ್ಯಾಸವು ಜನ್ಮಸ್ಥಳದಲ್ಲಿಯೇ ಜರುಗಿತು. ಬಳಿಕ ಇವರು ತುಮಕೂರಿನಲ್ಲಿ ತಮ್ಮ ಸ್ವಕೀಯರೂ, ಪಂಡಿತೋತ್ತಮರೂ, ಚಿಕ್ಕಬಳ್ಳಾಪುರದ ಆಚಾರ್ಯರ ಶಿಷ್ಯರೂ ಆದ–ಪಲ್ಲಕ್ಕಿ ವೆಂಕಟಾಚಾರ್ಯರಲ್ಲಿ ಉಚ್ಚ ಶಿಕ್ಷಣವನ್ನು ಪಡೆದರು. ಆಗಿನ ಕಾಲದಲ್ಲಿ ತಿರುಪತಿಯ "ಶ್ರೀಮನ್ಮಧ್ವಸಿದ್ಧಾಂತೋನ್ನಾಹಿನೀ" ಸಭೆಯು ಪಂಡಿತರ ಯೋಗ್ಯತೆಯನ್ನು ನಿರ್ಧರಿಸತಕ್ಕ ಒಂದು ಸಂಸ್ಥೆಯಾಗಿದ್ದಿತು. ಈ ಕೃಷ್ಣಾಚಾರ್ಯರು ತಮ್ಮ ಹತ್ತೊಂಭತ್ತನೆಯ ವಯಸ್ಸಿನಲ್ಲಿ—ಈ ಸಭೆಯ ಮೂಲಕ ಉಚ್ಚ ತರಗತಿಯ "ವೇದಾಂತಶಾಸ್ತ್ರ" ಪರೀಕ್ಷೆಗೆ ಕುಳಿತುಕೊಂಡರು. ಶ್ರೀಜಯತೀರ್ಥರಿಂದ ರಚಿತವಾದ "ನ್ಯಾಯಸುಧಾ" ಗ್ರಂಥವು ಮಾಧ್ವ ತಾತ್ತ್ವಿಕ ಪ್ರಪಂಚದಲ್ಲಿ ಪ್ರಖ್ಯಾತಿಯನ್ನು ಪಡೆದಿದೆ. ಇದು ಶ್ರೀಮಧ್ವಾಚಾರ್ಯರ ಅಣುವ್ಯಾಖ್ಯಾನಕ್ಕೆ "ಟೀಕಾ" ರೂಪವಾದ ಗ್ರಂಥ, ಇದು ವಾಙ್ಮಯ ದೃಷ್ಟಿಯಿಂದ ಮನೋಹರವೂ ಹೃದಯಂಗಮವೂ ಆಗಿದೆ. ಕೃಷ್ಣಾಚಾರ್ಯರು ಈ ಸುಧಾ ಗ್ರಂಥವನ್ನು ಪರಿಮಳ ಮತ್ತು ಯಾಮಪತ್ರವೆಂಬ ಎರಡು ಟಿಪ್ಪಣಿಗಳ ಸಮೇತ ಪುಸ್ತಕಾಪೇಕ್ಷೆಯಿಲ್ಲದೆ ವ್ಯಾಕ್ಯಾರ್ಥ ವಿಚಾರಪೂರ್ವಕವಾಗಿ ಅನುವಾದ ಮಾಡಿದರು ಇವರ ಅಸ್ಖಲಿತವಾದ ವಾಣಿ ಸ್ಪಷ್ಟವೂ ಗಂಭೀರವೂ ಆದ ಪದಗಳ ಜೋಡಣೆ—ಇವುಗಳಿಂದ ಸಭಿಕರು ಆಶ್ಚರ್ಯಚಕಿತರಾದರು ಇವರ ಪಾಂಡಿತ್ಯವು ಅಶೇಷ ವೈದಿಕ ಲೌಕಿಕ ಮಹಾಶಯರ ಪ್ರಶಂಸೆಗೆ ಆಕರವಾಯಿತು ಸಭಾಚಾಲಕರು ಇವರ ಪಾಂಡಿತ್ಯಕ್ಕೆ ಅನುಗುಣವಾದ ಮರ್ಯಾದೆಯನ್ನು ಮಾಡಲು ನಿರ್ಧರಿಸಿದರು ; ಆಗ ಭಂಗಾರದ ಸಿಂಹಲಲಾಟಕಡಗವೂ, ಕಾಶ್ಮೀರದೇಶದ ಶಹಲು ಜೋಡಿಯೂ ಇವರಿಗೆ ಪಾರಿತೋಷಕಗಳಾಗಿ ಬಂದವು. ಈ ವಿಚಾರವನ್ನು ಸಭಾವ್ಯವಸ್ಥಾ

ಪಕರು ಆ ವರ್ಷದ ಸಭಾ ವರದಿಯಲ್ಲಿ ಪ್ರಕಟಿಸಿರುವರು. ಇವರು ಗ್ರಂಥ ಕರ್ತರೂ ಆಹುದು. ಪ್ರಮಾಣ ಪದ್ಧತಿಗೆ ಇವರು "ಸಾಧನದೀಪಿಕಾ" ಎಂಬ ಟಿಪ್ಪಣಿಯನ್ನೂ ವ್ಯಾಸ ಗದ್ಯ-ವ್ಯಾಖ್ಯಾನವನ್ನೂ ರಚಿಸಿರುವರು

ಆಗ ಶ್ರೀಉತ್ತರಾದಿಮಠದ ಸ್ಥಾನಪತಿಗಳಾಗಿದ್ದ ಶ್ರೀಸತ್ಯಧೀರತೀರ್ಥ ಸ್ವಾಮಿಗಳಿಗೆ ಕೃಷ್ಣಾಚಾರ್ಯರ ಪಾಂಡಿತ್ಯವು ಗೊತ್ತಾಯಿತು. ಈ ಯತಿ ವರ್ಯರ ಪೂರ್ವಾಶ್ರಮಪುತ್ರರಾದ ಶ್ರೀಪೂಜ್ಯ ಸೇತೂರಾಮಾಚಾರ್ಯರ ವೇದಾಂತಶಾಸ್ತ್ರಾಧ್ಯಯನಕ್ಕೆ ಸಹಾಯಕರಾಗಿರಲು ಈ ಕೃಷ್ಣಾಚಾರ್ಯರನ್ನೇ ಶ್ರೀಗಳು ಮಠಕ್ಕೆ ಕರೆಕಳುಹಿಸಿಕೊಂಡರು. ಈ ಪೂಜ್ಯ ಸೇತೂರಾಮಾ ಚಾರ್ಯರೇ ಇತ್ತೀಚೆಗೆ ಉತ್ತರಾಧಿಮಠಾಧಿಪತಿಗಳಾಗಿದ್ದ ಸುಪ್ರಸಿದ್ಧ ಶ್ರೀಸತ್ಯ ಧ್ಯಾನತೀರ್ಥಸ್ವಾಮಿಗಳು. ಆದರೆ ಕೃಷ್ಣಾಚಾರ್ಯರು ಹೆಚ್ಚು ಕಾಲ ಬದುಕಲಿಲ್ಲ. ಇವರು ತಮ್ಮ ಮುವ್ವತ್ತೊಂದನೆಯ ವಯಸ್ಸಿನಲ್ಲಿ ಇಹಜೀವನದಿಂದ ಪಾರಾ ದರು. ಇವರ ಮರಣದಿಂದ ದ್ವೈತ ವೇದಾಂತಕ್ಕೆ ಅಗಾಧ ನಷ್ಟವುಂಟಾಯಿ ತೆಂದರೆ ಅತಿಶಯೋಕ್ತಿ ಎನ್ನಲಾಗದು.

## ದೊಡ್ಡಬಳ್ಳಾಪುರದ ವಾಸುದೇವಾಚಾರ್ಯರು

ಈ ಮೇಲೆ ಕಂಡ ಕೃಷ್ಣಾಚಾರ್ಯರಿಗೆ ವಾಸುದೇವಾಚಾರ್ಯರೆಂಬ ಮಕ್ಕಳಿದ್ದರು. ಇವರು ತರ್ಕ ಮತ್ತು ವೇದಾಂತ ಈ ಉಭಯ ವಿದ್ವತ್ ಪರೀಕ್ಷೆಗಳಲ್ಲಿಯೂ ಉತ್ತಮವಾಗಿ ಉತ್ತೀರ್ಣರಾಗಿ ಅನೇಕ ಬಹುಮಾನಗಳನ್ನು ಪಡೆದಿದ್ದರು. ಮೈಸೂರು ವಿಶ್ವವಿದ್ಯಾನಿಲಯದವರಿಂದ ನಿಯಮಿತರಾಗಿ ಓರಿಯಂಟಲ್ ಲೈಬ್ರರಿಯಲ್ಲಿ ವೇದ, ಪುರಾಣ, ತರ್ಕ ಇವೇ ಮೊದಲಾದ ಭಾಗಗಳಲ್ಲಿ ಸಂಶೋಧನೆಯನ್ನು ನಡೆಯಿಸಿ ಕೀರ್ತಿಯನ್ನು ಗಳಿಸಿದ್ದರು. ಬಳಿಕ ಇವರು ಮೈಸೂರು ಮಹಾರಾಜ ಸಂಸ್ಕೃತ ಕಾಲೇಜಿನ ತರ್ಕಶಾಸ್ತ್ರೋಪಾ ಧ್ಯಾಯರಾಗಿದ್ದರು. ಒಂದು ದಶಮಾನ ಕಾಲ ನ್ಯಾಯ ಶಾಸ್ತ್ರಬೋಧಕರಾಗಿದ್ದು ಕೊಂಡು ವಿದ್ಯಾರ್ಥಿಗಳ ಮತ್ತು ಅಧಿಕಾರ ವರ್ಗದವರ ಪ್ರೀತಿವಿಶ್ವಾಸಗಳನ್ನು ಸಂಪಾದಿಸಿದ್ದರು. ಅನಂತರ ಅದೇ ಕಾಲೇಜಿನಲ್ಲಿ ಖಾಲಿಬಿದ್ದ ದ್ವೈತ

ವೇದಾಂತ ಪ್ರಧಾನೋಪಾಧ್ಯಾಯ ಸ್ಥಾನಕ್ಕೆ ಇವರೇ ಅರ್ಹರೆಂದು ಅಧಿಕಾರಿಗಳು ನಿರ್ಣಯಿಸಿ ಆ ಗೌರವಸ್ಥಾನವನ್ನು ಇವರಿಗೇ ದೊರಕಿಸಿಕೊಟ್ಟಿದ್ದರು. ತಮ್ಮ ಈ ಹೆಚ್ಚಿನ ಜವಾಬ್ದಾರಿಯ ಕೆಲಸವನ್ನು ಅತ್ಯಂತ ಸಮರ್ಪಕವಾಗಿ ನೆರವೇರಿಸುತ್ತ ಅನೇಕ ಮಂದಿ ವಿದ್ಯಾರ್ಥಿಗಳು ವಿದ್ವತ್‌ಪರೀಕ್ಷೆಯಲ್ಲಿ ಉತ್ತೀರ್ಣರಾಗಲು ಕಾರಣರಾಗಿದ್ದರು.

ನಮ್ಮ ಮೈಸೂರುಆಸ್ಥಾನದ ಮಹಾವಿದ್ವಾಂಸರಲ್ಲಿ ಇವರೂ ಒಬ್ಬರು. ಶ್ರೀರಾಘವೇಂದ್ರಗುರುಸಾರ್ವಭೌಮರ ಪೀಠಾಧೀಶರೂ— ವೇದಾಂತವಿದ್ಯಾಪ್ರಚಾರದೀಕ್ಷಾಬದ್ಧರೂ—ಆಗಿದ್ದ ಶ್ರೀಸುಯಮೀಂದ್ರತೀರ್ಥ ಶ್ರೀಪಾದಂಗಳು ವಾಸುದೇವಾಚಾರ್ಯರಿಗೆ "ವಿದ್ವನ್ಮಣಿ" ಎಂಬ ಘನವಾದ ಬಿರುದನ್ನು ದಯಪಾಲಿಸಿ ಸನ್ಮಾನಿಸಿದ್ದರು.

ಇವರಿಂದ ರಚಿತವಾದ ಗ್ರಂಥಗಳು :—

೧. ದ್ವೈತ ಪ್ರದೀಪ —ಇದು ಒಬ್ಬಾನೊಬ್ಬ ಅರ್ವಾಚೀನರಿಂದ ಪ್ರಕಟವಾಗಿರುವ ದ್ವೈತ ವೇದಾಂತ ತತ್ತ್ವದ ಅಪಪ್ರಚಾರವನ್ನು ಹೊರಗೆಡಹಿ ಸಮೀಚೀನ ತತ್ತ್ವದ ನಿಜ ಸ್ವರೂಪವನ್ನು ಬೆಳಕಿಗೆ ತಂದಿರುವ ಉಚ್ಚ ತರಗತಿಯ ವೇದಾಂತ ಗ್ರಂಥ.

೨. ತತ್ತ್ವಶಿಕ್ಷೆ :—ಭಾರತೀಯ ತತ್ತ್ವಶಾಸ್ತ್ರ ವಿಚಾರವಾಗಿ-ಆಧುನಿಕ ಗ್ರಂಥಕರ್ತರು ಪಟ್ಟಿರತಕ್ಕ ಅಬದ್ಧಅಭಿಪ್ರಾಯಗಳನ್ನು ಸಕಾರಣವಾಗಿ ಖಂಡಿಸಿ—ನಿಜಾರ್ಥವನ್ನು ಬೋಧಿಸುವ ಶ್ರೇಷ್ಠ ವರ್ಗದ ಗ್ರಂಥವಿದು.

೩. ಇವುಗಳು ಹೊರತು ಇವರು ಸಂಸ್ಕೃತ ಭಾಷೆಯಲ್ಲಿ "ಬ್ರಹ್ಮಮೀಮಾಂಸಾ" ಶಾಸ್ತ್ರವೆನ್ನುವ ಬೇರೊಂದು ಗ್ರಂಥವನ್ನು ರಚಿಸಿರುವರು.

ಇವರು ವರ್ತಮಾನಕಾಲದ ಪ್ರಮುಖ ದ್ವೈತ ವೇದಾಂತ ವಿದ್ಯಾವಿಶಾರದರಲ್ಲಿ ಒಬ್ಬರಾಗಿ ಷಾಷ್ಟಿಕರ ಅನುವಂಶೀಕ ವೈಶಿಷ್ಟ್ಯವನ್ನುಳಿಸಿಕೊಂಡು ಬಂದಿದ್ದವರು ಇವರು ಚಂಡೂರು ಮನೆತನದ ಹರಿತಸಗೋತ್ರೋದ್ಭವರು.

## ಆಚಾರ್ಯ ವೆಂಕೋಬಾಚಾರ್ಯರು

ವಾಸಸ್ಥಳ–ಮಂತ್ರಾಲಯ ವಿದ್ಯಾಭ್ಯಾಸ ಬಾಗಲಕೋಟೆ (ಕವಾಟ ದುರ್ಗ) ಮಳಿಗೆ ವೇದವ್ಯಾಸಾಚಾರ್ಯರು, ಧಾರಾಪುರಂ ಕೃಷ್ಣಮೂರ್ತಿ ಆಚಾರ್ಯರು ಯಲತ್ತೂರುಕೃಷ್ಣಾಚಾರ್ಯರು ಮುಂತಾದವರಲ್ಲಿ. ನ್ಯಾಯ, ವೇದಾಂತ, ವ್ಯಾಕರಣ, ಮೀಮಾಂಸಾಶಾಸ್ತ್ರಗಳಲ್ಲಿ ಅದ್ವಿತೀಯಪಾಂಡಿತ್ಯ. ಮೈಸೂರು ಸಂಸ್ಥಾನದ ಆಸ್ಥಾನ ಮಹಾವಿದ್ವಾಂಸರು ಮಂತ್ರಾಲಯದ ಶ್ರೀಗುರುಸಾರ್ವಭೌಮಪಾಠಶಾಲೆಯ ಅಧ್ಯಕ್ಷರಾಗಿದ್ದರು. ನ್ಯಾಯ ವಿದ್ವಾನ್, ನ್ಯಾಯಶಿರೋಮಣಿ, ವಿದ್ಯಾರತ್ನ, ವಿದ್ಯಾಭೂಷಣ, ವಿದ್ಯಾಲಂಕಾರ ಮುಂತಾದ ಪ್ರಶಸ್ತಿಗಳನ್ನು ಗಳಿಸಿದ್ದರು ಉತ್ತಮ ವಾಗ್ಮಿಗಳು, ವಾಕ್ಯಾರ್ಥಚತುರರು. ಅನೇಕ ಜನಶಿಷ್ಯರಿಗೆ ನಾನಾ ಶಾಸ್ತ್ರಗಳಲ್ಲಿ ಪಾಠ ಹೇಳಿ ವಿದ್ವಾಂಸರನ್ನಾಗಿ ಮಾಡಿದ್ದ ಮಹನೀಯರು ಇವರು "ಶ್ರೀಮನ್ನ್ಯಾಯಸುಧಾ ಪರಿಮಳಪ್ರಸರ"ವೆಂಬ ಗ್ರಂಥವನ್ನು ರಚಿಸಿರುತ್ತಾರೆ. ಶ್ರೀರಾಘವೇಂದ್ರ ಸ್ವಾಮಿಗಳ ಮಠದ ಆಸ್ಥಾನ ವಿದ್ವಾಂಸರಾಗಿದ್ದರು. ಇವರ ಮಕ್ಕಳು ವ್ಯಾಸರಾಜಾಚಾರ್ಯರು ಬೆಂಗಳೂರು ಚಾಮರಾಜೇಂದ್ರ ಸಂಸ್ಕೃತ ಪಾಠಶಾಲೆಯಲ್ಲಿ ಅಧ್ಯಾಪಕರಾಗಿದ್ದಾರೆ.

## ದೊಡ್ಡಬೆಲೆ ವೆಂಕಟೇಶಾಚಾರ್ಯರು

ವಾಸಸ್ಥಳ–ಬೆಂಗಳೂರು ವಿದ್ಯಾಭ್ಯಾಸ–ಶ್ರೀಯುತ ಗೌಡಗೆರೆ ವೆಂಕಟರಮಣಾಚಾರ್ಯರಲ್ಲಿ. ನ್ಯಾಯವೇದಾಂತ ಸಾಹಿತ್ಯ ಶಾಸ್ತ್ರಗಳಲ್ಲಿ ಉದ್ದಾಮ ಪಂಡಿತರು. ತಿರುಪತಿ ಮಧ್ವಸಿದ್ಧಾಂತೋನ್ನಾಹಿನೀ ಸಭೆಯಲ್ಲಿ ಧರ್ಮಾಧಿಕಾರಿಗಳಾಗಿದ್ದರು ಬರೋಡಸಂಸ್ಥಾನದಲ್ಲಿ ವ್ಯಾಸತ್ರಯದಲ್ಲಿ ಉಪನ್ಯಾಸ ಮಾಡಿ ಬಹುಮಾನ ಗಳಿಸಿದ್ದರು. ಬೆಂಗಳೂರಿನಲ್ಲಿ ಹೈಸ್ಕೂಲಿನಲ್ಲಿ ಸಂಸ್ಕೃತಾಧ್ಯಾಪಕರಾಗಿದ್ದು ನಿವೃತ್ತಿನಂತರ ಸಚ್ಛಾಸ್ತ್ರಪ್ರವಚನದಲ್ಲಿ ಉದ್ಯುಕ್ತರಾಗಿದ್ದರು. ಇವರು ಷಾಷ್ಟಿಕಕುಲದ ಚಂಡೂರು ಮನೆತನದ ಹರಿತಸ ಗೋತ್ರದವರು. ಈ ಶತಮಾನದ ಮಧ್ಯಭಾಗದಲ್ಲಿದ್ದವರು

## ಎನ್. ವಿ ಪದ್ಮನಾಭಾಚಾರ್ಯರು

ವಾಸಸ್ಥಳ–ಮೈಸೂರು ನ್ಯಾಯಶಾಸ್ತ್ರದಲ್ಲಿ ಪ್ರಕಾಂಡ ಪಂಡಿತರಿದ್ದ ನಾಮಗೊಂಡಲು ವಂಶೋತ್ಪನ್ನರು ಇವರ ಪಿತೃವರ್ಯರು, ಮೈಸೂರು ಮಹಾರಾಜರ ಸಂಸ್ಕೃತಮಹಾವಿದ್ಯಾಲಯದಲ್ಲಿ ಅಧ್ಯಾಪಕರಾಗಿದ್ದ ಪಂಡಿತ ನಾಮ ಗೊಂಡಲು ವಾಸುದೇವಾಚಾರ್ಯರು. ಸೋದರ ಮಾವಂದಿರು ಪೌರಾಣಿಕರತ್ನ ಹೊಳವನಹಳ್ಳಿ ಶೇಷಾಚಾರ್ಯರು. ಬಾಲ್ಯ ಮತ್ತು ಪ್ರೌಢವಿದ್ಯಾಭ್ಯಾಸ ಮೈಸೂರು ಸಂಸ್ಕೃತ ಪಾಠಶಾಲೆಯಲ್ಲಿ. ನ್ಯಾಯವೇದಾಂತ ಸಾಹಿತ್ಯ ಶಾಸ್ತ್ರಗಳಲ್ಲಿ ವಿದ್ವತ್ಪರೀಕ್ಷೆಯಲ್ಲಿ ಉತ್ತಮ ದರ್ಜೆಯಲ್ಲಿ ತೇರ್ಗಡೆಯಾಗಿದ್ದರು. ಮೈಸೂರು ಸರ್ಕಾರದ ಸೇವೆಯಲ್ಲಿದ್ದು ನಿವೃತ್ತರಾದನಂತರ ಸಚ್ಛಾಸ್ತ್ರಾಭ್ಯಾಸಕಾರ್ಯದಲ್ಲಿ ನಿರತರಾಗಿದ್ದರು. ಇವರು ಅನೇಕ ಪ್ರಶಸ್ತಿಗಳನ್ನು ಗಳಿಸಿದ್ದರು. ಉತ್ತಮ ವಾಗ್ಮಿಗಳು ಮತ್ತು ಉಪನ್ಯಾಸಕರು. ಒಂದು ದಶಕದ ಹಿಂದೆ ನಿಧನರಾದರು.

## ಗುತ್ತಿ ರಾಘವೇಂದ್ರಾಚಾರ್ಯರು

ವಾಸಸ್ಥಳ–ಬೆಂಗಳೂರು. ವಿದ್ಯಾಭ್ಯಾಸ ಗೌಡಗೆರೆ ವೆಂಕಟರಮಣಾ ಚಾರ್ಯರಲ್ಲಿ. ವಿದ್ವತ್ಪರೀಕ್ಷೆಯಲ್ಲಿ ತೇರ್ಗಡೆಯಾಗಿದ್ದವರು. ಇವರು ಮದನ ಪಲ್ಲಿ ಕಾಲೇಜಿನಲ್ಲಿಯೂ, ಅನಂತರ ಬೆಂಗಳೂರು ನ್ಯಾಷನಲ್ ಕಾಲೇಜಿನಲ್ಲಿಯೂ ಅಧ್ಯಾಪಕರಾಗಿ ನಿವೃತ್ತರಾಗಿದ್ದರು. ಹಿಂದಿನ ತಿರುಪತಿ ಮಧ್ವ ಸಿದ್ಧಾಂತೋ ನ್ನಾಹಿನೀಸಭೆಯಲ್ಲಿ ಭಾಗವಹಿಸುತ್ತಿದ್ದರು. ವೇದಾಂತಶಾಸ್ತ್ರಪಾರಂಗತ ರಲ್ಲದೆ ಪೌರೋಹಿತ್ಯದಲ್ಲಿಯೂ ಪರಿಣತರಾಗಿದ್ದರು. ಶ್ರೇಷ್ಠ ದರ್ಜೆಯ ಪೌರಾಣಿಕರೂ ಆಗಿದ್ದರು. ಬೆಂಗಳೂರು ಚಿಕ್ಕಪೇಟೆಯಲ್ಲಿರುವ ಶ್ರೀವ್ಯಾಸ ರಾಜಮಠದಲ್ಲಿ ಪುರಾಣ ಪ್ರವಚನ ನಡೆಸುತ್ತಿದ್ದರು. ಇವರಿಗೆ ಪರಿಗಿ ರಾಘ ವೇಂದ್ರಾಚಾರ್ಯರೆಂತಲೂ ಪ್ರಸಿದ್ಧಿ ಇತ್ತು. ಅಗಸ್ತ್ಯಗೋತ್ರದವರು.

## ದೊಡ್ಡಬಳ್ಳಾಪುರದ ರಾಘವೇಂದ್ರದಾಸರು

ವಾಸಸ್ಥಳ–ದೊಡ್ಡಬಳ್ಳಾಪುರ. ವಿದ್ಯಾಭ್ಯಾಸ ಹಿರಿಯರಲ್ಲಿ. ಜ್ಞಾನಿಗಳ ಸಂಘದಲ್ಲಿ ವಾಸ. ಮಧ್ವಸಿದ್ಧಾಂತದ ಪ್ರಮೇಯಗಳನ್ನು ಚೆನ್ನಾಗಿ ತಿಳಿ ದಿದ್ದು ಅನೇಕ ಕೀರ್ತನೆಗಳನ್ನು ರಚಿಸಿರುತ್ತಾರೆ. ಇವರು ನಾಲ್ಕು ಸಲ ಪಾದ ಯಾತ್ರೆಯಿಂದಲೇ ಕಾಶೀಯಾತ್ರೆ ಮಾಡಿದ್ದವರು. ವರ್ಷದಲ್ಲಿ ಸ್ವಲ್ಪಕಾಲ

ಮಾತ್ರ ದೊಡ್ಡಬಳ್ಳಾಪುರದಲ್ಲಿದ್ದು ಮಿಕ್ಕ ಕಾಲವನ್ನೆಲ್ಲ ಸಂಚಾರದಲ್ಲಿಯೇ ಕಳೆಯುತ್ತಿದ್ದರು ಇವರು ಗೃಹಸ್ಥಾಶ್ರಮಿಗಳಾಗಿದ್ದರೂ ನೈಷ್ಠಿಕಬ್ರಹ್ಮಚರ್ಯ ವ್ರತದಲ್ಲಿದ್ದರು. ಸಂತಾನವಿಲ್ಲ. ಚಿಪ್ಪಗಿರಿಯಲ್ಲಿದ್ದ ಶ್ರೀವರವಿಠಲಾಂಕಿತದಾಸರಿಂದ ಅಂಕಿತವನ್ನು ಪಡೆದು ಮುದ್ದುಮೋಹನವಿಠಲದಾಸರೆಂದು ಪ್ರಸಿದ್ಧಿ ಪಡೆದಿದ್ದರು. ದೊಡ್ಡಬಳ್ಳಾಪುರದಲ್ಲಿ ತಾವು ವಾಸಿಸುತ್ತಿದ್ದ ಮನೆಯ ಬೈಲಿನಲ್ಲಿ ವಿಠಲದೇವರ ದೇವಸ್ಥಾನವನ್ನು ಕಟ್ಟಿಸಿರುತ್ತಾರೆ. ಕಾಲಕಾಲದಲ್ಲಿ ದೇವರ ಮತ್ತು ದಾಸರಾಯರುಗಳ ಆರಾಧನೆಗಳನ್ನು ಮಾಡುತ್ತಿದ್ದರು. ಇವರ ಶಿಷ್ಯಕೋಟಿ ಬಹುಸಂಖ್ಯಾಕ. ಮೊದಲನೆಯ ಪ್ಲೇಗ್‌ಕಾಲದಲ್ಲಿ ಕ್ರಿ. ಶ. ೧೮೯೮ರಲ್ಲಿ ಇವರು ನಿರ್ಯಾಣ ಹೊಂದಿದರು. ಇವರು ಪಾಷ್ಟಿಕಕುಲದ ಹುಲುಬಂಡಿ ಮನೆತನದ ವಸಿಷ್ಠಗೋತ್ರಕ್ಕೆ ಸೇರಿದವರು. "ಸಾರಸ್ವತಪರಿಣಯ" ಗ್ರಂಥಕರ್ತೃವಾದ ರಾಘವೇಂದ್ರಪ್ಪನ ವಂಶಪರಂಪರೆಯಲ್ಲಿ ಬಂದವರು ಸುಪ್ರಸಿದ್ಧ ಹರಿದಾಸರಾಗಿದ್ದ ತಂದೆಮುದ್ದುಮೋಹನವಿಠಲದಾಸರು (ನರಸಿಪುರದ ಸುಬ್ಬರಾಯದಾಸರು) ಇವರ ಪ್ರಮುಖ ಶಿಷ್ಯರು.

## ವರುವಣಿ ವಿಠಲಮೂರ್ತಿಆಚಾರ್ಯರು

ವಾಸಸ್ಥಳ–ಕೋಲಾರ ಜಿಲ್ಲಾ ಗೌರೀಬಿದನೂರು ಸಮೀಪದ ಉತ್ತರ ಪಿನಾಕಿನೀತೀರದ ವರುವಣಿ ಗ್ರಾಮ. ವಿದ್ಯಾಭ್ಯಾಸ ಗೌಡಗೆರೆ ಬೆಟ್ಟದಆಚಾರ್ಯರಲ್ಲಿ. ಉತ್ತಮ ಪಾಂಡಿತ್ಯವುಳ್ಳವರು ಮತ್ತು ಕವಿತಾಶಕ್ತಿವುಳ್ಳವರು. ಇವರು ಭಾಷ್ಯದೀಪಿಕಾಚಾರ್ಯರ ವಂಶಕ್ಕೆ ಸೇರಿದವರು. ಅನೇಕ ಜನ ಶಿಷ್ಯರಿಗೆ ಸಚ್ಛಾಸ್ತ್ರಾಭ್ಯಾಸ ಮಾಡಿಸಿದವರು. ಶ್ರೇಷ್ಠ ಉಪನ್ಯಾಸಕರು. ತಂಗೆಹಳ್ಳಿ ಮನೆತನದ ಕೌಂಡಿನ್ಯಸಗೋತ್ರೋತ್ಪನ್ನರು. ವರುವಣಿ ಭಾಷ್ಯದೀಪಿಕಾಚಾರ್ಯರ ಜನ್ಮಸ್ಥಳ. ನಿವೃತ್ತ ವಿದ್ಯಾಭ್ಯಾಸ ಇಲಾಖೆ ಅಧಿಕಾರಿಗಳು

## ಪಲ್ಲಕ್ಕಿ ವೆಂಕಟಾಚಾರ್ಯರು

ವಾಸಸ್ಥಳ–ತುಮಕೂರು ಈ ವಂಶದವರು ಮಹಾವಿದ್ವಾಂಸರು. ಇವರು ಸಂಚಾರ ಮಾಡುವಾಗ ಪಲ್ಲಕ್ಕಿಯನ್ನು ಉಪಯೋಗಿಸುತ್ತಿದ್ದರು. ಈ ಮರ್ಯಾದೆಯು ಆಗಿನ ರಾಜಾಸ್ಥಾನದಿಂದ ಕೊಡಲ್ಪಟ್ಟಿತ್ತು. ಬಹು

ಜನ ಶಿಷ್ಯರನ್ನು ಪಂಡಿತರನ್ನಾಗಿ ಮಾಡಿದ್ದವರು ಇವರು ತಮ್ಮ ಮನೆಯಲ್ಲಿಯೇ ಅಶನವಸತಿಗಳಿಗೆ ಏರ್ಪಾಟು ಮಾಡಿ ಶಿಷ್ಯರಿಗೆ ಪ್ರವಚನ ಮಾಡಿಸುತ್ತಿದ್ದರು ತುಮಕೂರಿನಲ್ಲಿ ಆಚಾರ್ಯರ ಬೀದಿ ಎಂದು ಪ್ರತ್ಯೇಕವಾದ ರಾಜಬೀದಿ ಇದೆ. ಗೌತಮ ಗೋತ್ರದವರು ಚಿಕ್ಕಬಳ್ಳಾಪುರದ ಆಚಾರ್ಯರ ಶಿಷ್ಯರು

## ಚಿಕ್ಕಬಳ್ಳಾಪುರದ ಆಚಾರ್ಯರು

ವಾಸಸ್ಥಳ–ಚಿಕ್ಕಬಳ್ಳಾಪುರ. ಇವರಿಗೆ ಚಿಕ್ಕಬಳ್ಳಾಪುರದ ಶಾಮಾಚಾರ್ಯರೆಂಬ ಹೆಸರಿದ್ದರೂ ಚಿಕ್ಕಬಳ್ಳಾಪುರದಾಚಾರ್ಯರೆಂದೇ ವ್ಯವಹಾರ. ಚತುಃಶಾಸ್ತ್ರಪಂಡಿತರು. ಮತತ್ರಯದವರೂ ಶಿಷ್ಯರಾಗಿದ್ದರು. ತುಮಕೂರು ಪಲ್ಲಕ್ಕಿ ವೆಂಕಟಾಚಾರ್ಯರ ವಿದ್ಯಾಗುರುಗಳು ಬಹುಜನ ವಿದ್ಯಾರ್ಥಿಗಳಿಗೆ ಅಶನ ವಸತಿಗಳನ್ನು ಕೊಟ್ಟು ವಿದ್ಯಾದಾನ ಮಾಡಿ ಜೀವನೋಪಾಯವನ್ನು ಕಲ್ಪಿಸಿ ಕೊಟ್ಟಿದ್ದ ಮಹಾನ್ ವ್ಯಕ್ತಿ. ಇವರು ಗೌಡಗೆರಿ ವೆಂಕಟರಮಣಾಚಾರ್ಯರ ಕನಿಷ್ಟ ಪಿತಾಮಹರು ಬೆಟ್ಟದಮನೆತನದ ವಿಶ್ವಾಮಿತ್ರ ಗೋತ್ರಕ್ಕೆ ಸೇರಿದವರು. "ಅನ್ವಿತಾಭಿದಾನವಾದ"ವೆಂಬ ಉದ್ಗ್ರಂಥವನ್ನು ರಚಿಸಿರುತ್ತಾರೆ. ಹೊಳವನಹಳ್ಳಿ ಜೀಬಿ ರಾಘವೇಂದ್ರಾಚಾರ್ಯರ ತಾಯಿ ತುಂಗಮ್ಮ, ವೆಂಕಣ್ಣಾಚಾರ್ಯ ದಂಪತಿಗಳು, ಇವರ ಬಂಧುಗಳು.

## ರಾಜಾ ವೇಣುಗೋಪಾಲಾಚಾರ್ಯರು

ವಾಸಸ್ಥಳ–ನಂಜನಗೂಡು. ಬಾಲ್ಯ ವಿದ್ಯಾಭ್ಯಾಸ ಹಿರಿಯೂರಲ್ಲಿ. ಪ್ರಸಿದ್ಧ ಪಂಡಿತರಾದ ನಾಮಗೊಂಡಲು ಶಾಮಾಚಾರ್ಯರಲ್ಲಿ ನ್ಯಾಯಶಾಸ್ತ್ರ ವ್ಯಾಸಂಗ; ಆಪ್ತರೂ ಅನುಬಂಧಿಗಳೂ ಆದ ದುರ್ಗದ ಹುಲಿ ಹನುಮಂತಾಚಾರ್ಯರಲ್ಲಿ ವೇದಾಂತಾದಿಶಾಸ್ತ್ರ ವ್ಯಾಸಂಗ, ಚತುಶ್ಶಾಸ್ತ್ರ ಪಂಡಿತರೆಂದು ವಿಖ್ಯಾತರಾಗಿದ್ದರು. ಸದಾಚಾರಸಂಪನ್ನರು. ಶ್ರೀರಾಯರ ಮಠದ ಶ್ರೀಸುಪ್ರಜ್ಞೇಂದ್ರತೀರ್ಥರಿಂದ ಸಂನ್ಯಾಸವನ್ನು ಪಡೆದು ಶ್ರೀಸುಕೃತೀಂದ್ರತೀರ್ಥರೆಂದು ಪ್ರಸಿದ್ಧರಾದವರು ಇವರ ಕಾಲದಲ್ಲಿ ಮಠವು ಸರ್ವತೋಮುಖವಾಗಿ ಅಭಿವೃದ್ಧಿ ಹೊಂದಿತು.

ಆಗಿನ ಕಾಲದಲ್ಲಿ ಪ್ರಸಿದ್ಧ ಪಂಡಿತರಾಗಿದ್ದ ಶ್ರೀಮುಷ್ಣಂ ಗೋಪಾಲಾಚಾರ್ಯರು, ಸುಬ್ಬರಾಮಾಚಾರ್ಯರು, ಎಲತ್ತೂರು ಕೃಷ್ಣಾಚಾರ್ಯರು, ತೋತಾದ್ರಿಮಠದ ವಿದ್ವಾಂಸರು ಇವರೆಲ್ಲರೂ ಶ್ರೀಗಳವರ ವಿದ್ವತ್ತನ್ನು ಮೆಚ್ಚಿದ್ದರು. ಪ್ರಾಕ್ಷಿಕಕುಲದ ಬೀಗಮುದ್ರೆ ಮನೆತನದ ಗೌತಮ ಗೋತ್ರಕ್ಕೆ ಸೇರಿದವರು. ಇವರ ವೃಂದಾವನವು ನಂಜನಗೂಡಿನಲ್ಲಿದೆ.

## ರಾಜಾ ಕೃಷ್ಣಾಚಾರ್ಯರು

ವಾಸಸ್ಥಳ–ನಂಜನಗೂಡು ವಿದ್ಯಾಭ್ಯಾಸ ಹಿರಿಯರಲ್ಲಿ ಮತ್ತು ದುರ್ಗದ ಹನುಮಂತಾಚಾರ್ಯರಲ್ಲಿ. ಸುಪ್ರಸಿದ್ಧ ಪಂಡಿತರು ಲೌಕಿಕಕಾರ್ಯಕುಶಲರು, ಮಠದ ದಿವಾನರಾಗಿದ್ದವರು ರಾಯರ ಮಠದ ಶ್ರೀಸುಕೃತೀಂದ್ರತೀರ್ಥರಿಂದ ಸಂನ್ಯಾಸವನ್ನು ಹೊಂದಿ ಶ್ರೀಸುಶೀಲೇಂದ್ರತೀರ್ಥರೆಂದು ಜಗದ್ವಿಖ್ಯಾತರಾಗಿದ್ದರು, "ಸಮೀರ ಸಮಯಸಂವರ್ಧಿನೀ" ಎಂಬ ಮಹಾವಿದ್ವತ್ಸಭೆಯನ್ನು ಪ್ರಾರಂಭಿಸಿ ವಿದ್ಯಾಭ್ಯಾಸಕ್ಕೆ ಪ್ರೋತ್ಸಾಹಕರಾಗಿದ್ದರು ಮೂಲರಾಮದೇವರ ಪೂಜೆಗೆ ಬಂಗಾರದ ಮಂಟಪವನ್ನು ಮಾಡಿಸಿದವರು. ಸಂಚಾರಕ್ರಮದಿಂದ ಉಡುಪಿಗೆ ಹೋದಾಗ ಕೈತಪ್ಪಿ ಹೋಗಿದ್ದ ಅಲ್ಲಿನ ರಾಯರ ಮಠವನ್ನು ಸ್ವಾಧೀನಪಡಿಸಿಕೊಂಡವರು. ಅನೇಕ ಶಿಷ್ಯರಿಗೆ ಶ್ರೀವ್ಯಾಸತ್ರಯಾದಿ ಉದ್ಗ್ರಂಥಗಳನ್ನು ಪಾಠ ಹೇಳಿ ಪಂಡಿತರನ್ನಾಗಿ ಮಾಡಿದ್ದರು. ಬೀಗಮುದ್ರೆ ಮನೆತನದ ಗೌತಮ ಗೋತ್ರಕ್ಕೆ ಸೇರಿದವರು. ಗೌಡಗೆರೆ ಆಚಾರ್ಯರ ಬಂಧುಗಳು. ಮಂತ್ರಾಲಯ ಕ್ಷೇತ್ರದಲ್ಲಿ ಯಾತ್ರಾರ್ಥಿಗಳಿಗಾಗಿ ಛತ್ರಾದಿಗಳನ್ನು ಅಭಿವೃದ್ಧಿ ಪಡಿಸಿದವರು. ಶ್ರೀಸತ್ಯಧ್ಯಾನರ ಸಮಕಾಲೀನರು ಇವರ ವೃಂದಾವನವು ವರದಾನದಿ ತೀರದ ಹೊಸ ರಿತ್ತಿಯಲ್ಲಿದೆ.

## ರಾಜಾ ಶ್ರೀನಿವಾಸಮೂರ್ತಿ ಆಚಾರ್ಯರು

ವಾಸಸ್ಥಳ–ನಂಜನಗೂಡು. ವಿದ್ಯಾಭ್ಯಾಸ ಹಿರಿಯರಲ್ಲಿ. ನ್ಯಾಯ ವೇದಾಂತಾದಿ ಚತುಃಶಾಸ್ತ್ರಗಳಲ್ಲಿ ಪರಿಣತ ವಿದ್ವಾಂಸರು ಶ್ರೀಸುವ್ರತೀಂದ್ರತೀರ್ಥರಿಂದ ಸಂನ್ಯಾಸವನ್ನು ಹೊಂದಿ ಶ್ರೀಸುಯಮೀಂದ್ರತೀರ್ಥರೆಂದು ಯತಿನಾಮ

ಪಡೆದು ಮಂತ್ರಾಲಯದಲ್ಲಿಯೇ ರಾಯರ ಸನ್ನಿಧಾನದಲ್ಲಿದ್ದು ಭಕ್ತ ವೃಂದದವರಿಗೆ ಅನೇಕ ಸೌಲಭ್ಯಗಳನ್ನು ಕಲ್ಪಿಸಿ ಕೊಟ್ಟವರು. ಶ್ರೀಗುರುಸಾರ್ವಭೌಮ ಮಹಾ ಪಾಠಶಾಲೆಯನ್ನು ಅಭಿವೃದ್ಧಿ ಪಡಿಸಿದವರು. ರಾಯರ ಉತ್ಸವಕ್ಕೆ ಬೆಳ್ಳಿರಥವನ್ನು ನಿರ್ಮಿಸಿದವರು. ಪ್ರಾಚೀನ ಗ್ರಂಥಗಳ ಸಂಶೋಧನಗೆ ಸಹಾಯ ಮಾಡಿ ತಮ್ಮ ಪೂರ್ವಾಶ್ರಮದ ಪುತ್ರರಾದ ರಾಜಾ ಎಸ್. ಗುರು ರಾಜಾಚಾರ್ಯರ ಮೂಲಕ "ಪರಿಮಳ ಸಂಶೋಧನ ಮತ್ತು ಪ್ರಕಾಶನ ಮಂದಿರ"ವನ್ನು ಸ್ಥಾಪಿಸಿದವರು. ಬೀಗಮುದ್ರೆ ಮನೆತನದ ಗೌತಮ ಗೋತ್ರಕ್ಕೆ ಸೇರಿದವರು. ಇವರ ವೃಂದಾವನವು ಮಂತ್ರಾಲಯದಲ್ಲಿದೆ. ರಾಜಾ ಎಸ್. ವೇಣುಗೋಪಾಲಾಚಾರ್ಯರು ಮತ್ತು ರಾಜಾ ಎಸ್. ಲಕ್ಷ್ಮೀ ನಾರಾಯಣಾಚಾರ್ಯರು ಇವರ ಪೂರ್ವಾಶ್ರಮದ ಪುತ್ರರು. ರಾಜಾ ಗುರು ರಾಜಾಚಾರ್ಯರು ಸದಾಹಸನ್ಮುಖಿಗಳು, ಕೊಡುಗೈದಾನಿಗಳು.

## ಸವಿನುಡಿ ಗುಂಡಾಚಾರ್ಯರು

ವಾಸಸ್ಥಳ-ಕಂದಕೂರು ಮತ್ತು ಗೌಡಗೆರೆ. ಪೂರ್ವೀಕರ ಸ್ಥಳ— ಮದನಪಲ್ಲಿ ಸಮೀಪದ ವ್ಯಾಸಸಮುದ್ರಕೆರೆ ಇರುವ ಕಂದಕೂರು. ವಿದ್ಯಾಭ್ಯಾಸ ಗೌಡಗೆರೆ ಆಚಾರ್ಯರಲ್ಲಿ. ವೇದಾಂತ ಮತ್ತು ಸಾಹಿತ್ಯಶಾಸ್ತ್ರನಿಪುಣರು. ಶ್ರೇಷ್ಠಮಟ್ಟದ ಪೌರಾಣಿಕರು ತೆಲಗು ಸಾಹಿತ್ಯದಲ್ಲಿ ಪರಿಣತರು. ಉತ್ತಮ ಗಮಕಿಗಳು. ಪೌರೋಹಿತ್ಯದಲ್ಲಿಯೂ ನಿಪುಣರು ಆಗಮಶಾಸ್ತ್ರಜ್ಞರು ಇವರು ಷಾಷ್ಟಿಕರ ಸವಿನುಡಿ ಮನೆತನದ ಕಾಶ್ಯಪಗೋತ್ರದವರು ವೇದಾಂತಿ ಕೃಷ್ಣಾಚಾರ್ಯರ ಸಂಬಂಧಿಗಳು ಇವರ ನಾಲ್ಕು ಜನ ಗಂಡು ಮಕ್ಕಳು ಉದ್ಯೋಗದಲ್ಲಿದ್ದಾರೆ. ಸವಿನುಡಿ ಮನೆತನದ ಸುಬ್ಬಣ್ಣಾಚಾರ್ಯರು ಈಗಲೂ ದೊಡ್ಡಬಳ್ಳಾಪುರದ ಕುಚ್ಚಪ್ಪನ ಪೇಟೆಯಲ್ಲಿದ್ದಾರೆ ಕಂದಕೂರು ಉದ್ದಿ ಅಪ್ಪಯ್ಯಾಚಾರ್ಯರ ಬಂಧುಗಳು.

## ದೊಡ್ಡಬಳ್ಳಾಪುರದ ಪುರೋಹಿತ ಕೃಷ್ಣಮೂರ್ತಿಆಚಾರ್ಯರು

ವಾಸಸ್ಥಳ–ಬಂಗಳೂರು. ಪೂರ್ವೀಕರ ಸ್ಥಳ ದೊಡ್ಡಬಳ್ಳಾಪುರ. ವಿದ್ಯಾಭ್ಯಾಸ ಗೌಡಗೆರೆ ವೆಂಕಟರಮಣಾಚಾರ್ಯರಲ್ಲಿ— ರಾಜಪುರೋಹಿತರ

ವಂಶದವರು. ಪಂಡಿತರು ಮತ್ತು ಪುರೋಹಿತರು. ಇವರ ತಂದೆ ನರಸಿಂಹಾಚಾರ್ಯರು ಮತ್ತು ಸೋದರ ಸಂಬಂಧಿಗಳಾದ ಕೆಸ್ತೂರು ಭೀಮಾಚಾರ್ಯರು ಗೋರಿಬಿದನೂರು ಹನುಮಂತಾಚಾರ್ಯರು, ಅಶ್ವತ್ಥಾಚಾರ್ಯರು, ಇವರೆಲ್ಲರೂ ರಾಜಪುರೋಹಿತರ ವಂಶಕ್ಕೆ ಸೇರಿದವರು. ಬೆಂಗಳೂರಿನಲ್ಲಿ ನಿವೃತ್ತ ಸರಾಫರೂ ಮತ್ತು ಪೌರಾಣಿಕರಾದ ಜಯತೀರ್ಥಾಚಾರ್ಯರಲ್ಲಿ ಪವಮಾನ ಸೂಕ್ತ ಅಧ್ಯಯನ ಮಾಡಿರುವವರೂ ಆದ ಡಿ ಸುಬ್ಬರಾಯರು ಮುಂತಾದ ದೇಶಪಾಂಡೆ ಮತ್ತು ಹವೇಲಿಯವರ ಮನೆತನದ ಪುರೋಹಿತರು. ಉತ್ತಮ ಭವಿಷ್ಯವಿದ್ದ ಈ ಪಂಡಿತರು ಅಲ್ಪಾಯುಗಳು. ಇವರ ಅಣ್ಣ ತರಬನಹಳ್ಳಿ ಪುಟ್ಟಣ್ಣಾಚಾರ್ಯ ಈಗಲೂ ಬೆಂಗಳೂರಿನಲ್ಲಿದ್ದಾರೆ. ಭಾಷ್ಯದೀಪಿಕಾಚಾರ್ಯರ ವಂಶಸ್ಥರು. ತಂಗೆಹಳ್ಳಿ ಮನೆತನದ ಕೌಂಡಿಣ್ಯ ಗೋತ್ರಕ್ಕೆ ಸೇರಿದವರು.

## ಗರಣಿ ವೈಯ್ಯಾಕರಣ ಕೃಷ್ಣಾಚಾರ್ಯರು

ವಾಸಸ್ಥಳ–ಬೆಂಗಳೂರು ಹಿರಿಯರಲ್ಲಿಯೇ ವಿದ್ಯಾಭ್ಯಾಸ. ವ್ಯಾಕರಣ ಶಾಸ್ತ್ರದಲ್ಲಿ ಘನಪಂಡಿತರು. ಹಾಗೆಯೇ ದ್ವೈತವೇದಾಂತಶಾಸ್ತ್ರದಲ್ಲಿಯೂ ಪಾರಂಗತರು. ಮದ್ರಾಸಿನ ಕ್ರಿಶ್ಚಿಯನ್‌ಕಾಲೇಜಿನಲ್ಲಿಯೂ ಮತ್ತು ಬೆಂಗಳೂರು ಸೆಂಟ್ರಲ್‌ಕಾಲೇಜಿನಲ್ಲಿಯೂ ಅಧ್ಯಾಪಕರಾಗಿದ್ದರು. ಆಯುರ್ವೇದದಲ್ಲಿಯೂ ಪರಿಶ್ರಮವಿತ್ತು. ಅನೇಕ ಜನ ಶಿಷ್ಯರಿಗೆ ಪಾಠ ಹೇಳಿದ್ದವರು. ಬಾದರಾಯಣ ಗೋತ್ರದವರು ಕೆಲವು ವ್ಯಾಕರಣಶಾಸ್ತ್ರಗ್ರಂಥಗಳನ್ನು ರಚಿಸಿದ್ದಾರೆ. ಜಿ. ಕೆ. ತಿಮ್ಮಣ್ಣಾಚಾರ್ಯರ ಪಿತೃಗಳು.

## ಅರ್ಚಕ ವೇದವ್ಯಾಸಾಚಾರ್ಯರು

ವಾಸಸ್ಥಳ–ಮಂತ್ರಾಲಯ. ಪ್ರಸಿದ್ಧ ಸಾಹಿತ್ಯವಿದ್ವಾಂಸರು. ಬಹು ಜನ ಶಿಷ್ಯರಿಗೆ ಪಾಠಪ್ರವಚನ ಮಾಡಿಸಿದ್ದರು ಈಗ ರೂಢಿಯಲ್ಲಿರುವ ಶ್ರೀರಾಘವೇಂದ್ರಾಷ್ಟೋತ್ತರಶತನಾಮಾವಲಿಯನ್ನು ರಚಿಸಿರುವ ಮಹಾ ಮೇಧಾವಿಗಳು ಮತ್ತು ರಾಯರ ಅಂತರಂಗ ಭಕ್ತರು. ಇವರ ಮನೆಯಲ್ಲಿ ಶ್ರೀರಾಯರ ಪಾದುಕೆಗಳು ಮತ್ತು ಸಿದ್ಧಿ ಮಸೂದ್‌ಖಾನನಿಂದ ಕೊಡಲ್ಪಟ್ಟ ಸನ್ನದ್ದು ಇವೆ ಎಂದು ಹೇಳಿ, ಭಕ್ತರು ಈ ಅರ್ಚಕರನ್ನು ಅವರ ಮನೆಯಲ್ಲಿ

ಮರ್ಯಾದೆ ಮಾಡುವ ಸಮಯದಲ್ಲಿ ಅವುಗಳನ್ನು ತೋರಿಸುತ್ತಿದ್ದರು. ಬಹು ಕಾಲ ರಾಯರವೃಂದಾವನದ ಸೇವೆಯನ್ನು ದಕ್ಷತೆಯಿಂದಲೂ ಭಕ್ತಿಯಿಂದಲೂ ಮಾಡುತ್ತಿದ್ದ ಮಹನೀಯರು ಕಾಶ್ಯಪ ಗೋತ್ರದವರು. ಇವರ ಹಿರಿಯ ಮಕ್ಕಳು ಈಗಿರುವ ಅರ್ಚಕ ರಾಘವೇಂದ್ರಾಚಾರ್ಯರು.

## ಬೆಟ್ಟದ ಅನಂತಕೃಷ್ಣಾಚಾರ್ಯರು

ವಾಸಸ್ಥಳ–ಬೆಂಗಳೂರು. ಪೂರ್ವೀಕರ ಸ್ಥಳ ದೊಡ್ಡಬಳ್ಳಾಪುರ ವಿದ್ಯಾಭ್ಯಾಸ ಹಿರಿಯರಲ್ಲಿ. ಬೆಂಗಳೂರಿಗೆ ಬಂದ ನಂತರ ಮೈಸೂರು ಸರ್ಕಾರದಲ್ಲಿ ಸೇವೆ ಸಲ್ಲಿಸಿ ನಿವೃತ್ತರಾಗಿದ್ದರು ನಿವೃತ್ತಿ ನಂತರ ಪ್ರಾಚೀನ ಗ್ರಂಥಗಳ ಸಂಶೋಧನಾಕಾರ್ಯದಲ್ಲಿ ನಿರತರಾಗಿದ್ದರು ಇವರು ಮಾಷ್ಟಿಕರಿಗೆ ಸಂಬಂಧಪಟ್ಟ ಅನೇಕ ಕೈಬರಹ ಪ್ರಾಚೀನ ಪ್ರತಿಗಳನ್ನು ಶೋಧಿಸಿ, ವಿಷಯ ಗಳನ್ನು ಕ್ರೋಡೀಕರಿಸಿ, "ಮಾಷ್ಟಿಕ ಮಹಾ ಪುರುಷರು" ಮತ್ತು "ಮಾಷ್ಟಿಕ ನಾಮಾವಳಿ" ಎಂಬ ಎರಡು ಕಿರುಹೊತ್ತಿಗೆಗಳನ್ನು ರಚಿಸಿ, ಮಾಷ್ಟಿಕರ ಗತ ವೈಭವವನ್ನು ಹೃದಯಂಗಮವಾಗಿ ಚಿತ್ರಿಸಿದ್ದಾರೆ. ಅನೇಕಜನ ವಿದ್ಯಾರ್ಥಿ ಗಳಿಗೆ ನಾನಾರೀತಿಯಲ್ಲಿ ಸಹಾಯ ಮಾಡಿದ್ದಾರೆ. ಶ್ರೀವ್ಯಾಸರಾಜಮಠದ ಪೀಠಾಧಿಪತಿಗಳಿಗೂ ಇವರಿಗೂ ನಿಕಟ ಸಂಪರ್ಕವಿದ್ದಿತು ಇವರು ಶ್ರೀಯುತ ಗೌಡಗೆರಿ ವೆಂಕಟರಮಣಾಚಾರ್ಯರ ಜ್ಞಾತಿಸಂಬಂಧಿಗಳು. ಉತ್ತಮವಾದ ಪುಸ್ತಕಭಂಡಾರವನ್ನು ಹೊಂದಿದ್ದರು ಬೆಂಗಳೂರು ಸೀತಾಪತೀಅಗ್ರ ಹಾರದ ಶ್ರೀರಾಘವೇಂದ್ರಸ್ವಾಮಿಗಳ ವೃಂದಾವನಸನ್ನಿಧಾನದ ಪ್ರಥಮ ಕಾರ್ಯದರ್ಶಿಗಳಾಗಿ ಸರ್ವತೋಮುಖವಾದ ಅಭಿವೃದ್ಧಿಗೆ ಕಾರಣರಾಗಿದ್ದರು. ವಿಶ್ವಾಮಿತ್ರ ಗೋತ್ರದವರು. ಬೆಟ್ಟದ ಮನೆತನದವರು.

## ಕೆಂದಕೂರು ಅಪ್ಪಯ್ಯಾಚಾರ್ಯರು

ವಾಸಸ್ಥಳ–ಮದನಪಲ್ಲಿ ತಾಲ್ಲೂಕು ಕಂದಕೂರು ಶ್ರೀಮಂತ ಕುಟುಂಬ ದವರು ; ವ್ಯಾಸರಾಜರಿಂದ ನಿರ್ಮಿತವಾದ "ವ್ಯಾಸಸಮುದ್ರ"ವೆಂಬ ದೊಡ್ಡ ಕೆರೆಯ ಆಶ್ರಯದ ನೂರಾರು ಎಕರೆ ಭೂಮಾಲೀಕರು ; ಅಲ್ಲದೆ ಶ್ರೀವ್ಯಾಸ ರಾಜಮಠಕ್ಕೆ ಸೇರಿದ್ದ ಭೂಮಿಕಾಣಿಗಳ ಗೇಣೀದಾರರೂ ಆಗಿದ್ದರು. ಇವರು

ಷಾಷ್ಟಿಕಕುಲದ ಉದ್ದೀ ಮನೆತನದ ಜಾಮದಗ್ನಿಗೋತ್ರೋತ್ಪನ್ನರು ಇವರ ಪೌತ್ರರು ದ್ವಾರಕಾನಾಥರು. ಬೋಂಬಾಯಿನಲ್ಲಿ ಅತ್ಯುನ್ನತ ಹುದ್ದೆಯಲ್ಲಿದ್ದಾರೆ.

## ಭವಾನಿ ಕೃಷ್ಣಾಚಾರ್ಯರು

ವಾಸಸ್ಥಳ–ಕೊಯಮುತ್ತೂರು ಜಿಲ್ಲೆಗೆ ಸೇರಿದ ಭವಾನಿ, ಈ ಸ್ಥಳದಲ್ಲಿ ಭವಾನಿ ಮತ್ತು ಕಾವೇರಿ ನದಿಗಳು ಸಂಗಮವಾಗುತ್ತವೆ. ಇವರು ಶ್ರೀಮಂತ ಕುಟುಂಬದವರು. ನೂರಾರು ಎಕರೆ ತರೀಜಮೀನಿನ ಮಾಲಿಕರಾಗಿದ್ದರು. ಶ್ರೀಪಾದರಾಜರಮಠದ ಮೇಧಾನಿಧಿತೀರ್ಥರ ಪೂರ್ವಾಶ್ರಮದ ಬಂಧುಗಳು. ಇವರ ಮಕ್ಕಳು ಸುಬ್ಬರಾಯಾಚಾರ್ಯರು ಹಿಂದಿನ ಮದ್ರಾಸು ಸರ್ಕಾರದಲ್ಲಿ ಪ್ರಸಿದ್ಧ ಪೋಲೀಸ್ ಅಧಿಕಾರಿಗಳಾಗಿದ್ದರು ಶತಾಯುಷಿ ಶ್ರೀಸತ್ಯನಿಧಿತೀರ್ಥರ ಪೂರ್ವಾಶ್ರಮದ ಸೋದರಮಾವಂದಿರು. ಕಾಶ್ಯಪಗೋತ್ರದವರು. ಇವರ ಪೌತ್ರರು ನಾಗರಾಜಾಚಾರ್ಯರು ವಿಖ್ಯಾತ ರೈಲ್ವೆ ಕಂಟ್ರಾಕ್ಟುದಾರರು.

## ವೇದಾಂತಿ ಕೃಷ್ಣಾಚಾರ್ಯರು

ವಾಸಸ್ಥಳ–ಬೆಂಗಳೂರು. ಪೂರ್ವೀಕರ ಸ್ಥಳ ಗೌಡಗೆರೆ. ವಿದ್ಯಾಭ್ಯಾಸ ಹಿರಿಯರಲ್ಲಿ ಸುಪ್ರಸಿದ್ಧ ವಿದ್ವಾಂಸರೂ, ಧರ್ಮಶಾಸ್ತ್ರಕೋವಿದರೂ, ಪೌರೋಹಿತ್ಯನಿಪುಣರೂ ಆಗಿದ್ದ ವೇದಾಂತಿ ರಾಮಾಚಾರ್ಯರ ಮಕ್ಕಳು. ಉದ್ಯೋಗ–ಶಾಸ್ತ್ರಾಧ್ಯಯನ ಮತ್ತು ಪೌರೋಹಿತ್ಯ. ಇವರು ದಕ್ಷಿಣೆ ಆಸೆ ಇಲ್ಲದೆ ಬಡಬಗ್ಗರಿಗೆ ಪೂರ್ವಾಪರ, ಹವ್ಯಕವ್ಯ ಕಾರ್ಯಗಳನ್ನು ಮಾಡಿಸುತ್ತಿದ್ದವರು. ಯದೃಚ್ಛಾಲಾಭ ಸಂತೋಷಿಗಳು. ಬಹುಜನ ಬಡ ವಿದ್ಯಾರ್ಥಿಗಳಿಗೆ ಆಶ್ರಯದಾತರಾಗಿದ್ದರು. ಪ್ರಸಿದ್ಧ ನ್ಯಾಯವಾದಿಗಳೂ, ಕಾರ್ಮಿಕ ಮುಖಂಡರೂ ಆಗಿದ್ದ ಜಿ. ವಿ. ರಾಮಾಚಾರ್ಯರು ಇವರ ಏಕಮಾತ್ರ ಪುತ್ರರು. ಇವರು ವೇದಾಂತಿ ಮನೆತನದ ಗೌತಮಗೋತ್ರಕ್ಕೆ ಸೇರಿದವರು. ಪಂಡಿತರಾಜ ಮಾಗಡಿ ರಂಗನಾಥಾಚಾರ್ಯರ ಸಂಬಂಧಿಗಳು. ಗೌಡಗೆರೆ ಆಚಾರ್ಯರ ಸೋದರಳಿಯಂದಿರು. ಬಡವರ ಆಧಾರಿಗಳು. ದಾನಿಗಳು. ಸದಾಚಾರಿಗಳು

### ರಾಜಪುರೋಹಿತ ಅಶ್ವತ್ಥಾಚಾರ್ಯರು

ವಾಸಸ್ಥಳ–ದೊಡ್ಡಬಳ್ಳಾಪುರ. ವಿದ್ಯಾಭ್ಯಾಸ ಹಿರಿಯರಲ್ಲಿ. ಉದ್ಯೋಗ ಭೂ ಒಡೆಯರು ಮತ್ತು ಪೌರೋಹಿತ್ಯ. ಇವರು ದೇಶಪಾಂಡೆಯವರಿಗೆ ಪುರೋಹಿತರಾಗಿದ್ದುದರಿಂದ ರಾಜಪುರೋಹಿತರೆಂಬ ಉಪನಾಮವಿದ್ದಿತು. ಬಹುಜನ ಶಿಷ್ಯರಿಗೆ ಪೌರೋಹಿತ್ಯವನ್ನು ಅಭ್ಯಾಸ ಮಾಡಿಸಿದ್ದವರು. ಇವರು ತಂಗೆಹಳ್ಳಿ ಮನೆತನದ ಕೌಂಡಿಣ್ಯಗೋತ್ರೋತ್ಪನ್ನರು ಭಾಷ್ಯದೀಪಿಕಾಚಾರ್ಯರ ವಂಶಸ್ಥರು. ಗೌಡಗೆರೆ ಆಚಾರ್ಯರ ಸಂಬಂಧಿಗಳು ವಿಮಾನ ಕಾರ್ಖಾನೆ ಅಧಿಕಾರಿಗಳಾಗಿದ್ದ ಡಿ ಕೆ. ಎಲ್. ಆಚಾರ್ಯರು ಇವರ ಪೌತ್ರರು. ತಂಗೆಹಳ್ಳಿ ಆಚಾರ್ಯರ ಕಲ್ಲಿನ ಧ್ವಜಸ್ತಂಭವು ದೇವರಾಯನ ದುರ್ಗದ ಮೆಟ್ಟಿಲುಗಳ ಮಧ್ಯ ಭಾಗದಲ್ಲಿದೆ.

### ಹಾವೇರಿ ಶ್ರೀನಿವಾಸಾಚಾರ್ಯರು

ವಾಸಸ್ಥಳ-ಬೆಂಗಳೂರು. ವಿದ್ಯಾಭ್ಯಾಸ ಶ್ರೀಸುಶೀಲೇಂದ್ರತೀರ್ಥರಲ್ಲಿ ಸಾಹಿತ್ಯ ಮತ್ತು ವೇದಾಂತ ಶಾಸ್ತ್ರಗಳಲ್ಲಿ ಪರಿಣತರು. ಬೆಂಗಳೂರು ಸೀತಾಪತಿ ಅಗ್ರಹಾರದ ರಾಘವೇಂದ್ರಸ್ವಾಮಿಗಳ ಬೃಂದಾವನ ಸನ್ನಿಧಿಯಲ್ಲಿ ೩೫ ವರ್ಷಗಳ ದೀರ್ಘಕಾಲ ಯಜಮಾನರಾಗಿದ್ದು ನಿವೃತ್ತರಾಗಿದ್ದರು. ಇವರು ಶಿಸ್ತುಪಾಲನೆ ಮತ್ತು ಕಾಲನಿಯಮ ಪಾಲಿಸುವುದರಲ್ಲಿ ಹೆಸರು ವಾಸಿಯಾದವರು. ಮಠವನ್ನು ಸರ್ವವಿಧದಲ್ಲಿಯೂ ಅಭಿವೃದ್ಧಿ ಪಡಿಸಿದವರು. ಪಾಠಶಾಲೆ ಮತ್ತು ವಿದ್ಯಾರ್ಥಿನಿಲಯವೂ ಸ್ಥಾಪಿತವಾದುದು ಇವರ ಕಾಲದಲ್ಲಿಯೇ. ಇವರು ಪ್ರಸಿದ್ಧವಾದ ಹಾವೇರಿ ಮನೆತನದ ಕೌಶಿಕ ಗೋತ್ರದವರು, ಜನಾನುರಾಗಿಗಳು.

### ಸಾಹುಕಾರ್ ಕೃಷ್ಣಮೂರ್ತಿ ಆಚಾರ್ಯರು

ವಾಸಸ್ಥಳ–ನಂಜನಗೂಡು ವಿದ್ಯಾಭ್ಯಾಸ-ರಾಯರಮಠದ ಶ್ರೀಪಾದಂಗಳವರಲ್ಲಿ. ಸಾಹಿತ್ಯ ಶಾಸ್ತ್ರದಲ್ಲಿ ನಿಪುಣರು ಕವಿತಾಶಕ್ತಿಯುತರು. ಹವ್ಯಾಸ ಪುರಾಣ ವಾಚನ. ಉತ್ತಮ ದರ್ಜೆಯ ಭಾಷಣಕಾರರು. ಅನೇಕ ವಿದ್ವತ್ಸಭೆಗಳಲ್ಲಿ ಪ್ರಶಸ್ತಿ ಗಳಿಸಿದ್ದವರು. ಇವರು ಪ್ರಸಿದ್ಧವಾದ ಹಾವೇರಿ ಮನೆತನಕ್ಕೆ

ಸೇರಿದ ಕೌಶಿಕ ಗೋತ್ರದವರು ಇವರ ಮಕ್ಕಳು ಮೈಸೂರು ವಿಶ್ವವಿದ್ಯಾಲಯದಲ್ಲಿ ಉನ್ನತ ಹುದ್ದೆಯಲ್ಲಿದ್ದಾರೆ

## ನಾಗರಕೆರೆ ಗೋಪಾಲಕೃಷ್ಣಾಚಾರ್ಯರು

ವಾಸಸ್ಥಳ–ದೊಡ್ಡಬಳ್ಳಾಪುರ ಜನಪ್ರಿಯ ಶ್ರೀಮಂತ ಭೂಒಡೆಯರು ದೊಡ್ಡಬಳ್ಳಾಪುರದಲ್ಲಿ ಶ್ರೀವ್ಯಾಸರಾಜರಿಂದ ಅರ್ಕಾವತಿನದಿಗೆ ಅಡ್ಡವಾಗಿ ಕಟ್ಟಿಸಲ್ಪಟ್ಟಿರುವ ನಾಗಪ್ಪನಕೆರೆ ಅಥವಾ ನಾಗರಕೆರೆ ಕೆಳಗಿನ ಸಮಸ್ತ ನೀರಾವರೀ ಭೂಮಿಗೂ ಒಡೆಯರಾಗಿದ್ದರು. ನಾಗರಕೆರೆ ಒಟ್ಟು ಪಟ್ಟೇದಾರರು ಎಂದು ಪ್ರಸಿದ್ಧಿಯೂ ಇತ್ತು. ದೇಶಪಾಂಡೆಯವರಿಗೆ ಕುಲಪುರೋಹಿತರು. ಭಾಷ್ಯ ದೀಪಿಕಾಚಾರ್ಯರ ವಂಶಸ್ಥರು ತಂಗೆಹಳ್ಳಿ ಮನೆತನದ ಕೌಂಡಿಣ್ಯಗೋತ್ರದವರು. ಗೌಡಗೆರೆ ವೆಂಕಟರಮಣಾಚಾರ್ಯರ ಮಾವಂದಿರು ಶ್ರೀವ್ಯಾಸರಾಜರ ಪೂರ್ವಾಶ್ರಮದ ಬಂಧುವರ್ಗಕ್ಕೆ ಸೇರಿದವರು. ಇವರ ವಂಶಸ್ಥರಾದ ಡಿ. ಕೆ. ಸುಬ್ಬಣ್ಣಾಚಾರ್ಯರು, ಬೆಂಗಳೂರಿನಲ್ಲಿರುವ ರೆಂಕೋ ಕಾರ್ಖಾನೆಯ ಡೆಪ್ಯುಟಿ ಜನರಲ್ ಮ್ಯಾನೇಜರಾಗಿದ್ದಾರೆ. ಗೌಡಗೆರೆ ಗೋಪಾಲಕೃಷ್ಣಾಚಾರ್ಯರು ಇವರ ದೌಹಿತ್ರರು.

## ಬಿ. ವೆಂಕೋಬರಾಯರು

ಜನ್ಮಸ್ಥಳ–ಬೇತಮಂಗಲ. ಇವರು ಮೈಸೂರು ಸಿವಿಲ್ ಸರ್ವೀಸ್ ಪರೀಕ್ಷೆಯಲ್ಲಿ ಉತ್ತೀರ್ಣರಾಗಿ ಡೆಪ್ಯುಟೀ ಕಮೀಷನರಾಗಿದ್ದರು. ಪೂರ್ಣಯ್ಯನವರ ಅಳಿಯಂದಿರು ಸಂಸ್ಕೃತ ಭಾಷೆಯ ತಜ್ಞರು ಶಾಸ್ತ್ರಾರ್ಥಕೋವಿದರು ಸೋಮನಾಥ ಕವಿಯ "ವ್ಯಾಸಯೋಗಿ ಚರಿತೆ"ಯನ್ನು ಸಂಪಾದಿಸಿ, ಶೋಧಿಸಿ, ಮುದ್ರಿಸಿ ಪ್ರಕಾಶ ಪಡಿಸಿದವರು ಆ ಗ್ರಂಥಕ್ಕೆ ಇವರು ಬರೆದಿರುವ ಆಂಗ್ಲ ಭಾಷಾ ಮುನ್ನುಡಿಯು ಅತೀವ ಪಾಂಡಿತ್ಯ ಪೂರ್ಣವಾಗಿದೆ. ಈಗ ಜನ ಜಂಗುಳಿಯಲ್ಲಿರುವ "ವ್ಯಾಸರಾಜರು ಉಡುಪಿಯ ಮಧ್ವವಾಟ ಮಠದಲ್ಲಿದ್ದ ವ್ಯಾಸ ಮುಷ್ಟಿಯನ್ನು ಕದ್ದರು ಮತ್ತು ವಾದಿರಾಜರು ಶಿಷ್ಯತ್ವನೆಪದಿಂದ ವ್ಯಾಸರಾಜರಲ್ಲಿದ್ದು ಆ ವ್ಯಾಸಮುಷ್ಟಿಯನ್ನು ಹಿಂದಕ್ಕೆ ಕದ್ದುಕೊಂಡು ಹೋದರು" ಎಂಬುದನ್ನು ಸಕಾರಣವಾಗಿ ಐತಿಹಾಸಿಕ ಆಧಾರಗಳಿಂದ ಅಲ್ಲಗಳೆದಿದ್ದಾರೆ. ಇವರು ಶ್ರೀವ್ಯಾಸರಾಜ ಮಠದ ಶಿಷ್ಯರು.

## ರಾವ್‌ಸಾಹೇಬ್ ಮೇಜರ್ ಎ. ಅಚ್ಯುತರಾಯರು

ಜನ್ಮಸ್ಥಳ–ದೊಡ್ಡಬಳ್ಳಾಪುರ. ವಾಸಸ್ಥಳ ಮದ್ರಾಸು ಮತ್ತು ಬೆಂಗಳೂರು. ದೊಡ್ಡಬಳ್ಳಾಪುರದಲ್ಲಿ ವಕೀಲರಾಗಿದ್ದ ಅಪ್ಪೂರಾಯರ ಮಕ್ಕಳು. ಇವರು ಬೊಂಬಾಯಿನಲ್ಲಿ ಎಲೆಕ್ಟ್ರಿಕಲ್ ಇಂಜನೀಯರಿಂಗ್ ಪರೀಕ್ಷೆಯಲ್ಲಿ ಉತ್ತೀರ್ಣರಾಗಿ ಹಿಂದಿನ ಮದ್ರಾಸು ಮತ್ತು ಸದರನ್ ಮರಾಠಾ ರೈಲ್ವೆಯಲ್ಲಿ ಛೀಫ್ ಎಲೆಕ್ಟ್ರಿಕಲ್ ಇಂಜನೀಯರಾಗಿ ನಿವೃತ್ತರಾಗಿದ್ದರು. ಇವರು ಗೌಡಗೆರೆ ವೇದಾಂತಿ ಸ್ವಾಮಿರಾಯಾಚಾರ್ಯರ ಅಳಿಯಂದಿರು.

## ಎಸ್. ಎಚ್. ಲಕ್ಷ್ಮೀನರಸಪ್ಪನವರು

ವಾಸಸ್ಥಳ–ಬೆಂಗಳೂರು. ಹರತಿ ಶೀನಪ್ಪನವರ ಪುತ್ರರು. ಬೆಂಗಳೂರು ಸೆಂಟ್ರಲ್ ಕಾಲೇಜಿನಲ್ಲಿ ಬಿ. ಎ. ಪಾಸು ಮಾಡಿ ಮದ್ರಾಸು ಇಂಜನೀಯರಿಂಗ್ ಕಾಲೇಜಿನಲ್ಲಿ ಬಿ. ಸಿ. ಇ ಪರೀಕ್ಷೆ ಮಾಡಿ, ಇಂಗ್ಲೆಂಡಿಗೆ ಹೋಗಿ ಅಲ್ಲಿ ಬಿ. ಆರ್ಚ್ ಪರೀಕ್ಷೆ ಮಾಡಿ ಮೈಸೂರು ಸರ್ಕಾರದ ಸೇವೆಯಲ್ಲಿದ್ದರು. ಇವರು ದಿವಾನ್ ಮಿರ್ಜಾ ಸಾಹೇಬರ ಕಾಲದಲ್ಲಿ ಮೈಸೂರು ಅರಮನೆಯನ್ನು ನೂತನ ರೀತಿಯಲ್ಲಿ ಮಾರ್ಪಡಿಸಿದರು. ಸರ್ಕಾರದ ಆರ್ಕಿಟೆಕ್ಟ್ ಆಗಿದ್ದು ನಿವೃತ್ತರಾಗಿದ್ದರು. ದಿವಾನ್ ಮಾಧವರಾಯರ ಮತ್ತು ಡಾ। ವಿ. ಎಲ್. ಪಡಿಕೆ ಇವರ ಸಂಬಂಧಿಗಳು. ಇವರ ಮಕ್ಕಳು ಎಸ್. ಎಲ್. ಜಗನ್ನಾಥ್ ಮತ್ತು ಎಚ್. ಎಲ್. ನರಸಿಂಗರಾಯರು ಉನ್ನತ ಹುದ್ದೆಗಳಲ್ಲಿದ್ದಾರೆ.

## ರಾವ್‌ಸಾಹೇಬ್ ಎಂ. ರಾಮರಾಯರು

ವಾಸಸ್ಥಳ–ಬೆಂಗಳೂರು. ವಿದೇಶ ಪ್ರಯಾಣವನ್ನು ಮಾಡಿದ್ದವರು. ಮೈಸೂರು ಸರ್ಕಾರದಲ್ಲಿಯೂ ಇನ್ನೂ ಬೇರೆ ರಾಜ್ಯಗಳಲ್ಲಿಯೂ, ಶ್ರೇಷ್ಠ ಅರಣ್ಯಾಧಿಕಾರಿಗಳಾಗಿದ್ದರು. (Chief Conservator of Forests). ಇವರು ಮೈಸೂರು ಸರ್ಕಾರದ ಛೀಫ್ ಇಂಜನೀಯರಾಗಿದ್ದ ಯಂ ಜಿ. ರಂಗಯ್ಯನವರ ಮತ್ತು ಡೆಪ್ಯುಟಿ ಕಮೀಷನರ್ ಸಿ. ವೆಂಕಟರಾಮರ ಬೀಗರು.

## ದೇಶಪಾಂಡೆ ರಾಜಾರಾಯರು

ವಾಸಸ್ಥಳ–ಬೆಂಗಳೂರು ಇವರು ದೊಡ್ಡಬಳ್ಳಾಪುರದ ಪ್ರಸಿದ್ಧವಾದ ದೇಶಪಾಂಡೆ ವಂಶಕ್ಕೆ ಸೇರಿದವರು. ಭಾರದ್ವಾಜಗೋತ್ರೋತ್ಪನ್ನರು. ಆಂಗ್ಲ ವಿದ್ಯಾಭ್ಯಾಸ ಅನಂತರ ಫಾರೆಸ್ಟ್ ರೇಂಜರ ಪರೀಕ್ಷೆಯಲ್ಲಿ ಉತ್ತೀರ್ಣರಾಗಿ ಮೈಸೂರು ಸರ್ಕಾರದ ಅರಣ್ಯ ಇಲಾಖೆಯಲ್ಲಿ ಜಿಲ್ಲಾಧಿಕಾರಿಗಳಾಗಿ ಸೇವೆ ಸಲ್ಲಿಸಿ ನಿವೃತ್ತರಾಗಿದ್ದರು. ಮುಳಬಾಗಲಿನ ಶ್ರೀಪ್ರೇಕ್ಷಾನಿಧಿತೀರ್ಥರು ಬಸವನ ಗುಡಿ ಪಟಾಲಮ್ಮ ರಸ್ತೆಯಲ್ಲಿರುವ ಇವರ ಬಂಗಲೆಯಲ್ಲಿ (ಬದರಿಕಾಶ್ರಮ) ಬಹುಕಾಲ ವಾಸ ಮಾಡುತ್ತಿದ್ದರು, ರಾವ್‌ಬಹದೂರು ವೆಂಕಟೇಶಾ ಚಾರ್ಯರ ಬೀಗರು.

## ಜಿ. ದೇವೋಜಿರಾಯರು

ವಾಸಸ್ಥಳ–ಶ್ರೀರಂಗಪಟ್ಟಣ. ಪೂರ್ವೀಕರ ಸ್ಥಳ ಗುಡಿಬಂಡೆ. ವೃತ್ತಿ ಯಲ್ಲಿ ವಕೀಲರು. ಮಂಡ್ಯದಲ್ಲಿಯೂ ವಕೀಲ್ ಕೆಲಸ ಮಾಡುತ್ತಿದ್ದರು. ಕೆಲವು ಕಾಲ ಎಲಿಯೂರಿನಲ್ಲಿ ವಾಸ ಮಾಡುತ್ತಿದ್ದರು. ಇವರ ಬಂಧುಗಳು ಸೂಪರಿಂಟೆಂಡಿಂಗ್ ಇಂಜಿನೀಯರಾಗಿದ್ದ ಬಿ. ಕೃಷ್ಣರಾಯರು. ಇವರು ಹುಲ್ಲು ಬಂಡಿ ಮನೆತನದ ವಸಿಷ್ಟ ಗೋತ್ರದವರು. ಮಂಡ್ಯದ ಡಿ. ವಾಸುದೇವ ರಾಯರು ಕೆಲವು ದಿನ ಇವರ ಜೊತೆಯಲ್ಲಿ ವಕೀಲಿ ವೃತ್ತಿ ನಡೆಸುತ್ತಿದ್ದರು, ವಾಸುದೇವರಾಯರು ಈಚಲೂರು (ಈಸೂರು) ಮನೆತನದ ಆತ್ರೇಯಸ ಗೋತ್ರದವರು.

## ಬಿ. ನರಸಿಂಗರಾಯರು

ವಾಸಸ್ಥಳ–ನಂಜನಗೂಡು. ಪೂರ್ವೀಕರ ಸ್ಥಳ–ಚಿತ್ರದುರ್ಗದ ಸಮೀ ಪದ ಭಟ್ಟರಹಳ್ಳಿ. ಸರ್ಕಾರಿ ನೌಕರಿಯಲ್ಲಿದ್ದು ನಿವೃತ್ತರಾದವರು ಈ ನರಸಿಂಗ ರಾಯರೇ ಹಿರಿಯರು. ಇವರಿಗೆ ನಾಲ್ಕು ಜನ ತಮ್ಮಂದಿರು. ಇವರು ಷಾಷ್ಟಿಕ ಕುಲದ ಸಾಧು ಮನೆತನದ ಜಮದಗ್ನಿ ಗೋತ್ರದವರು. ಮೂರನೆಯ ತಮ್ಮ ಕೆ. ರಾಮಚಂದ್ರರಾಯರು, ಗೌತಮ ಗೋತ್ರದವರಿಗೆ ದತ್ತು. ಈ ನರಸಿಂಗ

ರಾಯರಿಗೆ ಏಕಮಾತ್ರ ಪುತ್ರ ಬಿ ನಾಗೇಶರಾಯರಿಗೆ ಬೆಂಗಳೂರಿನ ನಿವೃತ್ತ ಸರಾಫರೂ, ಪೌರಾಣಿಕರತ್ನ ಜಯತೀರ್ಥಾಚಾರ್ಯರಿಂದ ಪವಮಾನ ಸೂಕ್ತ ಅಭ್ಯಾಸ ಮಾಡಿರುವವರೂ ಆದ ಡಿ. ಸುಬ್ಬರಾಯರು ಮಾವಂದಿರು. ರಾಮಚಂದ್ರರಾಯರ ಮಕ್ಕಳೇ ಕೆ. ಆರ್. ವೆಂಕಟರಾಯರು ನಿವೃತ್ತ ವಿಮಾನ ಕಾರ್ಖಾನೆ ಅಧಿಕಾರಿಗಳು ಇನ್ನೊಬ್ಬ ತಮ್ಮ ಕೆ. ವೆಂಕಟರಾಯರು ಮಂಡಿ ವ್ಯಾಪಾರಿಗಳು ಮತ್ತು ಸ್ಟಾಂಪ್‌ವೆಂಡರು ಆಗಿದ್ದರು. ಇವರ ಮಗ ಕೆ. ರಂಗರಾವ್ ಬಸವನಗುಡಿ ಪುಟ್ಟಣ್ಣ ರಸ್ತೆಯಲ್ಲಿ ವಾಸವಾಗಿದ್ದಾರೆ.

## ಕೆ. ಮಾಧವರಾಯರು

ವಾಸಸ್ಥಳ–ಬೆಂಗಳೂರು. ಪೂರ್ವೀಕರ ಸ್ಥಳ ದೇವರಾಯನ ದುರ್ಗದ ಸಮೀಪದ ಕೊಡಿಗೇನಹಳ್ಳಿ. ಲಕ್ಷ್ಮೀನರಸಪ್ಪನವರು ಇವರ ಪಿತೃವರ್ಯರು. ಸುಪ್ರಸಿದ್ಧ ಇಂಜನೀಯರಿಂಗ್ ಕಂಟ್ರಾಕ್ಟ್‌ದಾರರು. ವಾಟರ್‌ಸಪ್ಲೈ ಮತ್ತು ಒಳಚರಂಡಿ ಕೆಲಸಗಳಲ್ಲಿ ಪ್ರವೀಣರು ದೇವರಾಯನದುರ್ಗದ ರಥೋತ್ಸವ ಕಾಲದಲ್ಲಿ ಅರವಂಟಿಗೆ ಇಡುತ್ತಿದ್ದವರು ಇವರ ಬಂಧುಗಳು–ಬೆಂಗಳೂರು ಚಾಮರಾಜಪೇಟೆ ನಂದಗುಡಿ ಸುಬ್ಬರಾಯರು, ಎನ್. ಎಸ್. ನಾರಾಯಣ ರಾಯರು, ವಿ ಎನ್ ಸುಬ್ಬರಾಯರು, ವಿ ಎನ್. ರಾಜಾರಾಯರು ಮತ್ತು ವಿ. ಎನ್. ರಾಮರಾಯರು ಅನೇಕ ಬಂಧು ಜನರಿಗೆ ಕಂಟ್ರಾಕ್ಟ್ ಕೆಲಸಗಳನ್ನು ಅಭ್ಯಾಸ ಮಾಡಿಸಿದ್ದರು. ಅವರಲ್ಲಿ ಮುಖ್ಯರು–ಕೆ. ನಾಗರಾಜ್, ಕೆ. ನರಸಿಂಹ ರಾವ್, ಕೆ. ವೆಂಕಟೇಶಮೂರ್ತಿ. ಕೆ. ವೆಂಕಟಾಚಲಯ್ಯ, ಎಸ್. ಕೆ. ರಾಮ ರಾವ್ ಮುಂತಾದವರು.

## ಡಿ. ಕೃಷ್ಣಮೂರ್ತಿ

ವಾಸಸ್ಥಳ–ಮದ್ರಾಸ್. ಪೂರ್ವೀಕರ ಸ್ಥಳ ದೊಡ್ಡಬಳ್ಳಾಪುರ. ಇಂಜನೀಯರಿಂಗ್ ಪದವೀಧರರು, ಮದ್ರಾಸು ಮತ್ತು ದಕ್ಷಿಣ ಮರಾಠಾ ರೈಲಿನಲ್ಲಿ ಉನ್ನತಾಧಿಕಾರಿಗಳಾಗಿದ್ದರು. ಇವರು ಮೈಸೂರಿನ ವಿದ್ವನ್ಮಣಿ ದೊಡ್ಡಬಳ್ಳಾಪುರದ ವಾಸುದೇವಾಚಾರ್ಯರ ಸೋದರ ಸಂಬಂಧಿ. ಇವರ ಇಬ್ಬರು ಮಕ್ಕಳಲ್ಲಿ ಒಬ್ಬರು ವೆಂಕಟೇಶಮೂರ್ತಿ, ಕಿರ್ಲೋಸ್ಕರ್ ಕಂಪೆನಿಯಲ್ಲಿ ಉನ್ನತ ಹುದ್ದೆ

ಯಲ್ಲಿದ್ದಾರೆ. ಇನ್ನೊಬ್ಬರು ಡಾ! ಸುಧೀಂದ್ರ ಪ್ರಸಿದ್ಧ ದಂತ ವೈದ್ಯರು. ಶಿಡ್ಲಪುರದ ಗುರುರಾಯರು ಮೊಮ್ಮಂದಿರು. ಪ್ರಸಿದ್ಧ ಇಂಜನೀಯರಾಗಿದ್ದ ಎಸ್. ಲಕ್ಷ್ಮೀನರಸಿಂಹಮೂರ್ತಿ ಮತ್ತು ಈಗಿರುವ ಎಸ್. ಕೃಷ್ಣರಾಯರು ಭಾವಮೈದುನರು. ಬೆಂಗಳೂರು ಜಯಚಾಮರಾಜೇಂದ್ರ ವೃತ್ತಿಶಿಕ್ಷಣ ಶಾಲೆಯ ನಿವೃತ್ತ ಮ್ಯಾನೇಜರೂ, ಸಚ್ಛಾಸ್ತ್ರಾಭ್ಯಾಸ ನಿರತರೂ ಆದ ವೇದಾಂತಿ ಶೇಷಾಚಾರ್ಯರು ಬಿ. ಎ. ಮತ್ತು ದೇಶಪಾಂಡೆ ರಾಜಾರಾಯರು ಸಂಬಂಧಿಗಳು ಚಂಡೂರು ಮನೆತನದ ಹರಿತಸ ಗೋತ್ರದವರು.

## ಎಸ್. ಶ್ರೀನಿವಾಸರಾಯರು

ವಾಸಸ್ಥಳ–ಮೈಸೂರು. ಪೂರ್ವೀಕರ ಸ್ಥಳ ಶಿವನಗೆರೆ ಪಡವೀಧರರು. ವಿದ್ಯಾಭ್ಯಾಸದ ಇಲಾಖೆಯಲ್ಲಿ ಸರ್ಕಲ್ ಇನ್‌ಸ್ಪೆಕ್ಟರ್ ಆಗಿದ್ದವರು. ಇವರ ಬೀಗರು ಮೈಸೂರು ಮಹಾರಾಜರ ಪ್ರೈವೇಟ್ ಸೆಕ್ರೆಟರಿಗಳೂ, ಅನಂತರ ಕೌನ್‌ಸಿಲ್ಲರೂ ಆಗಿದ್ದ ಪಿ. ರಾಘವೇಂದ್ರರಾಯರು. ಶ್ರೀನಿವಾಸರಾಯರು ಆಗಿನ ಕಾಲದಲ್ಲಿ ಜನಾನುರಾಗೀ ಪ್ರಸಿದ್ಧ ಅಧಿಕಾರಿಗಳಾಗಿದ್ದರು. ಪಿ. ಎಸ್. ಪೂರ್ಣಯ್ಯನವರು ಇವರ ಅಳಿಯಂದಿರು. ಪಿ. ಎಸ್. ಪೂರ್ಣಯ್ಯನವರ ಅಳಿಯಂದಿರೇ ಮಂಡ್ಯ ಸಕ್ಕರೆ ಕಾರ್ಖಾನೆಯಲ್ಲಿ ಮುಖ್ಯ ವೈದ್ಯಾಧಿಕಾರಿಗಳಾಗಿದ್ದ ಎಂ. ಕೃಷ್ಣಮೂರ್ತಿರಾಯರು.

## ದೇಶಪಾಂಡೆ ನರಸಿಂಗರಾಯರು

ವಾಸಸ್ಥಳ–ಬೆಂಗಳೂರು. ಇವರೂ ಸಹ ದೇಶಪಾಂಡೆ ವಂಶಕ್ಕೆ ಸೇರಿದವರು. ಆಂಗ್ಲವಿದ್ಯಾಭ್ಯಾಸ ಮಾಡಿ ಫಾರೆಸ್ಟ್ ಇಂಜನೀಯರಿಂಗ್‌ನಲ್ಲಿ ಉತ್ತೀರ್ಣರಾಗಿ ಭೂಪಾಲ್ ಸಂಸ್ಥಾನದಲ್ಲಿ ಛೀಫ್ ಕನ್ಸರ್ವೇಟರ್ ಆಗಿದ್ದು ನಿವೃತ್ತರಾಗಿದ್ದರು. ಇವರು ಭಾರದ್ವಾಜ ಗೋತ್ರೋತ್ಪನ್ನರು. ಭೂಪಾಲ್ ನರಸಿಂಗರಾಯರೆಂದು ಪ್ರಸಿದ್ಧಿ.

## ಡಿ. ಆರ್. ಮಾಧವರಾಯರು

ವಾಸಸ್ಥಳ–ಬೆಂಗಳೂರು. ಇವರು ಬೆಂಗಳೂರು ಸೆಂಟ್ರಲ್ ಕಾಲೇಜಿನಲ್ಲಿಯೂ ಮದ್ರಾಸು ಇಂಜನೀಯರಿಂಗ್ ಕಾಲೇಜ್‌ನಲ್ಲಿಯೂ ವ್ಯಾಸಂಗ

ಮಾಡಿ ಬಿ ಎ., ಬಿ. ಇ. ಪದವೀಧರರಾದವರು ಇವರು ಮೈಸೂರು ಸರ್ಕಾರದ ಸೇವೆಯಲ್ಲಿ ಎಕ್ಸಿಕ್ಯುಟಿವ್ ಇಂಜನೀಯರು ಆಗಿದ್ದರು ಸಮಾಜ ಸೇವೆಯಲ್ಲಿ ನಿರತರಾಗಿರುವ ಎಂ. ಆರ್ ಲಕ್ಷ್ಮಮ್ಮನವರ ಬೀಗರು ದಿವಾನ್ ಕೃಷ್ಣ ಮೂರ್ತಿಗಳಿಗೂ ಸಂಬಂಧಿಗಳು ಭಾರಧ್ವಾಜ ಗೋತ್ರೋತ್ಪನ್ನರು.

## ಡಾ. ಡಿ. ಎಲ್ ಎನ್. ಮೂರ್ತಿ

ವಾಸಸ್ಥಳ-ಬೆಂಗಳೂರು. ವೈದ್ಯವಿದ್ಯಾಪದವೀಧರರು. ವಿದೇಶ ವ್ಯಾಸಂಗ, ಮನೋ ವಿಜ್ಞಾನ ಭಾಗದಲ್ಲಿ ಪರಿಣತರು. ಬೆಂಗಳೂರು ಹೊಸ ಮಾನಸಿಕ ಆಸ್ಪತ್ರೆಗೆ ಮುಖ್ಯಾಧಿಕಾರಿಗಳಾಗಿದ್ದರು. ಆತ್ರೇಯಸಗೋತ್ರ, ದಿವಂಗತ ಡಾ। ಪಿ. ಕೃಷ್ಣರಾಯರ ಅಳಿಯಂದಿರು

## ಆಲತ್ತೂರು ಕೃಷ್ಣರಾಯರು

ವಾಸಸ್ಥಳ-ಮೈಸೂರು. ಇವರ ಹಿರಿಯರು ರಾಮರಾಯರು. ಮುಮ್ಮಡಿ ಕೃಷ್ಣರಾಜಒಡೆಯರ ಕಾಲದಲ್ಲಿ ಮೈಸೂರು ಅರಮನೆಯ ಬಾಡಿಗಾರ್ಡ್ ಭಕ್ಷಿಗಳಾಗಿ ಸುಪ್ರಸಿದ್ಧರಾಗಿದ್ದರು ಶ್ರೀಮಂತ ಭೂಒಡೆಯರು. ಮೈಸೂರಿಗೆ ೧೨ ಮೈಲಿ ದೂರದಲ್ಲಿರುವ ನಂಜನಗೂಡು ತಾಲ್ಲೂಕು ಆಲತ್ತೂರು ಮತ್ತು ಹದಿನಾರು ಹೊಸಕೋಟೆ ಗ್ರಾಮಗಳಲ್ಲಿ ಕಪಿಲಾ ನದಿ ಕಾಲುವೆ ಆಶ್ರಯದಲ್ಲಿ ವಿಪುಲವಾದ ತೋಟ ಗದ್ದೆಗಳಿದ್ದವರು, ಬಹುಜನ ಬಡ ಬಗ್ಗರಿಗೂ ವೈದಿಕ ಬ್ರಾಹ್ಮಣರಿಗೂ, ವಿದ್ಯಾರ್ಥಿಗಳಿಗೂ ಆಶ್ರಯದಾತರಾಗಿದ್ದರು. ಇವರು ದೊಡ್ಡಬಳ್ಳಾಪುರದ ದೇಶಪಾಂಡೆಯವರ ಸಂಬಂಧಿಗಳು. ಇವರ ವಂಶದವರು ಬೆಂಗಳೂರು ಮತ್ತು ಮೈಸೂರುಗಳಲ್ಲಿದ್ದಾರೆ. ಆತ್ರೇಯಸ ಗೋತ್ರದವರು. ಇವರ ತಮ್ಮ ವೆಂಕಟರಾಯರು ಗೌಡಗೆರಿ ಗೋಪಾಲಕೃಷ್ಣಾಚಾರ್ಯರ ಮಾವಂದಿರು.

## ಚಿಂತಲಪಲ್ಲಿ ವೆಂಕಟರಾಯರು

ವಾಸಸ್ಥಳ-ಬೆಂಗಳೂರು ಮತ್ತು ಮೈಸೂರು. ವಿದ್ಯಾಭ್ಯಾಸ-ಸಂಗೀತದಲ್ಲಿ ಹೆಚ್ಚು ಪರಿಶ್ರಮ. ಪೂರ್ವೀಕರ ವಾಸಸ್ಥಳ ಗೋರಿಬಿದನೂರು ಸಮೀ

ಪದ ಹುಣಿಸೆಹಳ್ಳಿ ಅಥವಾ ಚಿಂತಲಪಲ್ಲಿ. ಈ ಗ್ರಾಮವನ್ನು ಶ್ರೀವ್ಯಾಸ ರಾಜರು ತಮ್ಮ ಸಂಬಂಧಿಗಳಿಗೆ ಉಂಬಳಿಯಾಗಿ ಕೊಟ್ಟಿದ್ದರು ಇವರು ಆಳಿದ ಮಹಾ ಸ್ವಾಮಿಗಳ ಆಸ್ಥಾನದಲ್ಲಿ ಸಂಗೀತ ವಿದ್ವಾಂಸರಾಗಿ ಅನೇಕ ಖಿಲ್ಲತ್ತು ಗಳನ್ನೂ ಪ್ರಶಸ್ತಿಗಳನ್ನೂ ಸಂಪಾದಿಸಿದ್ದರು ಮಹಾಸಭೆಗಳಲ್ಲಿ ಸಂಗೀತ ಕಚೇರಿಗಳನ್ನು ಉತ್ತಮವಾಗಿ ನಿರ್ವಹಿಸುತ್ತಿದ್ದರು.

## ಮಾವಿನಕಾಯಿಹಳ್ಳಿ ವೆಂಕಟರಾಯರು

ವಾಸಸ್ಥಳ–ಬೆಂಗಳೂರು, ಮಂಡ್ಯ ಮತ್ತು ಮೈಸೂರು. ಪೂರ್ವಿಕರ ಸ್ಥಳ ಗೌಡಗೆರೆ ಸಮೀಪ ಉತ್ತರಪಿನಾಕಿನೀ ತೀರದಲ್ಲಿರುವ ಮಾವಿನಕಾಯಿ ಹಳ್ಳಿ. ಸರ್ಕಾರದ ಸೇವೆಯಲ್ಲಿದ್ದು ನಿವೃತ್ತರಾಗಿದ್ದರು. ಇವರ ಹಿರಿಯ ಮಕ್ಕಳು ಡಾ| ಎಂ. ಕೃಷ್ಣಮೂರ್ತಿರಾಯರು, ಮಂಡ್ಯ ಸಕ್ಕರೆ ಕಂಪನಿಯಲ್ಲಿ ಮುಖ್ಯ ವೈದ್ಯಾಧಿಕಾರಿಗಳಾಗಿದ್ದರು. ಇವರ ಮಕ್ಕಳು ಎಂ. ಕೆ. ಶ್ರೀನಿವಾಸ ಮೂರ್ತಿ ಮತ್ತು ಎಂ ಕೆ ವಾಮನಮೂರ್ತಿ ವಿದೇಶಗಳಲ್ಲಿ ಉನ್ನತ ಹುದ್ದೆ ಗಳಲ್ಲಿದ್ದಾರೆ. ಮಾವಿನಕಾಯಿಹಳ್ಳಿ ಕಾಶಿ ಅನಂತ ಪದ್ಮನಾಭಾಚಾರ್ಯರು ಇವರ ಜ್ಞಾತಿ ಬಂಧುಗಳು. ಶ್ರೇಷ್ಠದರ್ಜೆಯ ವಿದ್ವಾಂಸರು ಮತ್ತು ಪುರೋಹಿತರು; ಬಹುಜನ ಶಿಷ್ಯರಿಗೆ ಪೌರೋಹಿತ್ಯ ಪಾಠ ಹೇಳುತ್ತಿದ್ದಾರೆ. ಶ್ರೀವತ್ಸ ಗೋತ್ರ ದವರು ಗೌಡಗೆರೆಯಲ್ಲಿರುವ ರಾಘವೇಂದ್ರಸ್ವಾಮಿಗಳ ರಥೋತ್ಸವಾದಿಕಾರ್ಯ ಗಳಲ್ಲಿ ಮುಖ್ಯ ಪೌರೋಹಿತ್ಯವನ್ನು ವಹಿಸಿ ಕಾರ್ಯ ನಿರ್ವಹಣೆ ಮಾಡು ತ್ತಿದ್ದಾರೆ. ಗೌಡಗೆರೆ ಆಚಾರ್ಯರ ಸಂಬಂಧಿಗಳು.

## ಟಿ. ಪಿ. ಕೃಷ್ಣಾಚಾರ್ಯರು

ವಾಸಸ್ಥಳ–ತುಮಕೂರು. ವಿದ್ಯಾಭ್ಯಾಸ ಬೆಂಗಳೂರು ಸೆಂಟ್ರಲ್ ಕಾಲೇಜಿನಲ್ಲಿ. ಭೂಗರ್ಭಶಾಸ್ತ್ರದಲ್ಲಿ ಎಂ.ಎಸ್ಸಿ ಪದವೀಧರರು. ಮೈಸೂರು ಸರ್ಕಾರದ ಸೇವೆಯಲ್ಲಿ ಭೂಗರ್ಭ ಇಲಾಖೆಯ ಮುಖ್ಯಸ್ಥರಾಗಿದ್ದು ನಿವೃತ್ತ ರಾಗಿದ್ದರು. ಪ್ರಸಿದ್ಧವಾದ ಪಲ್ಲಕ್ಕಿ ಮನೆತನಕ್ಕೆ ಸೇರಿದವರು. ಇವರು ಪೌರಾಣಿಕರತ್ನ ಹೊಳವನಹಳ್ಳಿ ಶೇಷಾಚಾರ್ಯರ ಸೋದರ ಅಳಿಯ. ಗೌತಮ ಗೋತ್ರದವರು.

## ಕಲ್ಯಾಣಿ ಆನಂದತೀರ್ಥಾಚಾರ್ಯರು

ವಾಸಸ್ಥಳ—ಬೆಂಗಳೂರು. ಕಲ್ಯಾಣಿ ಶಾಮಾಚಾರ್ಯರ ಮಕ್ಕಳು. ಇವರು ಪ್ರಸಿದ್ಧ ವಾಣಿಜ್ಯೋದ್ಯಮಿಗಳು. ಎನ್. ಎ. ಕಲ್ಯಾಣಿ ಎಂದೂ ವ್ಯವಹಾರ ನಾಮ. ಬರಗಾಲದಲ್ಲಿ ಕಲ್ಯಾಣಿಯನ್ನು ತೋಡಿಸಿ ಬಡಬಗ್ಗರಿಗೆ ನೀರನ್ನು ಒದಗಿಸಿದ್ದುದರಿಂದ ಕಲ್ಯಾಣಿ ಎಂಬ ಉಪನಾಮವು ಇದೆ. ನರಸಿಂಹ ರಾಜಾ ಕಾಲೋನಿ ದಕ್ಷಿಣ ಭಾಗದಲ್ಲಿ ವಿಶಾಲವಾದ ತೋಟವನ್ನು ಸಂಪಾದಿಸಿ ಶ್ರೀರಾಘವೇಂದ್ರಸ್ವಾಮಿಗಳ ಬೃಂದಾವನವನ್ನು ನಿರ್ಮಿಸಿದ್ದಾರೆ. ಸುತ್ತ ಮುತ್ತಲೂ ಅನೇಕ ಕೈಗಾರಿಕೆ ಕಾರ್ಖಾನೆಗಳಿವೆ. ವ್ಯವಹಾರಿಕವಾಗಿ ಇದಕ್ಕೆ ಕಲ್ಯಾಣಿ ತೋಟವೆಂದು ಹೆಸರು. ಹರಿತಸ ಗೋತ್ರದವರು.

## ಎನ್. ಅನಂತಾಚಾರ್ಯರು

ವಾಸಸ್ಥಳ—ಬೆಂಗಳೂರು. ವಿದ್ಯಾಭ್ಯಾಸ ಮೈಸೂರು ಮಹಾರಾಜರ ಕಾಲೇಜಿನಲ್ಲಿ ಎಂ.ಎ. ಪದವೀಧರರು, ಸ್ವಯಂ ಉದ್ಯೋಗಶೀಲರು. ವಿದ್ಯಾರ್ಥಿ ಗಳ ಅನುಕೂಲಕ್ಕಾಗಿ ಆಚಾರ್ಯ ಪಾಠಶಾಲಾ ಕಾಲೇಜನ್ನು ಸ್ಥಾಪಿಸಿ, ಅಭಿ ವೃದ್ಧಿ ಪಡಿಸಿದವರು. ಇವರು ವೇದಾಂತಿ ಮನೆತನಕ್ಕೆ ಸೇರಿದವರು. ಗೌತಮ ಗೋತ್ರದವರು. ಮೈಸೂರು ಪುರೋಹಿತ ನರಸಿಂಹಮೂರ್ತಿ ಆಚಾರ್ಯರ ಮಕ್ಕಳು. ಆಮಲ್ದಾರ್ ದೇಶಪಾಂಡೆ ನರಸಿಂಗರಾಯರು, ಇವರ ಮಾವಂದಿರು. ಇವರು ದೊಡ್ಡ ಕುಟುಂಬಿಗಳು. ಮಕ್ಕಳೆಲ್ಲರೂ ವಿದ್ಯಾ ವಂತರಾಗಿ ಉದ್ಯೋಗಗಳಲ್ಲಿ ವಿರಾಜಮಾನರಾಗಿದ್ದಾರೆ.

## ಟಿ ಎಸ್. ಅನಂತಮೂರ್ತಿ

ವಾಸಸ್ಥಳ—ಬೆಂಗಳೂರು ಬೆಂಗಳೂರು ಸೆಂಟ್ರಲ್ ಕಾಲೇಜು ಮತ್ತು ಪೂನಾ ಲಾ ಕಾಲೇಜಿನಲ್ಲಿ ವ್ಯಾಸಂಗ ಮಾಡಿದ ಪದವೀಧರರು. ಮೈಸೂರು ಸರ್ಕಾರದ ನ್ಯಾಯಾಂಗ ಇಲಾಖೆಯಲ್ಲಿ ಸೇವೆ ಸಲ್ಲಿಸಿ ಜಿಲ್ಲಾ ಜಡ್ಜಿಗಳಾಗಿ ನಿವೃತ್ತರಾದವರು. ಇವರು ಪ್ರಸಿದ್ಧವಾದ ತೇಕಹಳ್ಳಿ ಮನೆತನಕ್ಕೆ ಸೇರಿದವರು. ಇವರು ಸಾಧು ಸಂತರ ಸಹವಾಸದಲ್ಲಿ ನಿರತರಾಗಿದ್ದರು. ಬೊಂಬಾಯಿ ಎಲ್. ಎಲ್. ಬಿ. ಪರೀಕ್ಷೆಯಲ್ಲಿ ಪ್ರಥಮ ಸ್ಥಾನ ಗಳಿಸಿದ್ದವರು.

## ಚೀಯೋಡು ರಾಘವೇಂದ್ರಾಚಾರ್ಯರು

ವಾಸಸ್ಥಳ–ಅನಂತಪುರ. ಆಂಗ್ಲ ವಿದ್ಯಾಭ್ಯಾಸವಾಗಿತ್ತು. ಮದ್ರಾಸು ಸರ್ಕಾರದಲ್ಲಿ ಡೆಪ್ಯುಟಿ ಕಲೆಕ್ಟರು ಆಗಿ ನಿವೃತ್ತರಾಗಿದ್ದರು. ಸುಪ್ರಸಿದ್ಧ ಪಂಡಿತ ರಾಗಿದ್ದ ಚೀಯೋಡು ವಾಸುದೇವಾಚಾರ್ಯರ ಮಕ್ಕಳು. ಬಹುಜನ ಶಿಷ್ಯರಿಗೆ ಶ್ರೀಮನ್ನ್ಯಾಯಸುಧಾದಿ ಗ್ರಂಥಗಳನ್ನು ಬೋಧಿಸಿದ್ದವರು. ಭಾರಧ್ವಾಜ ಗೋತ್ರೋತ್ಪನ್ನರು. ಬೆಂಗಳೂರು ನರಸಿಂಹರಾಜಾಕಾಲೋನಿಯಲ್ಲಿರುವ ಸಿ. ವಾಸುದೇವಾಚಾರ್ಯರ ಪಿತಾಮಹರು.

## ತಿರುಪತ್ತೂರು ರಾಘವೇಂದ್ರಾಚಾರ್ಯರು

ವಾಸಸ್ಥಳ–ತಿರುಪತ್ತೂರು ಸುಪ್ರಸಿದ್ಧ ನ್ಯಾಯವಾದಿಗಳು. ಸಂಸ್ಕೃತ ಭಾಷಾ ಪಂಡಿತರೂ ಆಗಿದ್ದರು, ಇವರು ಬೆಂಗಳೂರಿನ ರಾವ್ ಬಹದೂರ್ ಬಿ. ವೆಂಕಟೇಶಾಚಾರ್ಯರ ಜ್ಞಾತಿ ಸಹೋದರರು. ಜನೋಪಕಾರಿ ಕಾರ್ಯ ಗಳಲ್ಲಿ ನಿರತರಾಗಿದ್ದರು. ಆತ್ರೇಯಸ ಗೋತ್ರದವರು. ಇವರ ಪಿತಾಮಹರು ಆರ್ಯಾ ಭಾರತವನ್ನು ರಚಿಸಿರುವ ಸರಸಕವಿ ಸಾರ್ವಭೌಮ ಅಚ್ಚಣ್ಣಾ ಚಾರ್ಯರು.

## ಡಿ. ಎಸ್. ಕೃಷ್ಣರಾಯರು

ವಾಸಸ್ಥಳ–ಈರೋಡು. ಆಂಗ್ಲವಿದ್ಯಾಭ್ಯಾಸ ಮತ್ತು ವಕೀಲ್ ಪರೀಕ್ಷೆ ಮಾಡಿ ಈರೋಡಿನಲ್ಲಿ ಪ್ರಮುಖ ನ್ಯಾಯವಾದಿಗಳಾಗಿದ್ದರು. ಸಂಸ್ಕೃತ ಭಾಷಾ ಪರಿಚಯವೂ ಇತ್ತು. ಸದಾಚಾರಿಗಳಾಗಿ ದೇವ ಬ್ರಾಹ್ಮಣ ಆರಾಧಕ ರಾಗಿದ್ದರು.

## ಮೇಜರ್ ಎಸ್. ನಾರಾಯಣರಾಯರು

ವಾಸಸ್ಥಳ–ಬೆಂಗಳೂರು. ಪೂರ್ವೀಕರ ಸ್ಥಳ–ಮಾಲೂರು ಸಮೀಪದ ಶಿವಾರಿಪಟ್ಟಣ ವಿದ್ಯಾಭ್ಯಾಸ–ಬೆಂಗಳೂರು ಸೆಂಟ್ರಲ್ ಕಾಲೇಜು ಮತ್ತು ಮದ್ರಾಸು ಮೆಡಿಕಲ್ ಕಾಲೇಜು. ಬಿ. ಎ , ಎಂ. ಬಿ. ಬಿ. ಎಸ್. ಪರೀಕ್ಷೆ ಮಾಡಿದ್ದರು. ಮೈಸೂರು ಸರ್ಕಾರದ ಸೇವೆಯಲ್ಲಿದ್ದರು. ಮೊದಲನೆಯ

ಮಹಾ ಯುದ್ಧದಲ್ಲಿ ಈಜಿಪ್ಟ್‌ನಲ್ಲಿ ಸೇನಾ ಡಾಕ್ಟರಾಗಿ ಭಾಗವಹಿಸಿದ್ದವರು ನಿವೃತ್ತಿನಂತರ ಸಚ್ಛಾಸ್ತ್ರಾಭ್ಯಾಸದಲ್ಲಿ ನಿರತರಾಗಿದ್ದರು. ಶ್ರೀವತ್ಸಗೋತ್ರದವರು. ಇವರ ಮಕ್ಕಳು ಉನ್ನತ ಹುದ್ದೆಗಳಲ್ಲಿದ್ದಾರೆ. ವಿ. ಶೇಷಾಚಾರ್ಯರ ಸಂಬಂಧಿಗಳು.

## ನೆಲ್ಲಿಕಾಯಿ ವೆಂಕಟರಾಯರು

ವಾಸಸ್ಥಳ–ಮಂಗಳೂರು. ಶ್ರೀಮಂತ ಕುಟುಂಬದವರು. ರಾಘವೇಂದ್ರ ಕವಿಯು ಸಾರಸ್ವತ ಪರಿಣಯದಲ್ಲಿ ಸೂಚಿಸಿರುವ ನೆಲ್ಲಿಕಾಯಿ ತಿಮ್ಮಪ್ಪನವರ ವಂಶದವರು. ಆ ತಿಮ್ಮಪ್ಪನವರು ಹಡಗಿನ ವ್ಯಾಪಾರಿಗಳೂ ಮತ್ತು ರತ್ನಪಡಿ ವ್ಯಾಪಾರಿಗಳೂ ಆಗಿದ್ದರು.

## ಡಾ. ಡಿ. ಹನುಮಂತರಾಯರು

ವಾಸಸ್ಥಳ–ಧಾರಾಪುರ. ವೈದ್ಯ ವಿದ್ಯಾಭ್ಯಾಸ ಮಾಡಿ ಪದವಿ ಪಡೆದು ಧಾರಾಪುರದಲ್ಲಿ ಖಾಸಗಿ ಆಸ್ಪತ್ರೆಯನ್ನು ತೆರೆದು, ಬಹುಜನ ರೋಗಿಗಳಿಗೆ ಉಪಕಾರ ಮಾಡಿದವರು. ಸಂಸ್ಕೃತದಲ್ಲಿ ಎಂ. ಎ. ಪರೀಕ್ಷೆ ಮಾಡಿದ್ದರು. ಆಚಾರಶೀಲರು, ಉದಾರಿಗಳು, ನಾನಾ ರೀತಿಯಲ್ಲಿ ಜನಸೇವೆ ಮಾಡಿದವರು.

## ಡಿ. ರಾಜಾರಾಯರು

ವಾಸಸ್ಥಳ–ಕೊಯಮುತ್ತೂರು ಸಮೀಪದ ಅಮರಾವತೀ ನದಿತೀರದ ಧಾರಾಪುರ ಇವರು ಬಿ. ಎ., ಬಿ. ಎಲ್. ಪರೀಕ್ಷೆ ಮಾಡಿ ಮದ್ರಾಸು ಸರ್ಕಾರದ ಸೇವೆಯಲ್ಲಿದ್ದು ಜಿಲ್ಲಾ ಜಡ್ಜಿಗಳಾಗಿ ನಿವೃತ್ತರಾದವರು. ಮೈಸೂರು ಸರ್ಕಾರದ ರೆವಿನ್ಯೂ ಕಮೀಷನರಾಗಿದ್ದು ನಿವೃತ್ತರಾಗಿರುವ ನಾಗವರದ ಮಾಧವರಾಯರ ಸಂಬಂಧಿಗಳು. ಗೌತಮ ಗೋತ್ರದವರು

## ಎನ್. ವಿ. ಶ್ರೀನಿವಾಸಮೂರ್ತಿ

ವಾಸಸ್ಥಳ–ಬೆಂಗಳೂರು. ಇವರ ಪಿತೃವರ್ಯರು, ಪ್ರಸಿದ್ಧ ಪಂಡಿತರಾದ, ಮೈಸೂರು ಮಹಾರಾಜರ ಸಂಸ್ಕೃತ ಮಹಾಪಾಠಶಾಲೆಯಲ್ಲಿ ಅಧ್ಯಾಪಕ

ರಾಗಿದ್ದ ನಾಮಗೊಂಡಲು ವಾಸುದೇವಾಚಾರ್ಯರು ವಿದ್ಯಾಭ್ಯಾಸ ಬೆಂಗಳೂರು ಸೆಂಟ್ರಲ್ ಕಾಲೇಜು. ಮದ್ರಾಸು ವಿಶ್ವವಿದ್ಯಾಲಯದ ಬಿ. ಎ. ಪರೀಕ್ಷೆಯಲ್ಲಿ ರ್‍ಯಾಂಕ್ ಪಡೆದವರು. ಹಾಗೆಯೇ ಪೂನಾ ಇಂಜನೀಯರಿಂಗ್ ಕಾಲೇಜಿನಲ್ಲಿ ವ್ಯಾಸಂಗ ಮಾಡಿ ಸಿವಿಲ್ ಇಂಜನೀಯರಿಂಗ್‌ನಲ್ಲಿ ಪ್ರಥಮ ರ್‍ಯಾಂಕ್ ಪಡೆದವರು. ಬೊಂಬಾಯಿ ಸರ್ಕಾರದಲ್ಲಿ ಸೆ ವೆ ಸಲ್ಲಿಸಿ ಛೀಫ್ ಇಂಜನೀಯರ್ ಆಗಿ ನಿವೃತ್ತರಾಗಿದ್ದರು. ಪೌರಾಣಿಕರತ್ನ ಹೊಳವನಹಳ್ಳಿ ಶೇಷಾಚಾರ್ಯರ ಸೋದರಳಿಯ ಮತ್ತು ಅಳಿಯ ಇಂಡಿಯನ್ ಟೆಲಿಫೋನ್ ಇಂಡಿಸ್ಟ್ರೀಸ್‌ನ ಶ್ರೇಷ್ಠಾಧಿಕಾರಿಗಳಾದ ಸಿ. ಎಸ್. ಎಸ್. ರಾಯರ ಮಾವಂದಿರು.

## ಈಗ ವಿರಾಜಮಾನರಾಗಿರುವವರು

### ರಾಜಾ ವೆಂಕಟರಾಘವೇಂದ್ರಾಚಾರ್ಯರು

(ಶ್ರೀಸುಜಯೀಂದ್ರತೀರ್ಥರು)

(ಈಗಿನ ಶ್ರೀರಾಘವೇಂದ್ರಸ್ವಾಮಿಗಳ ಮಠದ ಪೀಠಾಧಿಪತಿಗಳು)

ವಾಸಸ್ಥಳ–ನಂಜನಗೂಡು. ವಿದ್ಯಾಭ್ಯಾಸ ಹಿರಿಯರಲ್ಲಿ ಮತ್ತು ಅನೇಕ ಪ್ರಸಿದ್ಧ ವಿದ್ವಾಂಸರಲ್ಲಿ. ನ್ಯಾಯ ವೇದಾಂತಾದಿ ಶಾಸ್ತ್ರಗಳಲ್ಲಿ ಅಪಾರ ಪಾಂಡಿತ್ಯ, ವ್ಯಾಕ್ಯಾರ್ಥ ಚತುರರು. ಮಠದ ದಿವಾನರಾಗಿ ಮಂತ್ರಾಲಯದಲ್ಲಿ ಲೌಕಿಕ ವೈದಿಕ ಕಾರ್ಯಗಳನ್ನು ಚೆನ್ನಾಗಿ ನಿರ್ವಹಿಸುತ್ತಿದ್ದರು. ಇವರು ಶ್ರೀಸುಯಮೀಂದ್ರತೀರ್ಥರಿಂದ ಸಂನ್ಯಾಸವನ್ನು ಪಡೆದು ಶ್ರೀಸುಜಯೀಂದ್ರತೀರ್ಥರೆಂಬ ಯತಿನಾಮದಿಂದ ಪೀಠಾಧಿಪತ್ಯದಲ್ಲಿ ವಿರಾಜಮಾನರಾಗಿದ್ದಾರೆ. ಇವರು ದಕ್ಷ ಆಡಳಿತಗಾರರು. ಮಠದ ಸರ್ವತೋಮುಖವಾದ ಅಭಿವೃದ್ಧಿಗೆ ಕಾರಣರಾಗಿದ್ದಾರೆ. ವಿದ್ವಾಂಸರಿಗೂ ವಿದ್ಯಾಭ್ಯಾಸಕ್ಕೂ ಪ್ರೋತ್ಸಾಹ ಕೊಡುತ್ತಿದ್ದಾರೆ. ವಿದ್ವತ್ಸಭೆಯನ್ನು ವರ್ಷಕ್ಕೆ ಎರಡು ಸಲ ಏರ್ಪಡಿಸಿದ್ದಾರೆ. ಶ್ರೀಗುರುಸಾರ್ವಭೌಮ ವಿದ್ಯಾಪೀಠವನ್ನು ಅಭಿವೃದ್ಧಿಪಡಿಸಿ ದಕ್ಷ ಪಂಡಿತರನ್ನು ನಿಯಮಿಸಿ ಬಹು ಸಂಖ್ಯಾಕ ವಿದ್ಯಾರ್ಥಿಗಳಿಗೆ ಅಶನ ವಸತಿಗಳಿಗೆ ಉತ್ಕೃಷ್ಟವಾದ ಏರ್ಪಾಟು ಮಾಡಿದ್ದಾರೆ. ಭಕ್ತಾದಿಗಳಿಗೆ ಅನೇಕ ಸೌಲಭ್ಯಗಳನ್ನು ಕಲ್ಪಿಸಿದ್ದಾರೆ. ವಸತಿ ಗೃಹಗಳು, ನಲ್ಲಿನೀರು, ಒಳಚರಂಡಿ ಮುಂತಾದ

ಆಧುನಿಕ ಸೌಕರ್ಯಗಳಿಂದ ಕೂಡಿ ನಿರ್ಮಿತವಾಗಿದೆ. ಸಾವಿರಾರು ಜನ ಭಕ್ತರಿಗೆ ಪ್ರತಿದಿನವೂ ಭೋಜನದ ವ್ಯವಸ್ಥೆ ಇದೆ. ಇವರು ಬೀಗಮುದ್ರೆ ಮನೆತನದ ಗೌತಮ ಗೋತ್ರಕ್ಕೆ ಸೇರಿದವರು ಇವರ ಪೂರ್ವಾಶ್ರಮದ ಕಿರಿಯ ಮಕ್ಕಳೇ ಸುಪ್ರಸಿದ್ಧ ಪಂಡಿತರೂ, ದಕ್ಷ ಆಡಳಿತಗಾರರೂ, ಗುರುಸಾರ್ವಭೌಮ ವಿದ್ಯಾಪೀಠದ ಮುಖ್ಯಾಧಿಕಾರಿಗಳೂ ಮಠದ ದಿವಾನರೂ, ಆದ ರಾಜಾ ಗಿರಿಯಾಚಾರ್ಯರು. (ಸುಜ್ಞಾನೇಂದ್ರಾಚಾರ್ಯರು.)

## ಹೆಬ್ಬಣಿ ಜಯರಾಜಾಚಾರ್ಯರು
## (ಶ್ರೀವಿಜಯನಿಧಿತೀರ್ಥರು)
## (ಈಗಿನ ಶ್ರೀಶ್ರೀಪಾದರಾಜಮಠದ ಪೀಠಾಧಿಪತಿಗಳು)

ವಾಸಸ್ಥಳ–ಮುಳಬಾಗಲು. ವಿದ್ಯಾಭ್ಯಾಸ ತಮ್ಮ ಹಿರಿಯರಾದ ಹೆಬ್ಬಣಿ ದ್ವೈಪಾಯನಾಚಾರ್ಯರಲ್ಲಿ. ಆಂಗ್ಲವಿದ್ಯೆಯಲ್ಲಿ ಪದವೀಧರರು ವ್ಯಾಸತ್ರಯಾದಿ ಉದ್ಗ್ರಂಥಗಳನ್ನು ನಿರಾಯಾಸವಾಗಿ ಪುಸ್ತಕ ಸಹಾಯವಿಲ್ಲದೆ ಛಾತ್ರವರ್ಗಕ್ಕೆ ಬೋಧಿಸುವ ಸಾಮರ್ಥ್ಯವುಳ್ಳವರು. ಮಿತಭಾಷಿಗಳು. ದಿಗ್ದಂತಿ ಪಂಡಿತರು ಏಕಾಂತ ಪ್ರಿಯರು ಹಸನ್ಮುಖಿಗಳು. ಸದಾ ಸಚ್ಛಾಸ್ತ್ರಾಭ್ಯಾಸ ನಿರತರು ಆಯುರ್ವೇದಪರಿಣಿತರು, ಸೌಜನ್ಯಶೀಲರು, ವ್ಯವಹಾರ ಕುಶಲರು, ಇವರು ತಮ್ಮ ಹಿರಿಯ ವಯಸ್ಸಿನಲ್ಲಿ ಪೂರ್ವಾಶ್ರಮದ ಸೋದರಮಾವಂದಿರೂ ಮತ್ತು ಮಾವಂದಿರೂ ಆದ ಶ್ರೀಸತ್ಯನಿಧಿತೀರ್ಥರಿಂದ ಸಂನ್ಯಾಸಾಶ್ರಮ ಸ್ವೀಕರಿಸಿ ಶ್ರೀವಿಜಯನಿಧಿತೀರ್ಥರೆಂಬ ಯತಿನಾಮದಿಂದ ಶ್ರೀಶ್ರೀಪಾದರಾಜರಮಠದಲ್ಲಿ ವಿರಾಜಮಾನರಾಗಿದ್ದಾರೆ ಇವರು ಷಾಷ್ಟಿಕಕುಲದ ಆತ್ರೇಯಸ ಗೋತ್ರಕ್ಕೆ ಸೇರಿದವರು. ಇವರ ಅಣ್ಣನವರು ಹೆಬ್ಬಣಿ ಗೋಪೀನಾಥಾಚಾರ್ಯರು

## ರಾಜಾ ಎಸ್. ಗುರುರಾಜಾಚಾರ್ಯರು

ವಾಸಸ್ಥಳ–ನಂಜನಗೂಡು. ಇವರು ಸುಯಮೀಂದ್ರತೀರ್ಥರ ಪೂರ್ವಾಶ್ರಮದ ದ್ವಿತೀಯ ಪುತ್ರರು ಮದ್ರಾಸು ವಿಶ್ವವಿದ್ಯಾಲಯದ ಶಿರೋಮಣಿ ಪರೀಕ್ಷೆಯಲ್ಲಿ ನ್ಯಾಯ, ವೇದಾಂತ, ಸಾಹಿತ್ಯ ಶಾಸ್ತ್ರಗಳಲ್ಲಿ ಶ್ರೇಷ್ಠದರ್ಜೆಯಲ್ಲಿ ಉತ್ತೀರ್ಣರಾಗಿ ಬಹುಮಾನಗಳನ್ನು ಗಳಿಸಿದ್ದಾರೆ. ಸರಸ್ವತೀಕಂಠಾ

ಭರಣ, ಕವಿತಿಲಕ, ವಿದ್ಯಾವಾಚಸ್ಪತಿ ಮುಂತಾದ ಅನೇಕ ಉನ್ನತ ಬಿರುದುಗಳನ್ನು ಸಂಪಾದಿಸಿದ್ದಾರೆ. ನಂಜನಗೂಡಿನಲ್ಲಿ "ಪರಿಮಳಸಂಶೋಧನ ಮತ್ತು ಪ್ರಕಾಶನ ಮಂದಿರ"ವನ್ನು ಸ್ಥಾಪಿಸಿ ಅದರ ನಿರ್ದೇಶಕರಾಗಿದ್ದಾರೆ. ಅನೇಕ ಪ್ರಾಚೀನ ಸಂಸ್ಕೃತ ಹಸ್ತಲಿಖಿತ ಗ್ರಂಥಗಳನ್ನು ಪರಿಶೋಧಿಸಿ, ಮುದ್ರಿಸಿ, ಪ್ರಕಾಶಪಡಿಸಿರುವ ಘನ ವಿದ್ವಾಂಸರು. ಕೆಲವು ಸ್ವತಂತ್ರಗ್ರಂಥಗಳನ್ನೂ ರಚಿಸಿದ್ದಾರೆ. ಇವರ ವಿದ್ವತ್ತಿಗೆ ಮೆಚ್ಚಿ ಮೈಸೂರು ಸರ್ಕಾರದವರು ಐದುನೂರು ರೂಪಾಯಿ ಗೌರವ ಮಾಶಾಸನವನ್ನು ಕೊಟ್ಟಿದ್ದಾರೆ. ಇವರು ಪಾಷ್ಟಿಕಕುಲದ ಬೀಗಮುದ್ರೆ ಮನೆತನದ ಗೌತಮ ಗೋತ್ರದವರು. ಮದ್ರಾಸು ವಿಶ್ವವಿದ್ಯಾಲಯದ ಸಂಸ್ಕೃತ ಶಿರೋಮಣಿ ಪರೀಕ್ಷೆಗಳಿಗೆ ಪರೀಕ್ಷಕರಾಗಿದ್ದಾರೆ. ಶ್ರೀರಾಯರ ಸಾಕ್ಷತ್ಪರಂಪರೆಯವರು. ಅತ್ಯದ್ಭುತ ಕವಿತಾ ಶಕ್ತಿವುಳ್ಳವರು.

## ರಾಜಾ ಗಿರಿಯಾಚಾರ್ಯರು

ವಾಸಸ್ಥಳ–ಮಂತ್ರಾಲಯ. ಇವರು ಶ್ರೀರಾಘವೇಂದ್ರಸ್ವಾಮಿಗಳ ಮಠದ ಪೀಠಾಧಿಪತಿಗಳಾಗಿರುವ ಶ್ರೀಸುಜಯೀಂದ್ರತೀರ್ಥರ ಪೂರ್ವಾಶ್ರಮದ ಚತುರ್ಥ ಪುತ್ರರು, ಇವರು ತಮ್ಮ ಹಿರಿಯರಲ್ಲಿಯೇ ವೇದಾಂತ ವ್ಯಾಸಂಗ, ತರ್ಕ ಮತ್ತು ಪೂರ್ವಮೀಮಾಂಸಾ ಶಾಸ್ತ್ರಗಳನ್ನು ಪರಿಣತರಲ್ಲಿ ವ್ಯಾಸಂಗ ಮಾಡಿ ವಿದ್ವತ್ಪರೀಕ್ಷೆಗಳಲ್ಲಿ ಶ್ರೇಷ್ಠ ದರ್ಜೆಯಲ್ಲಿ ಉತ್ತೀರ್ಣರಾಗಿ ಬಹುಮಾನ ಗಳಿಸಿರುತ್ತಾರೆ. ತಿರುಪತಿ ಮತ್ತು ಬೆಂಗಳೂರಿನಲ್ಲಿ ನಡೆಯುವ ವಿದ್ವತ್ಪರೀಕ್ಷೆಗಳಿಗೆ ಪರೀಕ್ಷಕರಾಗಿಯೂ ಇದ್ದಾರೆ. ಮಂತ್ರಾಲಯದಲ್ಲಿರುವ ಶ್ರೀಗುರುಸಾರ್ವಭೌಮಸಂಸ್ಕೃತಮಹಾವಿದ್ಯಾಲಯಕ್ಕೆ ಅಧ್ಯಕ್ಷರಾಗಿಯೂ ಇದ್ದಾರೆ. ಬೆಂಗಳೂರಿನ ಮಾಗಡಿ ರಂಗನಾಥಾಚಾರ್ಯರಿಂದ ಕೂಡಿ, "ಗುರು ಸಾರ್ವಭೌಮ" ಎಂಬ ಮಾಸ ಪತ್ರಿಕೆಯನ್ನು ನಡೆಸುತ್ತಿದ್ದಾರೆ. ಕೆಲವು ಗ್ರಂಥಗಳನ್ನು ಸಂಶೋಧಿಸಿ ಮುದ್ರಿಸಿ, ಪ್ರಕಾಶಿಸಿದ್ದಾರೆ. ಕಿರಿಯ ವಯಸ್ಸಿನ ಈ ಮಹಾವಿದ್ವಾಂಸರಿಗೆ ದಿವ್ಯವಾದ ಭವಿಷ್ಯವಿದೆ. ಇವರು ಪಾಷ್ಟಿಕಕುಲದ ಬೀಗಮುದ್ರೆ ಮನೆತನದ ಗೌತಮ ಗೋತ್ರಕ್ಕೆ ಸೇರಿದವರು. ಇವರಿಗೆ ರಾಜಾ ಸುಜ್ಞಾನೇಂದ್ರಾಚಾರ್ಯರೆಂಬ ಪರ್ಯಾಯ ಹೆಸರೂ ಇದೆ. ಮಠದ

ದಿವಾನರೂ ಆಗಿದ್ದಾರೆ. ಮಠದಿಂದ ನಡೆಸಲ್ಪಡುತ್ತಿರುವ ವಿದ್ವತ್ಸಭೆಯ ಕಾರ್ಯದರ್ಶಿಗಳೂ ಆಗಿದ್ದಾರೆ. ರಾಯರ ಸಾಕ್ಷಾತ್ಪರಂಪರೆಯಲ್ಲಿ ಬಂದವರು.

## ಗೌಡಗೆರಿ ಗೋಪಾಲಕೃಷ್ಣಾಚಾರ್ಯರು

ಶ್ರೀಯುತ ಗೌಡಗೆರಿ ವೆಂಕಟರಮಣಾಚಾರ್ಯರ ಕಿರಿಯ ಮಕ್ಕಳು. ಬಾಲ್ಯದ ವಿದ್ಯಾಭ್ಯಾಸ ಹಿರಿಯರಲ್ಲಿ. ಸಾಹಿತ್ಯವಿದ್ಯಾಭ್ಯಾಸ ಪ್ರಸಿದ್ಧ ಪಂಡಿತರಾದ ರಾಮನಾಧಪುರಂ ದೇಶಿಕಾಚಾರ್ಯರಲ್ಲಿ. ತರ್ಕಶಾಸ್ತ್ರ ವಿದ್ಯಾಭ್ಯಾಸ ಪಂಡಿತಪ್ರಕಾಂಡ ಶ್ರೀಯುತ ವಿ. ಎಸ್. ರಾಮಚಂದ್ರಶಾಸ್ತ್ರಿಗಳಲ್ಲಿ ವೇದಾಂತ ವಿದ್ಯಾಭ್ಯಾಸ ಭ್ರಾತೃವರ್ಯರಾದ ಗೌಡಗೆರೆ ಶ್ರೀನಿವಾಸಾಚಾರ್ಯರಲ್ಲಿ. ಮೈಸೂರು ಸರ್ಕಾರದ ಸೇವೆಯಲ್ಲಿ ಎಕ್ಸಿಕ್ಯುಟಿವ್ ಇಂಜಿನೀಯರಾಗಿದ್ದು ನಿವೃತ್ತರಾದ ನಂತರ ಅನೇಕ ಶಿಷ್ಯರಿಗೆ ಸಚ್ಛಾಸ್ತ್ರ ಪ್ರವಚನದಲ್ಲಿ ನಿರತರಾಗಿದ್ದಾರೆ. ಕೆಲವು ಗ್ರಂಥಗಳನ್ನು ರಚಿಸಿರುತ್ತಾರೆ. ವಾಸಸ್ಥಳ-ಬೆಂಗಳೂರು. ಬೆಟ್ಟದ ಮನೆ ತನದ ವಿಶ್ವಾಮಿತ್ರ ಗೋತ್ರಕ್ಕೆ ಸೇರಿದವರು. ಬೀಗರು—ನಿವೃತ್ತ-ರೆವಿನ್ಯೂ ಕಮೀಷನರು ಎನ್. ಮಾಧವರಾಯರು, ಅಡ್ವೋಕೇಟ್ ಕೆ ಪ್ರಹ್ಲಾದರಾಯರು ಹೊಳವನಹಳ್ಳಿ ಜೀಬಿ ಮಧ್ವಾಚಾರ್ಯರ ಮಕ್ಕಳು ಎಚ್. ಎಂ ರಾಮಚಂದ್ರಾಚಾರ್ಯರು, ಮಂಡ್ಯ ಸಕ್ಕರೆ ಕಂಪನಿ ಮುಖ್ಯ ವೈದ್ಯಾಧಿಕಾರಿಗಳಾಗಿದ್ದ ಎಂ. ಕೃಷ್ಣಮೂರ್ತಿರಾಯರು. ಸಂಬಂಧಿಗಳು—ಗೌಡಗೆರೆ ಶ್ರೀನಿವಾಸಾಚಾರ್ಯರ ಮಕ್ಕಳು ಡಿ. ಎಸ್. ಗುಂಡಾಚಾರ್ಯರು, ಡಿ ಎಸ್. ರಾಘವೇಂದ್ರಾಚಾರ್ಯರು ಡಿ. ಎಸ್, ವೆಂಕಟನರಸಿಂಹಾಚಾರ್ಯರು ಡಿ. ಎಸ್, ಸೇತುಮಾಧವಾಚಾರ್ಯರು ಡಿ. ಎಸ್. ಕೃಷ್ಣಾಚಾರ್ಯರು, ಮಾಗಡಿ ಸುಬ್ಬರಾಯರು, ಹಿಂದೂಪುರದ ಕಾಶಿ ಶ್ರೀನಿವಾಸರಾಯರು, ಅನಂತಪುರದ ಸಿ. ಹನುಮಂತಾಚಾರ್ಯರು, ಸರಾಫ್ ಸುಬ್ಬರಾಯರು ಮುಂತಾದವರು ಇವರು ಬೆಂಗಳೂರು ನಗರದ ನೀರು ಸರಬರಾಜು ಇಲಾಖೆಯಲ್ಲಿ ಬಹುಕಾಲ ಇಂಜಿನೀಯರಾಗಿದ್ದವರು

## ಹುಲಿ ಕೆ. ಶ್ರೀನಿವಾಸಾಚಾರ್ಯರು

ವಾಸಸ್ಥಳ-ಮೈಸೂರು. ಹುಲಿ ಕೃಷ್ಣಾಚಾರ್ಯರ (ಶ್ರೀಸುವ್ರತೀಂದ್ರತೀರ್ಥರ) ಹಿರಿಯ ಪುತ್ರರು. ಹಿರಿಯರಲ್ಲಿ ವ್ಯಾಸಂಗ ಮಾಡಿ ನ್ಯಾಯ, ವೇದಾಂತ, ಸಾಹಿತ್ಯ

ಶಾಸ್ತ್ರಗಳಲ್ಲಿ ಪ್ರಥಮಶ್ರೇಣಿಯಲ್ಲಿ ಮೈಸೂರು ವಿದ್ವತ್ಪರೀಕ್ಷೆಗಳಲ್ಲಿ ತೇರ್ಗಡೆಯಾಗಿ ಬಹುಮಾನಗಳನ್ನು ಗಳಿಸಿದ್ದಾರೆ, ಇವರು ಮೈಸೂರು ಮಹಾರಾಜರ ಸಂಸ್ಕೃತ ಮಹಾಪಾಠಶಾಲೆಯಲ್ಲಿ ದ್ವೈತವೇದಾಂತ ಪ್ರಾಧ್ಯಾಪಕರಾಗಿದ್ದು ನಿವೃತ್ತರಾಗಿದ್ದಾರೆ. ನಿವೃತ್ತಿ ನಂತರ ತಮ್ಮ ಮನೆಯಲ್ಲಿಯೇ ಅನೇಕ ಶಿಷ್ಯರಿಗೆ ಸುಧಾ ಸ್ವಾಧ್ಯಾಸ ಮಾಡಿಸುತ್ತಿದ್ದಾರೆ. ಮೈಸೂರು ಸುಬ್ಬರಾಯನಕೆರೆ ಸಮೀಪದಲ್ಲಿರುವ ಶ್ರೀರಾಯರಮಠದ ಮೇಲ್ವಿಚಾರಕರಾಗಿಯೂ ಇದ್ದಾರೆ. ಇವರು ವಶಿಷ್ಠ ಗೋತ್ರೋದ್ಭವರು. ಇವರನ್ನು ಹುಲಿಕುಂಠಾಚಾರ್ಯರೆಂದೂ ಕರೆಯುವ ವಾಡಿಕೆ ಇದೆ. ರಾಮಾಚಾರ್ಯರ ಅಳಿಯಂದಿರು.

## ಮಾಗಡಿ ರಂಗನಾಥಾಚಾರ್ಯರು

ವಾಸಸ್ಥಳ ಬೆಂಗಳೂರು ಮಾಗಡಿ ಇವರ ಜನ್ಮಸ್ಥಳ. ಬಾಲ್ಯ ವಿದ್ಯಾಭ್ಯಾಸ ಮಾಗಡಿಯಲ್ಲಿ. ಪ್ರೌಢ ವಿದ್ಯಾಭ್ಯಾಸ ಬೆಂಗಳೂರು ಮತ್ತು ಇತರ ಸ್ಥಳಗಳಲ್ಲಿ. ಆಂಗ್ಲಭಾಷಾವ್ಯಾಸಂಗಾನಂತರ ಸಂಸ್ಕೃತವಿದ್ಯಾಭ್ಯಾಸಕ್ಕೆ ಪ್ರಾರಂಭ. ಮೈಸೂರು ಸರ್ಕಾರದ ನ್ಯಾಯ, ವೇದಾಂತ, ಸಾಹಿತ್ಯ ವಿದ್ವತ್ಪರೀಕ್ಷೆಗಳಲ್ಲಿ ಉತ್ತಮ ತರಗತಿಯಲ್ಲಿ ತೇರ್ಗಡೆಯಾಗಿ ಬಹುಮಾನಗಳನ್ನು ಗಳಿಸಿರುತ್ತಾರೆ. ಬೆಂಗಳೂರು ಚಾಮರಾಜೇಂದ್ರಸಂಸ್ಕೃತ ಮಹಾಪಾಠಶಾಲೆಯಲ್ಲಿ ದ್ವೈತವೇದಾಂತ ಪ್ರಾಧ್ಯಾಪಕರಾಗಿದ್ದು ನಿವೃತ್ತರಾಗಿದ್ದಾರೆ. ಈಗಲೂ ತಿರುಪತಿ, ಮದ್ರಾಸು ಮತ್ತು ಮೈಸೂರು ವಿದ್ವತ್ಪರೀಕ್ಷೆಗಳಿಗೆ ಪರೀಕ್ಷಕರಾಗಿದ್ದಾರೆ. ಇವರ ಶಿಷ್ಯವೃಂದ ಅಪಾರ. ಇವರು ರಾಷ್ಟ್ರಪ್ರಶಸ್ತಿ ಪದವಿಯನ್ನೂ ಗಳಿಸಿದ್ದಾರೆ. ನ್ಯಾಯವೇದಾಂತಚೂಡಾಮಣಿ, ಪಂಡಿತರಾಜ ಮುಂತಾದ ಉನ್ನತ ಬಿರುದುಗಳನ್ನು ಹೊಂದಿರುತ್ತಾರೆ. ಬಹುಕಾಲದಿಂದಲೂ ಶ್ರೀವ್ಯಾಸರಾಜ ಮಠದ ಆಸ್ಥಾನ ವಿದ್ವಾಂಸರೂ, ಧರ್ಮಾಧಿಕಾರಿಗಳೂ ಆಗಿದ್ದಾರೆ. ಭಾಷ್ಯದೀಪಿಕೆ ಮುಂತಾದ ಗ್ರಂಥಗಳನ್ನು ಶೋಧಿಸಿ ಸಂಪಾದಿಸಿದ್ದಾರೆ. ಕೆಲವು ಗ ಂಥಗಳನ್ನೂ ರಚಿಸಿರುತ್ತಾರೆ. ಶ್ರೀರಾಯರಮಠದ ಆಸ್ಥಾನ ವಿದ್ವಾಂಸರೂ ಆಗಿದ್ದಾರೆ. ರಾಮಕೃಷ್ಣಪ್ಪ ದ್ವೈತವೇದಾಂತಪಾಠಶಾಲೆಯ ಅಧ್ಯಕ್ಷರಾಗಿಯೂ ಇದ್ದಾರೆ. ಸೀತಾಪತಿಅಗ್ರಹಾರದ ಶ್ರೀರಾಘವೇಂದ್ರಸ್ವಾಮಿಗಳ ಮಠದ ಪಾಠಶಾಲೆಗೂ ಮತ್ತು ವಿದ್ಯಾರ್ಥಿನಿಲಯಕ್ಕೂ ಅಧ್ಯಕ್ಷ

ರಾಗಿಯೂ ಇದ್ದಾರೆ. ಮಾಧ್ವಪೀಠಾಧಿಪತಿಗಳೆಲ್ಲರೂ ಇವರನ್ನು ಗೌರವಿಸುತ್ತಿದ್ದಾರೆ. ಶ್ರೀವ್ಯಾಸರಾಜಮಠದ "ಚಂದ್ರಿಕಾಗುರುಕುಲ"ದಲ್ಲಿ ಅನೇಕರಿಗೆ ತಾತ್ಪರ್ಯ ಚಂದ್ರಿಕಾದಿ ಉದ್ಗ್ರಂಥಗಳನ್ನು ಪಾಠ ಹೇಳುತ್ತಿದ್ದಾರೆ. ಇವರು ಷಾಷ್ಟಿಕ ಕುಲದ ಆತ್ರೇಯಸ ಗೋತ್ರಕ್ಕೆ ಸೇರಿದವರು ಗೌಡಗೆರೆ ಶ್ರೀನಿವಾಸಾಚಾರ್ಯರ ಸಂಬಂಧಿಗಳು. ಇವರ ಮಕ್ಕಳು ಮತ್ತು ಅಳಿಯ ಉನ್ನತ ಹುದ್ದೆಗಳಲ್ಲಿದ್ದಾರೆ

## ಟಿ. ಕೆ. ವೇಣುಗೋಪಾಲದಾಸರು

ವಾಸಸ್ಥಳ–ಬೆಂಗಳೂರು, ಇವರ ಪೂರ್ವೀಕರ ಸ್ಥಳ ತುಮಕೂರು. ಹಿಂದಿನವರು ಶ್ರೀವ್ಯಾಸರಾಜ ಮಠದ ಮಠಾಧಿಕಾರಿಗಳಾಗಿದ್ದವರು. ಬಾಲ್ಯವಿದ್ಯಾಭ್ಯಾಸ ಹಿರಿಯರಲ್ಲಿಯೇ. ಇವರು ಉತ್ತಮ ಭಾಷಣಕಾರರು, ಹರಿಕಥೆಗಳನ್ನು ಮಾಡುವುದರಲ್ಲಿ ಅಗ್ರಪಂಗ್ತಿಗೆ ಸೇರಿದವರು ಭಾಗವತಾದಿ ಪುರಾಣಗಳ ಪ್ರವಚನದಲ್ಲಿ ನಿಸ್ಸೀಮರು. ಇವರ ಹರಿಕಥೆ ಮತ್ತು ಪುರಾಣ ಪ್ರವಚನಗಳು ಬಹು ಜನರನ್ನು ಆಕರ್ಷಿಸುತ್ತಿವೆ. ದಾಸಸಾಹಿತ್ಯವನ್ನು ಆಳವಾಗಿ ಅಭ್ಯಾಸ ಮಾಡಿರುತ್ತಾರೆ. ಪ್ರಾಚೀನ ದೇವರ ನಾಮಗಳನ್ನು ಶ್ರಾವ್ಯವಾಗಿ ಹಾಡುತ್ತಾರೆ ದಾಸಸಾಹಿತ್ಯದಲ್ಲಿಯೂ, ವ್ಯಾಸರಾಜರು ಮುಂತಾದ ಮಹನೀಯರ ಜೀವನ ಚರಿತ್ರೆ ವಿಷಯದಲ್ಲಿಯೂ ಸಂಶೋಧನೆಯನ್ನು ಮಾಡುತ್ತಿದ್ದಾರೆ. ಮಹಾಸಭೆಗಳಲ್ಲಿ ಅನೇಕ ಭಾಷಣಗಳನ್ನು ಮಾಡಿರುತ್ತಾರೆ. "ಹರಿಕಥಾಸುಧಾಂಬೋಧಿಚಂದ್ರಮ" ಮುಂತಾದ ಅನೇಕ ಪ್ರಶಸ್ತಿಗಳನ್ನೂ ಗಳಿಸಿರುತ್ತಾರೆ. ಪ್ರಭಾತಕಲಾವಿದರ ಗೋಪೀನಾಥದಾಸರ ಸೋದರ ಸಂಬಂಧಿಗಳು.

## ರಿತ್ತಿ ವೆಂಕಣ್ಣಾಚಾರ್ಯರು

ವಾಸಸ್ಥಳ–ಬೆಂಗಳೂರು. ವಿದ್ಯಾಭ್ಯಾಸ ಮೈಸೂರು ಮತ್ತು ನಂಜನಗೂಡಿನಲ್ಲಿ. ಮೈಸೂರು ಸರ್ಕಾರದ ವಿದ್ವತ್ಪರೀಕ್ಷೆಯಲ್ಲಿ ಸಾಹಿತ್ಯ, ವೇದಾಂತ, ನ್ಯಾಯ ಮತ್ತು ಧರ್ಮಶಾಸ್ತ್ರಗಳಲ್ಲಿ ತೇರ್ಗಡೆ ಹೊಂದಿರುತ್ತಾರೆ. ಮೈಸೂರು ಶಾರದಾವಿಲಾಸಕಾಲೇಜಿನಲ್ಲಿ ಅಧ್ಯಾಪಕರಾಗಿದ್ದು ನಿವೃತ್ತರಾಗಿ ಶಿಷ್ಯರಿಗೆ ಪಾಠ ಪ್ರವಚನಾದಿಗಳಲ್ಲಿ ನಿರತರಾಗಿದ್ದಾರೆ. ಉತ್ತಮ ವಾಗ್ಮಿಗಳು. ಉಪನ್ಯಾಸಕರು. ಪೌರಾಣಿಕರು ಮತ್ತು ಪ್ರಾಚೀನ ಗ್ರಂಥ ಸಂಶೋಧಕರು.

ಇವರು ತಮ್ಮ ಸಮೀಪಬಂಧುಗಳಾದ ರಾಜಾ ಎಸ್.ಗುರುರಾಜಾಚಾರ್ಯರೊಡಗೂಡಿ ಪ್ರಾಚೀನ ಗ್ರಂಥಗಳ ಪ್ರಕಾಶನಕಾರ್ಯದಲ್ಲಿ ನಿರತರಾಗಿದ್ದಾರೆ. ಇವರು ಆಗಮ ಶಾಸ್ತ್ರಜ್ಞರೂ ಆಗಿದ್ದಾರೆ. ಇವರ ಪೂರ್ವೀಕರು ವರದಾನದಿಯ ತೀರದ ರಿತ್ತಿಯಲ್ಲಿದ್ದವರು. ಷಾಷ್ಟಿಕಕುಲದ ಭಾರಧ್ವಾಜ ಗೋತ್ರಕ್ಕೆ ಸೇರಿದವರು. ಶ್ರೀರಾಘವೇಂದ್ರಸ್ವಾಮಿಗಳ ದೌಹಿತ್ರವಂಶಕ್ಕೆ ಸೇರಿದವರು ಸ್ಮೃತಿಮುಕ್ತಾವಳಿಯನ್ನು ಕನ್ನಡಕ್ಕೆ ತರ್ಜುಮೆ ಮಾಡುತ್ತಿದ್ದಾರೆ, "ಸಾರಸ್ವತ ಕಲಾವತಂಸ" ಎಂಬ ಬಿರುದನ್ನೂ ಹೊಂದಿದ್ದಾರೆ.

## ಅರ್ಚಕ ರಾಘವೇಂದ್ರಾಚಾರ್ಯರು

ವಾಸಸ್ಥಳ—ಮಂತ್ರಾಲಯ ಹಿರಿಯರಾದ ವೇದವ್ಯಾಸಾಚಾರ್ಯರಲ್ಲಿಯೇ ವಿದ್ಯಾಭ್ಯಾಸ ನ್ಯಾಯವೇದಾಂತ ವಿದ್ವತ್ಪರೀಕ್ಷೆಗಳಲ್ಲಿ ಉತ್ತೀರ್ಣರಾಗಿ ಮಂತ್ರಾಲಯದ ಗುರುರಾಜಸಂಸ್ಕೃತ ಮಹಾಪಾಠಶಾಲೆಯ ಅಧ್ಯಕ್ಷರಾಗಿದ್ದವರು. ಉತ್ತಮ ವಾಗ್ಮಿಗಳು ಮತ್ತು ಭಾಷಣಕಾರರು. ಶ್ರೀಮದ್ಭಾಗವತವನ್ನು ಮನೋಹರವಾಗಿ ಅನುವಾದ ಮಾಡುವ ಶ್ರೇಷ್ಠ ದರ್ಜೆಯ ಪೌರಾಣಿಕರು. ಇವರು ಸಂಚಾರದಲ್ಲಿ ಶಿಷ್ಯರ ಮನೆಗಳಿಗೆ ಹೋಗುತ್ತಿರುತ್ತಾರೆ. ಇವರ ದೇವರ ಪೂಜೆ ಸಂಸ್ಥಾನ ದೇವರ ಪೂಜೆಯಂತೆ ಇರುತ್ತದೆ. ಅನೇಕ ಪ್ರಶಸ್ತಿಗಳನ್ನು ಗಳಿಸಿರುತ್ತಾರೆ. ಇವರ ಪುರಾಣಾನುವಾದ ಮತ್ತು ಉಪನ್ಯಾಸಗಳು ರಮಣೀಯವಾಗಿದ್ದು ಬಹು ಜನ ಶ್ರೋತೃಗಳನ್ನು ಆಕರ್ಷಿಸುತ್ತಿವೆ. ಇವರು ತಮ್ಮ ಪಿತೃವರ್ಯರಂತೆ ಕವಿತಾ ಶಕ್ತಿಯನ್ನೂ ಹೊಂದಿರುತ್ತಾರೆ. ಕಾಶ್ಯಪ ಗೋತ್ರದವರು.

## ಚಿತ್ರಹಳ್ಳಿ ಶ್ರೀನಿವಾಸಾಚಾರ್ಯರು

ವಾಸಸ್ಥಳ–ಬೆಂಗಳೂರು. ಪೂರ್ವೀಕರ ಸ್ಥಳ ಚಿತ್ರದುರ್ಗದ ಸಮೀಪದ ಚಿತ್ರಹಳ್ಳಿ. ವೇದಾಂತ ವಿದ್ವತ್ಪರೀಕ್ಷೆಯಲ್ಲಿ ತೇರ್ಗಡೆಯಾಗಿ ವಿದ್ಯಾಭ್ಯಾಸ ಇಲಾಖೆಯಲ್ಲಿ ಸೇವೆ ಸಲ್ಲಿಸಿ ನಿವೃತ್ತರಾಗಿದ್ದಾರೆ. ಪೌರೋಹಿತ್ಯದಲ್ಲಿಯೂ ನಿಪುಣರು. ನಿವೃತ್ತಿ ನಂತರ ಶಿಷ್ಯರಿಗೆ ಸಚ್ಛಾಸ್ತ್ರ ಪ್ರವಚನದಲ್ಲಿ ನಿರತರಾಗಿದ್ದಾರೆ. ಇವರ ತಮ್ಮ ವ್ಯಾಸಾಚಾರ್ಯರು, ತುಮಕೂರಿನ ಶೆಟ್ಟಿಹಳ್ಳಿ ವೆಂಕಟರಮಣಾಚಾರ್ಯರ ಮಕ್ಕಳಾದ ವೆಂಕಟಾಚಾರ್ಯರ ಅಳಿಯಂದಿರು.

## ಬೆಟ್ಟದ ನಾಗರಾಜಾಚಾರ್ಯರು

ವಾಸಸ್ಥಳ–ಶ್ರೀರಂಗಪಟ್ಟಣ. ಪೂರ್ವಿಕರ ಸ್ಥಳ ಚಾಮರಾಜಪೇಟೆ ಬೆಂಗಳೂರು. ವೇದಾಂತ ವಿದ್ವತ್ಪರೀಕ್ಷೆಯಲ್ಲಿ ತೇರ್ಗಡೆಯಾಗಿ ಶ್ರೀರಂಗಪಟ್ಟಣದಲ್ಲಿ ಪೂರ್ಣಯ್ಯನವರ ಬೀದಿಯಲ್ಲಿರುವ ಶ್ರೀರಾಘವೇಂದ್ರಸ್ವಾಮಿಗಳ ಮಠದಲ್ಲಿ ಯಜಮಾನರಾಗಿದ್ದು ಶಿಷ್ಯರಿಗ ಪಾಠ ಪ್ರವಚನದಲ್ಲಿ ನಿರತರಾಗಿದ್ದಾರೆ ಇವರ ಪುತ್ರರು ಬಿ. ಎನ್. ರಾಘವೇಂದ್ರಾಚಾರ್ಯರು ಎಂ.ಎ. ಪರೀಕ್ಷೆ ಮಾಡಿ ಕಾಲೇಜಿನಲ್ಲಿ ಉಪನ್ಯಾಸಕರಾಗಿದ್ದಾರೆ. ಸದಾಚಾರನಿರತರು. ಬೆಟ್ಟದ ಮನೆತನದ ವಿಶ್ವಾಮಿತ್ರ ಗೋತ್ರದವರು. ಬೆಂಗಳೂರು ಚಾಮರಾಜಪೇಟೆಯಲ್ಲಿರುವ ಡಿ ವಾಮನಮೂರ್ತಿ, ಡಿ. ಕೃಷ್ಣಮೂರ್ತಿ, ಇವರ ಸೋದರ ಸಂಬಂಧಿಗಳು ಗೌಡಗೆರೆ ಆಚಾರ್ಯರಿಗೂ ಸಂಬಂಧಿಗಳು.

## ಕೆ. ಎ. ಸುಬ್ಬರಾಯರು

ವಾಸಸ್ಥಳ–ಬೆಂಗಳೂರು ಪೂರ್ವಿಕರ ಸ್ಥಳ ಮೈಸೂರು ಸಮೀಪದ ಕಳಸ್ತವಾಡಿ. ನಿವೃತ್ತ ಅಕ್ಬಾರಿ ಅಧಿಕಾರಿಗಳಾಗಿದ್ದ ಅಣ್ಣಾಜಿರಾಯರ ಮಕ್ಕಳು. ಪ್ಯಾರಿ ಕಂಪೆನಿ ಬೆಂಗಳೂರು ಶಾಖೆಯ ಮ್ಯಾನೇಜರಾಗಿದ್ದು ನಿವೃತ್ತರಾಗಿದ್ದಾರೆ. ಡಿ ಎಸ್. ರಾಘವೇಂದ್ರಾಚಾರ್ಯರ ಬೀಗರು. ಗುಡಿಬಂಡೆ ಗಣ್ಯವ್ಯಕ್ತಿಗಳಾದ ಕೆರೆ ಕೃಷ್ಣಪ್ಪನವರ ದೌಹಿತ್ರರು. ಬಿ. ಸೀತಾರಾಮಾಚಾರ್ಯರು ಮತ್ತು ರಿಸರ್ವ್ ಬ್ಯಾಂಕ್ ಅಧಿಕಾರಿಗಳಾದ ಜೆ. ರಂಗನಾಥರಾಯರು ಇವರ ಸಂಬಂಧಿಗಳು. ಮುಳಬಾಗಲು ಶ್ರೀಪಾದರಾಜರ ಮಠದ ಶ್ರೀಸತ್ಯನಿಧಿತೀರ್ಥರ ಪರಮಭಕ್ತರು ಬೆಂಗಳೂರು ರಾಘವೇಂದ್ರ ಕಾಲೋನಿಯ ಶ್ರೀಪಾದರಾಜರ ಮಠದಲ್ಲಿ ಶ್ರೀರಾಘವೇಂದ್ರಸ್ವಾಮಿಗಳ ಆರಾಧನೆಯನ್ನು ಪ್ರತಿವರ್ಷವೂ ವಿಜೃಂಭಣೆಯಿಂದ ಮಾಡುತ್ತಿದ್ದಾರೆ. ಅಖಿಲಭಾರತ ಮಾಧ್ವಮಹಾಮಂಡಲದ ಸಂಪರ್ಕವನ್ನೂ ಹೊಂದಿದ್ದಾರೆ. ವ್ಯಾಸರಾಜಮಠದ ಪುರೋಭಿವೃದ್ಧಿಯಲ್ಲಿ ಆದರವುಳ್ಳವರು. ಅನೇಕ ಮಾಧ್ವ ಪೀಠಾಧಿಪತಿಗಳು ಇವರ ಮನೆಯಲ್ಲಿ ಪೂಜೆ ಮಾಡಿರುತ್ತಾರೆ. ಜಮದಗ್ನಿ ಗೋತ್ರದವರು. ದೇಶಪಾಂಡೆ ನರಸಿಂಹಮೂರ್ತಿರಾಯರು ಇವರ ಮಾವಂದಿರು. ದೇವ ಬ್ರಾಹ್ಮಣ ತರ್ಪಕರು.

## ಡಿ ಎಸ್. ಗುಂಡಾಚಾರ್ಯರು

ವಾಸಸ್ಥಳ–ಬೆಂಗಳೂರು. ಎಂ ಎ. ಎಲ್ ಎಲ್ ಬಿ ವಕೀಲ್‌ವೃತ್ತಿ ಸುಪ್ರಸಿದ್ಧ ನ್ಯಾಯವಾದಿಗಳು. ಗೌಡಗೆರಿ ಶ್ರೀನಿವಾಸಾಚಾರ್ಯರ ಹಿರಿಯ ಪುತ್ರರು ಇವರ ಸಂಬಂಧಿಗಳು–ಪೋಲೀಸ್ ಅಧಿಕಾರಿಗಳಾಗಿದ್ದ ದೇಶಪಾಂಡೆ ಅಹೋಬಲ ರಾಯರು ಮಾತಾಮಹರು. ಬೀಗರುಗಳು–ಮಾಗಡಿ ಭೀಮಾಚಾರ್ಯರು ಮತ್ತು ಅವರ ಮಕ್ಕಳು ಪ್ರಸಿದ್ಧ ಇಂಜನೀಯರುಗಳಾದ ಎಂ ಬಿ. ಗೋಪಾಲ ಕೃಷ್ಣ ಮತ್ತು ಎಂ ಬಿ, ನಾಗರಾಜರಾಯರು. ಇನ್ನೊಬ್ಬ ಬೀಗರು ಚಿತ್ರದುರ್ಗದ ರಾಘವೇಂದ್ರಾಚಾರ್ಯರ ಮಕ್ಕಳು ಹುಲಿಕುಂರಾಚಾರ್ಯರು. ಇನ್ನೊಬ್ಬರು ಎಲೆಯೂರು ಮನೆತನದ ನಾರಾಯಣಾಚಾರ್ಯರ ಮಕ್ಕಳು, ಇಂಡಿಯನ್ ಬ್ಯಾಂಕ್ ಮ್ಯಾನೇಜರು ಕೃಷ್ಣಮೂರ್ತಿಗಳು ಹಿಂದೂಪುರದ ಕಾಶಿ ಶ್ರೀನಿವಾಸ ರಾಯರ ಮಕ್ಕಳಾದ ಕೆ. ಗೋಪೀನಾಥರಾಯರ ಮಗ, ಕೆ ಭೀಮಸೇನರಾವ್, ಬೊಂಬಾಯಿ ಮಹೇಂದ್ರ ಕಂಪೆನಿಯ ಉನ್ನತ ಹುದ್ದೆಯಲ್ಲಿರುವವರು ಒಬ್ಬ ಅಳಿಯ: ಬೊಂಬಾಯಿನಲ್ಲಿ ರಿಸರ್ವ್ ಬ್ಯಾಂಕ್ ಉನ್ನತಾಧಿಕಾರಿಗಳಾದ ಜಿ. ರಂಗನಾಥರಾಯರು ಇನ್ನೊಬ್ಬ ಅಳಿಯ. ಬೆಟ್ಟದ ಮನೆತನದ ವಿಶ್ವಾಮಿತ್ರ ಗೋತ್ರದವರು. ಮೈಸೂರು ಆಹಾರ ಕಾರ್ಪೊರೇಷನ್ನಿಗೆ ಸಲಹೆಗಾರರಾಗಿದ್ದಾರೆ. ಸದಾಚಾರಿಗಳೂ, ಸಚ್ಛಾಸ್ತ್ರಾಭ್ಯಾಸಿಗಳೂ ಆಗಿದ್ದಾರೆ ಗೌಡಗೆರೆಯಲ್ಲಿ ಇವರ ಹಿರಿಯರು ಸ್ಥಾಪಿಸಿರುವ ರಾಯರ ದೇವಸ್ಥಾನವನ್ನೂ, ಛತ್ರವನ್ನೂ, ಯಾತ್ರಾರ್ಥಿಗಳಿಗಾಗಿ ಕಟ್ಟಿಸಿರುವ ಮನೆಗಳನ್ನೂ ಒಳ್ಳೆಯ ಸ್ಥಿತಿಯಲ್ಲಿಟ್ಟಿದ್ದಾರೆ ಪ್ರತಿವರ್ಷವೂ ರಾಯರ ಆರಾಧನೆ ಮತ್ತು ರಥೋತ್ಸವವನ್ನು ವಿಜೃಂಭಣೆಯಿಂದ ನಡೆಸುತ್ತಿದ್ದಾರೆ.

## ಹೆಬ್ಬಣಿ ಹಯವದನಾಚಾರ್ಯರು

ವಾಸಸ್ಥಳ–ಮುಳಬಾಗಲು. ಸಂಸ್ಕೃತ ವಿದ್ಯಾಭ್ಯಾಸ ಶ್ರೀದಯಾನಿಧಿ ತೀರ್ಥರಲ್ಲಿ ಶ್ರೀಸತ್ಯನಿಧಿತೀರ್ಥರ ಪೂರ್ವಾಶ್ರಮ ಅನುಜರಾದ ವಕೀಲ್ ಹೆಬ್ಬಣಿ ವೆಂಕಟರಮಣಾಚಾರ್ಯರ ಜ್ಯೇಷ್ಠಪುತ್ರರು ಕೆಲವು ಕಾಲ ಉತ್ತರಾದಿ ಮಠದ ಹೊಳೆನರಸೀಪುರದ ಆಸ್ತಿಗಳ ಮೇಲ್ವಿಚಾರಕರಾಗಿದ್ದರು. ಉತ್ತಮ ಲೇಖಕರು ಮತ್ತು ಉಪನ್ಯಾಸಕರು ಮುಳಬಾಗಲು ಟೌನ್ ಪ್ರೆಸ್ಸಿನ ಯಜ

ಮಾನರಾಗಿದ್ದಾರೆ ಇವರು ಭವಾನಿ ಕೃಷ್ಣಾಚಾರ್ಯರ ಸಂಬಂಧಿಗಳು ಗೌತಮ ಗೋತ್ರದವರು. ಶ್ರೀವಿಜಯನಿಧಿತೀರ್ಥರ ಆಪ್ತ ಬಂಧುಗಳು.

## ಎಸ್ ಮಾಧವರಾಯರು

ವಾಸಸ್ಥಳ ಬೆಂಗಳೂರು. ಇವರ ಪೂರ್ವಿಕರು ಜಮಖಂಡಿಯ ಶಾಮಯ್ಯ ಮತ್ತು ಸುಬ್ಬಯ್ಯ, ಶಿವಾಜಿ ಕಾಲದಲ್ಲಿ ದಕ್ಷಿಣಕ್ಕೆ ಬಂದು ನಿಂತರು. ಮೈಸೂರು ಸಿವಿಲ್ ಸರ್ವೀಸ್ ಪರೀಕ್ಷೆಯಲ್ಲಿ ಉತ್ತೀರ್ಣರಾಗಿ ಮೈಸೂರು ಸರ್ಕಾರದ ನಾನಾ ಇಲಾಖೆಗಳಲ್ಲಿ ಸೇವೆ ಸಲ್ಲಿಸಿ, ರೆವಿನ್ಯೂ ಕಮೀಷನರಾಗಿ ನಿವೃತ್ತರಾಗಿರುವರು. ಹವ್ಯಾಸ–ಗ್ರಂಥ ಪಠನೆ ಮತ್ತು ಗ್ರಂಥ ರಚನೆ. ಇವರು ಐ ಎ. ಎಸ್ ಅಧಿಕಾರಿಗಳಾಗಿದ್ದರು. ಕಾಶ್ಯಪ ಗೋತ್ರದವರು ಇವರ ತಂದೆ ನಾಗವರದ ನಾರಾಯಣರಾಯರು. ಸಬ್‌ರಿಜಿಸ್ಟ್ರಾರ್ ಆಗಿ ಸೇವೆಸಲ್ಲಿಸಿ ನಿವೃತ್ತರಾಗಿ ತುಮಕೂರಿನಲ್ಲಿ ನೆಲಸಿದ್ದರು ಹವ್ಯಾಸ– ಕನ್ನಡ ನಾಟಕ ರಚನೆ. ಇವರ ಮಾವಂದಿರು ಶಿವಮೊಗ್ಗೆಯ ಸುಪ್ರಸಿದ್ಧ ನ್ಯಾಯವಾದಿಗಳಾದ ಎಸ್. ರಾಮಚಂದ್ರರಾಯರು ಉನ್ನತ ಹುದ್ದೆಗಳಲ್ಲಿರುವ ಮಾಧವರಾಯರ ಮಕ್ಕಳು ಎನ್. ಎಂ ಕೃಷ್ಣರಾವ್, ಎನ್ ಎಂ ರಾಘವೇಂದ್ರರಾವ್, ಎನ್. ಎಂ ನರಸಿಂಹರಾವ್, ಎನ್. ಎಂ, ಹರಿರಾವ್ ಮತ್ತು ಎನ್. ಎಂ. ನಾರಾಯಣ ರಾವ್, ಇಂಡಿಯಾ ಸರ್ಕಾರದ ಡೆಪ್ಯುಟಿ ಆಡಿಟರ್ ಜನರಲ್ ಆಗಿ ನಿವೃತ್ತ ರಾಗಿರುವ ಆರ್. ಪಿ ರಂಗ ಇವರ ಅಳಿಯಂದಿರು ಇನ್ನೊಬ್ಬ ಅಳಿಯಂದಿರು ಇಂಜಿನೀಯರ್ ಡಿ. ಎನ್. ಚಾರ್, ಇನ್ನೊಬ್ಬ ಅಳಿಯಂದಿರು ಇಂಜನೀಯರ್ ನರಸಿಂಹಮೂರ್ತಿ, ಗೌಡಗೆರೆ ಗೋಪಾಲಕೃಷ್ಣಾಚಾರ್ಯರ ಬೀಗರು.

## ಡಿ. ಎಸ್. ರಾಘವೇಂದ್ರಾಚಾರ್ಯರು

ವಾಸಸ್ಥಳ–ಬೆಂಗಳೂರು. ಭೌತಶಾಸ್ತ್ರ ಎಂ.ಎಸ್ಸಿ ಪದವೀಧರು. ಮೈಸೂರು ಸರ್ಕಾರದಲ್ಲಿ ಸೇವೆ ಸಲ್ಲಿಸಿ ಡೆಪ್ಯುಟಿ ಕಮೀಷನರಾಗಿ ನಿವೃತ್ತರಾದ ವರು. ಐ ಎ. ಎಸ್. ಅಧಿಕಾರಿಗಳು. ಕೆಲವು ಕಾಲ ಗವರ್‌ನರಿಗೆ ಸಕ್ರೆಟರಿ ಯಾಗಿದ್ದರು. ನಿವೃತ್ತಿ ನಂತರ ಜಯಚಾಮರಾಜೇಂದ್ರ ಒಡೆಯರಿಗೆ ಆಪ್ತ

ಸೆಕ್ರೆಟರಿಯಾಗಿದ್ದರು. ಈಗ ಹೊಸದುರ್ಗ ಸಿಮೆಂಟ್ ಕಂಪೆನಿಯು ಮ್ಯಾನೇಜಿಂಗ್ ಡೈರೆಕ್ಟರು ಆಗಿದ್ದಾರೆ. ಬೆಟ್ಟದ ಮನೆತನದ ವಿಶ್ವಾಮಿತ್ರ ಗೋತ್ರದವರು. ಇವರು ಬಿಂದು ಇನಾಮತಿ ಶಾಮರಾಯರು ಮತ್ತು ಪ್ಯಾರಿ ಕಂಪನಿ ನಿವೃತ್ತ ಬ್ರಾಂಚ್ ಮ್ಯಾನೇಜರು ಕೆ. ಎ. ಸುಬ್ಬರಾಯರ ಸಂಬಂಧಿಗಳು ಗೌಡಗೆರೆ ಶ್ರೀನಿವಾಸಾಚಾರ್ಯರ ಮಕ್ಕಳು.

## ಕರ್ನಲ್ ವೈ. ವಿ ಎಸ್. ಮೂರ್ತಿ

ವಾಸಸ್ಥಳ–ಬೆಂಗಳೂರು. ವೈದ್ಯ ವಿದ್ಯೆದಲ್ಲಿ ಪದವೀಧರರು. ಭಾರತ ಸರ್ಕಾರದ ಸೈನ್ಯ ಇಲಾಖೆಯಲ್ಲಿ ಉನ್ನತ ಹುದ್ದೆಯನ್ನಲಂಕರಿಸಿ ಈಗ ನಿವೃತ್ತರಾಗಿದ್ದಾರೆ ಅರಮನೆ ಡಾಕ್ಟರು ಶೇಷಗಿರಿರಾಯರ ದೌಹಿತ್ರರು.

## ಡಿ. ವೆಂಕಟರಾಯರು

ವಾಸಸ್ಥಳ–ಭೂಪಾಲ್ ಮೈಸೂರು ವಿಶ್ವವಿದ್ಯಾಲಯದ ಇಂಜನೀಯರಿಂಗ್ ಪದವೀಧರರು. ಮಧ್ಯಪ್ರದೇಶದ ಸರ್ಕಾರದ ಸೇವೆಯಲ್ಲಿ ಸೂಪರಿಂಟೆಂಡಿಂಗ್ ಇಂಜನೀಯರಾಗಿದ್ದು ನಿವೃತ್ತರಾಗಿದ್ದಾರೆ. ನಿವೃತ್ತಿ ನಂತರ ವಿಶ್ವಪರ್ಯಟನೆಯನ್ನು ಮಾಡಿದ್ದಾರೆ. ಇವರು ಗೌಡಗೆರೆ ಶ್ರೀನಿವಾಸಾಚಾರ್ಯರ ದೌಹಿತ್ರರು ಮತ್ತು ದಿವಾನ್ ಪೂರ್ಣಯ್ಯನವರ ಸಂಬಂಧಿಗಳು. ಭಾರಧ್ವಾಜ ಗೋತ್ರದವರು. ಡಿ. ಎಸ್. ರಾಘವೇಂದ್ರಾಚಾರ್ಯರ ಸೋದರಳಿಯ ಡಿ. ನರಸಿಂಹಮೂರ್ತಿರಾಯರ ಮಕ್ಕಳು.

## ವೈ. ಕೆ. ರಘುನಾಥರಾಯರು

ವಾಸಸ್ಥಳ–ಬೆಂಗಳೂರು, ವಿದ್ಯಾಭ್ಯಾಸ ಬೆಂಗಳೂರು ಸೆಂಟ್ರಲ್ ಕಾಲೇಜು. ರಸಾಯನಶಾಸ್ತ್ರದಲ್ಲಿ ಎಂ ಎಸ್ಸಿ ಮಾಡಿದ್ದಾರೆ. ಅನಂತರ ತಾತಾವಿಜ್ಞಾನಮಂದಿರದಲ್ಲಿ ಸಂಶೋಧನೆ ಕಾರ್ಯದಲ್ಲಿ ನಿರತರಾಗಿದ್ದರು ಕೆಲಕಾಲ ಮೈಸೂರು ಸಕ್ಕರೆ ಕಂಪೆನಿಯಲ್ಲಿ ಚೀಫ್ ಕೆಮಿಷ್ಟ್ ಆಗಿದ್ದರು ಅನಂತರ ಮೈಸೂರು ಆಹಾರ ಸಂಶೋಧನೆ ಮಂಡಲಿಯಲ್ಲಿ ಉನ್ನತ ಹುದ್ದೆಯಲ್ಲಿದ್ದರು. ನಿವೃತ್ತರಾದನಂತರ ಅನೇಕ ಖಾಸಗಿ ಕಂಪನಿಗಳಿಗೆ ಸಲಹೆಗಾರರಾಗಿದ್ದಾರೆ.

ಹವ್ಯಾಸ-ಸಂಸ್ಕೃತ ಭಾಷೆಯಲ್ಲಿ ದ್ವೈತ ವೇದಾಂತ ಶಾಸ್ತ್ರಾಭ್ಯಾಸ ಇವರು ಮೈಸೂರು ಸರ್ಕಾರದ ನಿವೃತ್ತ ರೆವಿನ್ಯೂ ಕಮೀಷನರ್ ಮಾಧವರಾಯರ ಭಾವಮೈದುನರು. ತಾಂತ್ರಿಕ ಮಾಸ ಪತ್ರಿಕೆಗಳಿಗೆ ಉಚ್ಚ ತರಗತಿಯ ಇಂಗ್ಲಿಷ್ ಲೇಖನಗಳನ್ನು ಬರೆಯುತ್ತಿದ್ದಾರೆ. ಚೆಂಡೂರು ಮನೆತನದ ಹರಿತಸ ಗೋತ್ರದವರು.

## ವೈ. ಕೆ. ಕೇಶವಮೂರ್ತಿ

ವಾಸಸ್ಥಳ–ಬೆಂಗಳೂರು. ಮೈಸೂರು ವಿಶ್ವವಿದ್ಯಾಲಯದ ಇಂಜನೀಯರಿಂಗ್ ಪದವೀಧರರು ಮೈಸೂರು ಸರ್ಕಾರದಲ್ಲಿ ಎಕ್ಸಿಕ್ಯೂಟಿವ್ ಇಂಜನೀಯರಾಗಿ ಸೇವೆ ಸಲ್ಲಿಸಿ ನಿವೃತ್ತರಾಗಿದ್ದಾರೆ. ಹವ್ಯಾಸ–ಸದಾ ಇಂಗ್ಲೀಷು ಮತ್ತು ಸಂಸ್ಕೃತ ಗ್ರಂಥಪಠನೆ. ಇವರು ತುಮಕೂರು ಪ್ರೌಢಶಾಲೆಯಲ್ಲಿ ಉಪಾಧ್ಯಾಯರಾಗಿದ್ದ ಕೃಷ್ಣಾಚಾರ್ಯರ ಹಿರಿಯ ಮಕ್ಕಳು. ಹರಿತಸ ಗೋತ್ರದವರು

## ಕೊರಟಿ ಶ್ರೀನಿವಾಸರಾಯರು

ವಾಸಸ್ಥಳ–ಬೆಂಗಳೂರು. ಎಂ. ಎ , ಬಿ ಕಾಂ. ಪದವೀಧರರು. ಆಚಾರ್ಯಪಾಠಶಾಲಾಕಾಲೇಜಿನಲ್ಲಿ ಕನ್ನಡ ವಿಭಾಗದ ಪ್ರಾಧ್ಯಾಪಕರು. ಇವರು ಬಹು ಸಂಖ್ಯಾತ ಕಾದಂಬರಿಗಳನ್ನು ಕನ್ನಡ ಭಾಷೆಯಲ್ಲಿ ರಚಿಸಿ ಕನ್ನಡ ಸಾರಸ್ವತಪ್ರಪಂಚದಲ್ಲಿ ಪ್ರಸಿದ್ಧರಾಗಿದ್ದಾರೆ ಆಧ್ಯಾತ್ಮಬೋಧಕವಾದ ಮಹಾಪುರುಷರ ಜೀವನ ಚರಿತ್ರೆಗಳನ್ನು ರಚಿಸಿ ಓದುಗರಿಗೆ ಮಹದುಪಕಾರವನ್ನು ಮಾಡಿದ್ದಾರೆ ಇವು ಸುಮಧ್ವವಿಜಯವನ್ನನುಸರಿಸಿದ ಶ್ರೀಮನ್ಮಧ್ವಾಚಾರ್ಯರ ಚರಿತ್ರೆ, ವ್ಯಾಸಯೋಗಿಚರಿತೆಯನ್ನನುಸರಿಸಿದ ವ್ಯಾಸರಾಜರ ಚರಿತ್ರೆ, ವ್ಯಾಸತೀರ್ಥರ ಜಯತೀರ್ಥ ವಿಜಯವನ್ನನುಸರಿಸಿದ ಜಯತೀರ್ಥರ ಚರಿತ್ರೆ, ರಾಘವೇಂದ್ರ ವಿಜಯಕ್ಕನುಸರಿಸಿದ, ರಾಘವೇಂದ್ರರ ಚರಿತ್ರೆ ಮತ್ತು ವಾದಿರಾಜ ಗುರು ಚರಿತಾಮೃತವನ್ನನುಸರಿಸಿದ ವಾದಿರಾಜರ ಚರಿತ್ರೆ,. ಸದಾ ಸದ್ಗ್ರಂಥ ನಿರ್ಮಾಣ ಕಾರ್ಯದಲ್ಲಿ ನಿರತರಾಗಿದ್ದಾರೆ. ಕೌಶಿಕ ಗೋತ್ರದವರು.

## ಎಂ. ಎಸ್. ಶೇಷಗಿರಿರಾಯರು

ವಾಸಸ್ಥಳ–ಬೆಂಗಳೂರು. ಇವರ ಪೂರ್ವಿಕರ ಸ್ಥಳ ಮಾಗಡಿ. ಮೈಸೂರು ಅರಮನೆ ಸೇವೆಯಲ್ಲಿದ್ದ ಶ್ರೀನಿವಾಸರಾಯರ ಮಕ್ಕಳು. ಇವರು ಕಮಲ ನೆಹರೂ ಸ್ಕೂಲುಗಳು ಮತ್ತು ಕಾಲೇಜುಗಳನ್ನು ಸ್ಥಾಪಿಸಿ ಬಹುಜನರಿಗೆ ವಿದ್ಯಾಭ್ಯಾಸಕ್ಕೆ ಅನುಕೂಲ ಮಾಡಿಕೊಟ್ಟಿದ್ದಾರೆ ಉದಾರ ದಾನಿಗಳು ಬೆಂಗಳೂರಿನ ಜಯನಗರದ ರಾಘವೇಂದ್ರಸ್ವಾಮಿಗಳ ಮಠಕ್ಕೂ, ಮುಳಬಾಗಲು ನರಸಿಂಹ ತೀರ್ಥದ ಕಟ್ಟಡಕ್ಕೂ ಉದಾರ ಧನಸಹಾಯ ಮಾಡಿದ್ದಾರೆ

## ಟಿ. ವಿ. ಗೋಪೀನಾಥದಾಸರು

ವಾಸಸ್ಥಳ ಬೆಂಗಳೂರು. ಇವರು ಪ್ರಸಿದ್ಧ ವೀಣೆ ವಿದ್ವಾಂಸರು ಮತ್ತು ಅಭಿನಯಕೋವಿದರು. ಪ್ರಭಾತವಿದ್ಯಾಕಲಾಸಂಸ್ಥೆಯನ್ನು ದಕ್ಷತೆಯಿಂದ ನಿರ್ವಹಿಸುತ್ತಿದ್ದಾರೆ ಇವರ ಹವ್ಯಾಸ ಅನೇಕ ಮುಖ. ನಾಟಕಕಲೆಯಲ್ಲಿ ಅಭಿರುಚಿ ಸ್ವಯಂ ನಾಟಕಗಳನ್ನು ರಚಿಸಿ ರಂಗಸ್ಥಳದಲ್ಲಿ ಪ್ರದರ್ಶಿಸುತ್ತಾರೆ. ವಾದ್ಯವೃಂದವನ್ನೂ ನಿರ್ವಹಿಸುತ್ತಿದ್ದಾರೆ ಮನೆಯಲ್ಲಿಯೇ ಸುಸಜ್ಜಿತವಾದ ಸ್ಟುಡಿಯೋವನ್ನು ನಿರ್ಮಿಸಿದ್ದಾರೆ ವಸಿಷ್ಠ ಗೋತ್ರದವರು

## ಕೆ. ಗುಂಡೂರಾಯರು

ವಾಸಸ್ಥಳ ಹೈದರಾಬಾದು ಪೂರ್ವಿಕರ ವಾಸಸ್ಥಳ–ಅನಂತಪುರದ ಜಿಲ್ಲಾ ಕಂಬದೂರು ವಿದ್ಯಾಭ್ಯಾಸ ಇಂಜನೀಯರಿಂಗ್ ಪದವೀಧರರು ಆಂಧ್ರ ಸರ್ಕಾರದ ಸೇವೆಯಲ್ಲಿದ್ದು ಸೂಪರಿಂಟೆಂಡಿಂಗ್ ಇಂಜಿನೀಯರಾಗಿ ನಿವೃತ್ತರಾದವರು ಹವ್ಯಾಸ–ಸದಾಚಾರದಲ್ಲಿ ನಿರತರಾಗಿ ದೇವ ಬ್ರಾಹ್ಮಣ ತರ್ಪಕರು. ಇವರು ಜಾಮದಗ್ನಿ ಗೋತ್ರದವರು ವಿವಾಹದ ಮೂಲಕ ಶ್ರೀಪಾದರಾಜರ ಮಠದ ಶತಾಯುಷಿ ಶ್ರೀಸತ್ಯನಿಧಿತೀರ್ಥರ ಪೂರ್ವಾಶ್ರಮದ ಬಂಧು ವರ್ಗಕ್ಕೆ ಸೇರಿದವರು.

## ಡಾ॥ ಕೆ. ರಾಘವೇಂದ್ರರಾಯರು

ವಾಸಸ್ಥಳ–ಚಿತ್ತೂರು. ಪೂರ್ವೀಕರ ಸ್ಥಳ ಹಿಂದೂಪುರ. ವಿದ್ಯಾಭ್ಯಾಸ ಉನ್ನತ ವೈದ್ಯ ವಿದ್ಯಾಪದವೀಧರರು ಆಂಧ್ರ ಸರ್ಕಾರದ ಸೇವೆಯಲ್ಲಿ ಚಿತ್ತೂರು ಜಿಲ್ಲಾ ಮುಖ್ಯ ಆಸ್ಪತ್ರೆಯ ಮುಖ್ಯ ವೈದ್ಯಾಧಿಕಾರಿಗಳಾಗಿ ಜನಾನುರಾಗಿಗಳಾದ ವೈದ್ಯರಾಗಿದ್ದಾರೆ. ಇವರು ಕಾಶಿ ಮನೆತನದ ಕಾಶ್ಯಪ ಗೋತ್ರಕ್ಕೆ ಸೇರಿದವರು ಮತ್ತು ಹಿಂದೂಪುರದ ಗಣ್ಯ ವ್ಯಕ್ತಿಗಳಾಗಿದ್ದ ಕಾಶಿ ಶ್ರೀನಿವಾಸ ರಾಯರ ಕಿರಿಯ ಮಕ್ಕಳು, ಹವ್ಯಾಸ– ಸಂಸ್ಕೃತಭಾಷಾ ಜ್ಞಾನವಿದೆ. ಇತಿಹಾಸಗಳ ಮತ್ತು ಶಾಸ್ತ್ರ ಗ್ರಂಥಗಳ ಪಠನದಲ್ಲಿ ನಿರತರಾಗಿದ್ದಾರೆ

## ಡಿ. ಎಸ್. ಕೃಷ್ಣಾಚಾರ್ಯರು

ವಾಸಸ್ಥಳ-ಬೆಂಗಳೂರು. ವಿದ್ಯಾಭ್ಯಾಸ-ಮೈಸೂರು ವಿಶ್ವವಿದ್ಯಾನಿಲಯದ ಭೌತಿಕ ಶಾಸ್ತ್ರದ ಎಂ ಎಸ್ಸಿ ಪದವೀಧರರು. ಹಿರಿಯರಲ್ಲಿ ಸಂಸ್ಕೃತ ಶಾಸ್ತ್ರಾಭ್ಯಾಸ. ಉದ್ಯೋಗ–ಬೆಂಗಳೂರು ಬಸವನಗುಡಿಯಲ್ಲಿ "ಪ್ರಭಾ ಮುದ್ರಣಾಲಯ"ವೆಂಬ ಉತ್ತಮ ಮುದ್ರಣಕ್ಕೆ ಪ್ರಸಿದ್ಧವಾದ ಮುದ್ರಣಾಲಯದ ಭಾಗಸ್ಥರು. ಕನ್ನಡ, ಇಂಗ್ಲೀಷು, ದೇವನಾಗರೀ ಮತ್ತು ಹಿಂದಿ ಭಾಷೆ ಸಂಸ್ಕೃತಗಳ ಮುದ್ರಣವು ನಡೆಯುತ್ತದೆ. ಭಾಷ್ಯದೀಪಿಕೆ ಮುಂತಾದ ಅನೇಕ ಗ್ರಂಥಗಳೂ ಮತ್ತು ಶ್ರೀಜಗನ್ನಾಥ ದಾಸರ ಹರಿಕಥಾಮೃತಸಾರ ಮುಂತಾದ ಕನ್ನಡ ಗ್ರಂಥಗಳೂ ಇಲ್ಲಿ ಮುದ್ರಿತವಾಗಿವೆ ಇವರು ಸದಾಚಾರ ಸಂಪನ್ನರಾಗಿ ಶಾಸ್ತ್ರಾಭ್ಯಾಸದಲ್ಲಿ ನಿರತರಾಗಿದ್ದಾರೆ, ಲೌಕಿಕದಲ್ಲಿಯೂ ಜನಾನುರಾಗಿಗಳಾಗಿದ್ದಾರೆ ಬೆಟ್ಟದ ಮನೆತನದ ವಿಶ್ವಾಮಿತ್ರ ಗೋತ್ರಕ್ಕೆ ಸೇರಿದವರು. ಗೌಡಗೆರಿ ಶ್ರೀನಿವಾಸಾಚಾರ್ಯರ ಮಕ್ಕಳು. ಗಮಕಿ ರಾಘವೇಂದ್ರರಾಯರ ಬೀಗರು

## ನರಗನಹಳ್ಳಿ ಜಯರಾಯರು

ವಾಸಸ್ಥಳ-ದಾವಣಗೆರೆ. ವಿದ್ಯಾಭ್ಯಾಸ–ನ್ಯಾಯಶಾಸ್ತ್ರ ಪದವೀಧರರು. ಉದ್ಯೋಗ–ಸುಪ್ರಸಿದ್ಧ ನ್ಯಾಯವಾದಿಗಳು–ಸದಾಚಾರ ಸಂಪನ್ನರು ಮತ್ತು ದೈವ ಗುರು ಹಿರಿಯರಲ್ಲಿ ಶ್ರದ್ಧಾವಂತರು. ದಾವಣಗೆರೆಯ ದೀಕ್ಷಿತರ ರಸ್ತೆ

ಯಲ್ಲಿ ನೂತನವಾಗಿ ನಿರ್ಮಾಣವಾಗಿರುವ ಶ್ರೀರಾಘವೇಂದ್ರಸ್ವಾಮಿಮಠದ ಸ್ಥಾಪನಾಕಾರ್ಯದಲ್ಲಿ ಹುಲಿಕುಂಟೆರಾಯರು, ಜಯರಾಯರು ಮತ್ತು ನಾಗ ರಾಜರಾಯರು ಹೆಚ್ಚಿನ ಪಾತ್ರ ವಹಿಸಿದವರು. ಆ ಮಠದ ಸರ್ವತೋಮುಖ ವಾದ ಏಳಿಗೆಗೂ ಕಾರಣರಾಗಿರುವರು. ಜಮದಗ್ನಿ ಗೋತ್ರೋತ್ಪನ್ನರು,

## ಎಚ್. ಬಾದರಾಯಣಾಚಾರ್ಯರು ಮತ್ತು ಎಚ್. ಕೆ ಭೀಮಸೇನಾಚಾರ್ಯರು

ವಾಸಸ್ಥಳ–ಮುಳಬಾಗಲು ಮತ್ತು ಬೆಂಗಳೂರು. ವಿದ್ಯಾಭ್ಯಾಸ ತಮ್ಮ ಹಿರಿಯರಾದ ಶ್ರೀಸತ್ಯನಿಧಿತೀರ್ಥರಲ್ಲಿ. ಮಠದ ದಿವಾನರಾಗಿ ಸಂಸ್ಥಾನದ ಕಾರ್ಯ ಗಳನ್ನು ದಕ್ಷತೆಯಿಂದ ನಿರ್ವಹಿಸುತ್ತಿದ್ದಾರೆ. ನರಸಿಂಹ ತೀರ್ಥದಲ್ಲಿ ಶ್ರೀಶ್ರೀಪಾದ ರಾಜರ ಆರಾಧನೆಯನ್ನೂ ಮತ್ತು ಮಠದಲ್ಲಿ ಮಹಾಸಮಾರಾಧನೆಯನ್ನು ವಿಜೃಂಭಣೆಯಿಂದ ನಡೆಸಿ ಸಹಸ್ರಾರು ಜನರಿಗೆ ಮೃಷ್ಟಾನ್ನದಾನ ಮಾಡಿಸಿ, ಭೂರಿ ದಕ್ಷಿಣೆಯನ್ನೂ ಏರ್ಪಡಿಸಿರುತ್ತಾರೆ. ಮುಳಬಾಗಲಿನಲ್ಲಿ ಒಂದು ವೈದಿಕ ಪಾಠಶಾಲೆಯನ್ನೂ ಏರ್ಪಡಿಸಿ ನಿರ್ವಹಿಸುತ್ತಿದ್ದಾರೆ. ಇವರು ಗೌತಮ ಗೋತ್ರಕ್ಕೆ ಸೇರಿದವರು. ಲೌಕಿಕ ಕಾರ್ಯಗಳಲ್ಲಿಯೂ ನಿಪುಣರಾಗಿದ್ದಾರೆ. ಬಾದರಾಯಣಾ ಚಾರ್ಯರು ಶ್ರೀಸತ್ಯನಿಧಿತೀರ್ಥರ ಪೂರ್ವಾಶ್ರಮದ ದ್ವಿತೀಯ ಪುತ್ರರು ಭೀಮಸೇನಾಚಾರ್ಯರು ಇವರ ತಮ್ಮ. ಇವರು ಮುಳಬಾಗಲು ಮುನಿಸಿ ಪಾಲಿಟಿಯ ಚೇರ್ಮನ್ ರಾಗಿದ್ದು ಜನೋಪಕಾರಿ ಕೆಲಸಗಳನ್ನು ಮಾಡಿಸಿದ್ದಾರೆ, ಬೆಂಗಳೂರು ರಾಘವೇಂದ್ರ ಕಾಲೋನಿಯಲ್ಲಿರುವ ಶ್ರೀಶ್ರೀಪಾದರಾಜರಮಠದ ಯಜಮಾನ್ಯವನ್ನು ವಹಿಸಿದ್ದಾರೆ. ಬಾದರಾಯಣಾಚಾರ್ಯರು ಮಠದ ಲೌಕಿಕ ವ್ಯವಹಾರಗಳನ್ನು ನೋಡಿಕೊಳ್ಳುತ್ತಿದ್ದಾರೆ. ಈಗ ಶ್ರೀಶ್ರೀಪಾದ ರಾಜರ ಮಠದಲ್ಲಿ ಪೀಠಸ್ಥರಾಗಿರುವ ಶ್ರೀವಿಜಯನಿಧಿತೀರ್ಥರು ಇವರ ಸೋದರತ್ತೆಯ ಮಕ್ಕಳು ; ಅಲ್ಲದೆ ಇವರ ತಂಗಿಯ ಯಜಮಾನರು. ಜನಾನುರಾಗಿಗಳು ದೇವ ಬ್ರಾಹ್ಮಣ ತರ್ಪಕರು. ವೈದಿಕ ಕಾರ್ಯಗಳಲ್ಲಿ ಆಸಕ್ತರು. ವಿದ್ಯಾರ್ಥಿಗಳಿಗೆ ಅಶನವಸನಗಳನ್ನು ಕಲ್ಪಿಸಿರುವ ಮಹನೀಯರು ಸಹನಶೀಲರು. ಶ್ರೀಸತ್ಯನಿಧಿತೀರ್ಥರಲ್ಲಿದ್ದ ಸಕಲ ಸದ್ಗುಣಗಳೂ ಇವರಲ್ಲಿ ಹೂರ್ತಿಮತ್ತಾಗಿವೆ, ಸದಾಚಾರಿಗಳು ಹಸನ್ಮುಖಿಗಳು ಕೊಡುಗೈದಾನಿಗಳು.

## ಸಿ ಎಂ. ನಾಗೇಶರಾಯರು

ವಾಸಸ್ಥಳ–ಚನ್ನಕೇಶವಪುರ ಪಾವುಗಡದ ಸಮೀಪದಲ್ಲಿರುವುದು. ಇದಕ್ಕೆ ಪೂರ್ವದಲ್ಲಿ "ಹಂದಿಕುಂಟೆ" ಎಂಬ ಹೆಸರಿತ್ತು. ಇವರ ಪೂರ್ವೀಕರು ಭೀಮಣ್ಣನವರು ಸಾವಿರಾರು ಎಕರೆ ಭೂ ಒಡೆಯರು. ಶ್ರೀಮಂತ ಕುಟುಂಬ ದವರು. ದಾನಧರ್ಮಗಳಲ್ಲಿ ಎತ್ತಿದ ಕೈ, ಚನ್ನಕೇಶವದೇವರ ಆಲಯವನ್ನು ಕಟ್ಟಿಸಿದ್ದಾರೆ ರಥೋತ್ಸವವೂ ವಿಜೃಂಭಣೆಯಿಂದ ಜರಗುತ್ತಿದೆ. ಒಂದು ಕಲ್ಯಾಣ ಮಂಟಪವನ್ನೂ ಕಟ್ಟಿಸಿದ್ದಾರೆ. ಇವರು ದೊಡ್ಡ ಜಮೀನುದಾರರು, ವ್ಯಾಪಾರಸ್ಥರು ಮತ್ತು ಜನಾನುರಾಗಿಗಳೂ ಆಗಿದ್ದಾರೆ. ಶ್ರೀವತ್ಸ ಗೋತ್ರ ದವರು ವೈ ಎಸ್. ಹೊಸಕೋಟೆ ಪ್ರಾಂತ್ಯದಲ್ಲಿ ಗಣ್ಯವ್ಯಕ್ತಿಗಳಾಗಿದ್ದ ಪೋತಗಾನಹಳ್ಳಿ ಶೇಷಗಿರಿರಾಯರ ಸಂಬಂಧಿಗಳು. ಗೌಡಗೆರೆ ಬಿಂದು ಮಾಧವಚಾರ್ಯರ ಅಳಿಯಂದಿರು. ಸಿ. ಮಾಧವರಾಯರ ಮಕ್ಕಳು.

## ಜೀಬಿ ರಾಘವೇಂದ್ರಾಚಾರ್ಯರು

ವಾಸಸ್ಥಳ–ಹೊಳವನಹಳ್ಳಿ. ಆಂಗ್ಲ ವಿದ್ಯಾ ಪದವೀಧರರು. ಬೆಂಗಳೂರು ನ್ಯಾಷನಲ್ ಹೈಸ್ಕೂಲಿನಲ್ಲಿ ಉಪಾಧ್ಯಾಯರಾಗಿದ್ದು ಅನಂತರ ಮೈಸೂರು ಸರ್ಕಾರದ ವಿದ್ಯಾಭ್ಯಾಸ ಇಲಾಖೆಯಲ್ಲಿ ಇನ್ಸ್‌ಪೆಕ್ಟರು ಆಗಿದ್ದು ನಿವೃತ್ತ ರಾದವರು, ಸದಾ ಖಾದಿಧಾರಿಗಳು ರಾಜಕೀಯದಲ್ಲಿ ಆಸಕ್ತಿ ಉಳ್ಳವರು. ಕಾಂಗ್ರೆಸ್ಸಿನವರು ಅನೇಕ ರಾಜಕೀಯ ಸಮಿತಿಗಳಲ್ಲಿ ಭಾಗವಹಿಸಿದವರು. ಹೈಸ್ಕೂಲಿನ ಸಮಿತಿಯ ಸದಸ್ಯರು. ಇವರ ಸಹಧರ್ಮಿಣಿಯೂ ಸಹ ಅನೇಕ ಸಮಿತಿಗಳಲ್ಲಿ ಭಾಗವಹಿಸಿದ್ದವರು ಶಿಶುವಿಹಾರವನ್ನು ನಡೆಸುತ್ತಿದ್ದಾರೆ. ಇವರ ತಾಯಿ ತುಂಗಮ್ಮನವರು ಪ್ರಸಿದ್ಧ ವಿದ್ವಾಂಸರಾದ ಚಿಕ್ಕಬಳ್ಳಾಪುರದ ಆಚಾರ್ಯರ ಮೊಮ್ಮಗಳು ಗೌಡಗೆರೆ ಆಚಾರ್ಯರ ಸೋದರ ತಂಗಿ. ಹಿಂದಿನ ಪ್ರಜಾಪ್ರತಿನಿಧಿಸಭೆಯ ಸದಸ್ಯರಾಗಿದ್ದರು. ಹೊಳವನಹಳ್ಳಿಯಲ್ಲಿರುವ ಎಚ್. ಎಂ. ರಾಮಚಂದ್ರಾಚಾರ್ಯರು, ಇವರ ಜ್ಞಾತಿಸಹೋದರರು ಕಾಶ್ಯಪ ಗೋತ್ರದವರು. ಪಿ.ಎಚ್. ಕೃಷ್ಣರಾಯರ ಬೀಗರು

## ರಾಣ್ಯದ ವಂಶದವರು

ಇವರ ಪೂರ್ವಿಕರ ಸ್ಥಳ ಚಿತ್ರದುರ್ಗ ಮತ್ತು ಚಳ್ಳಕೆರೆ. ಭಾರದ್ವಾಜ ಗೋತ್ರದವರು. ಇವರ ಪೈಕಿ ಕೃಷ್ಣರಾಯರು, ರಾಮರಾಯರು ಮತ್ತು ನಾಗೇಶ ರಾಯರು ಮೊದಲಿಗೆ ಅಂಗ್ಲ ವಿದ್ಯಾ ಪದವೀಧರರಾದವರು. ಕೃಷ್ಣರಾಯರು ವಿದ್ಯಾಭ್ಯಾಸ ಇಲಾಖೆಯಲ್ಲಿ ಮೈಸೂರು ಸರ್ಕಾರದ ಸೇವೆ ಸಲ್ಲಿಸಿದವರು. ಇವರಿಗೆ ಇಬ್ಬರು ಮಕ್ಕಳು. ಎರಡನೆಯವರ್ ಡಾ। ಆರ್.ಕೆ ರಾಜಾರಾಯರು. ಕಾಶಿ ವಿಶ್ವವಿದ್ಯಾಲಯದಲ್ಲಿ ತೈಲ ವಿಭಾಗದ ಎಂ.ಎಸ್ಸಿ ಪದವೀಧರರು. ನಾಲ್ಕು ವರ್ಷಗಳ ಕಾಲ ಸ್ಟಾಂಡರ್ಡ್ ಆಯಿಲ್ ಕಂಪೆನಿಯ ಮದರಾಸ್ ಶಾಖೆಯಲ್ಲಿ ಕೆಲಸ ಮಾಡಿ, ನಂತರ ಸ್ವಂತ ಉದ್ಯೋಗ ನಿರತರಾಗಿದ್ದರು. ಈಗ ಹದಿನೈದು ವರ್ಷಗಳಿಂದ ಹೋಮಿಯೋಪತಿ ವೈದ್ಯವೃತ್ತಿಯಲ್ಲಿ ವಿಚಕ್ಷಣರಾಗಿ ಸ್ವಂತ ಚಿಕಿತ್ಸಾಲಯವನ್ನು ಹೊಂದಿದ್ದಾರೆ. ಅಯಸ್ಕಾಂತದ ಸಹಾಯದಿಂದ ರೋಗ ವನ್ನು ವಿಶ್ಲೇಷಿಸಿ ಅದನ್ನು ಗುಣಪಡಿಸುವ ವಿಧಾನವನ್ನೂ ಕಂಡುಹಿಡಿಯುವ ಚಿಕಿತ್ಸೆಪದ್ಧತಿಯಲ್ಲಿ ಸಿದ್ಧಹಸ್ತರಾಗಿದ್ದಾರೆ.

ಹವ್ಯಾಸ-ದಾಸಕೂಟದಲ್ಲಿ ಗಣ್ಯರಾಗಿದ್ದು ಪ್ರಸಿದ್ಧ ದಾಸರುಗಳ ಮತ್ತು ಶ್ರೀರಾಘವೇಂದ್ರಸ್ವಾಮಿಗಳ ಆರಾಧನೆಗಳನ್ನು ಶ್ರದ್ಧಾಭಕ್ತಿಗಳಿಂದಲೂ ವಿಜೃಂ ಭಣೆಯಿಂದಲೂ ಆಚರಿಸುತ್ತಿದ್ದಾರೆ. ಶ್ರೀಹರಿವಿಠಲ ಪ್ರಕಾಶನವೆಂಬ ಪ್ರಕಾಶನ ಸಂಸ್ಥೆಯ ಮಾಲೀಕರಾಗಿ ಶ್ರೀಮತ್ಪೂಜ್ಯ ಜಗನ್ನಾಥದಾಸರಾಯರಿಂದ ರಚಿತವಾದ ಶ್ರೀಹರಿಕಥಾಮೃತಸಾರವನ್ನು, ಶ್ರೀಸತ್ಯಪರಾಯಣತೀರ್ಥರ ಶಿಷ್ಯರಾದ ಶ್ರೀಸಂಕ ರ್ಷಣ ಒಡೆಯರರು ರಚಿಸಿದ ಅಮೋಘ ವ್ಯಾಖ್ಯಾನಸಹಿತವಾಗಿ ಮುದ್ರಿಸಿ, ಪ್ರಚುರ ಪಡಿಸಿ, ಆಸ್ತಿಕರಿಗೆ ಮಹದುಪಕಾರವನ್ನು ಮಾಡಿದ್ದಾರೆ. ಇವರೇ "ಮಾಧ್ವಿಕವಂಶಪ್ರದೀಪ"ದ ಸಂಗ್ರಹಕಾರರು ಮತ್ತು ಪ್ರಕಾಶಕರು. ಮಾಧ್ವರಿಗೆ ಉಪಯೋಗವಾಗುವಂಥ ಇನ್ನೂ ಅನೇಕ ಗ್ರಂಥಗಳನ್ನು ಪ್ರಕಾಶ ಪಡಿಸುವುದರಲ್ಲಿ ಆಸಕ್ತರಾಗಿದ್ದಾರೆ.

ಎರಡನೆಯವರಾದ ಆರ್. ರಾಮರಾಯರು ಮೈಸೂರು ಸರ್ಕಾರದ ಶಾಸನ ಇಲಾಖೆಯಲ್ಲಿ ಮುಖ್ಯಸ್ಥರಾಗಿದ್ದು ನಿವೃತ್ತರಾಗಿದ್ದರು. ಪ್ರಸಿದ್ಧ

ಸಮಾಜ ಸೇವಕಿ ಎಂ. ಆರ್. ಲಕ್ಷ್ಮಮ್ಮನವರು ಈ ಮಹನೀಯರ ಮಗಳು. ಇಂಡಿಯನ್ ಇನ್‌ಸ್ಟಿಟ್ಯೂಟ್ ಆಫ್ ಸ್ಟಾಟಿಸ್ಟಿಕ್ಸ್‌ನಲ್ಲಿ ಉನ್ನತ ಹುದ್ದೆಯಲ್ಲಿರುವ ಇವರ ಪುತ್ರ ಆರ್ ಅನಂತರಾಯರು.

ಮೂರನೆಯವರಾದ ಆರ್. ನಾಗೇಶರಾಯರೂ ಸಹ ಮೈಸೂರು ಸರ್ಕಾರದ ವಿದ್ಯಾಭ್ಯಾಸ ಇಲಾಖೆಯಲ್ಲಿ ಹೈಸ್ಕೂಲ್ ಹೆಡ್ ಮಾಸ್ಟರ್ ಆಗಿ ನಿವೃತ್ತರಾಗಿದ್ದಾರೆ ಇವರ ಮಗ ಆರ್. ಮುರಳಿಧರ ವಿದೇಶದಲ್ಲಿ ಉದ್ಯೋಗದಲ್ಲಿದ್ದಾರೆ. ರಾಜಾರಾಯರ ಇಬ್ಬರು ಪುತ್ರರೂ ಇಂಜನೀಯರಿಂಗ್ ಪದವೀಧರರಾಗಿದ್ದಾರೆ. ಬೆಂಗಳೂರಿನಲ್ಲಿ ಉನ್ನತ ಹುದ್ದೆಗಳಲ್ಲಿದ್ದಾರೆ.

## ಡಾ। ಬಿ ವಿ ರಾಘವೇಂದ್ರರಾಯರು

ವಾಸಸ್ಥಳ-ಬೆಂಗಳೂರು. ವಿದ್ಯಾಭ್ಯಾಸ ಬೆಂಗಳೂರು ಸೆಂಟ್ರಲ್ ಕಾಲೇಜಿನಲ್ಲಿ. ಭೌತಶಾಸ್ತ್ರದಲ್ಲಿ ಎಂ.ಎಸ್ಸಿ ಪದವೀಧರರು. ಇವರು ರಾವ್ ಬಹದೂರು ಬಿ ವೆಂಕಟೇಶಾಚಾರ್ಯರ ಹಿರಿಯ ಪುತ್ರರು. ಹೊಸಪೇಟೆ ರಾವ್‌ಬಹದೂರು ಸಿ ಹನುಮಂತಗೌಡರ ಅಳಿಯಂದಿರು. ಸೆಂಟ್ರಲ್ ಕಾಲೇಜಿನಲ್ಲಿ ಕೆಲವು ಕಾಲ ಅಧ್ಯಾಪಕರಾಗಿದ್ದರು. ಅನಂತರ ಸುಪ್ರಸಿದ್ಧ ಟಾಟಾ ವಿಜ್ಞಾನಮಂದಿರದಲ್ಲಿ ಪುಸ್ತಕಾಲಯದ ಅಧಿಕಾರಿಗಳಾಗಿ ನಿವೃತ್ತರಾದರು. ನಿವೃತ್ತಿನಂತರ ದೆಹಲಿಯಲ್ಲಿಯೂ ಕೆಲಸ ಮಾಡಿದರು. ಇವರ ಮೊದಲನೆಯ ತಮ್ಮ- ಬಿ. ವಿ. ನಾರಾಯಣರಾಯರು ವಿಜಯ ಕಾಲೇಜಿನ ಅಧ್ಯಕ್ಷರಾಗಿದ್ದು ನಿವೃತ್ತರಾಗಿದ್ದಾರೆ. ಇನ್ನೊಬ್ಬ ತಮ್ಮ ಬಿ. ವಿ. ಕೃಷ್ಣಮೂರ್ತಿಗಳು ಮಣಿಪಾಲದಲ್ಲಿ ತಾಂತ್ರಿಕ ಮಹಾ ಶಾಲೆಯಲ್ಲಿ ಪ್ರಾಧ್ಯಾಪಕರೂ ಅಧ್ಯಕ್ಷರೂ ಆಗಿದ್ದಾರೆ. ಆತ್ರೇಯಸ ಗೋತ್ರದವರು. ವಿದ್ಯುಚ್ಛಕ್ತಿ ಇಲಾಖೆ ನಿವೃತ್ತ ಸೂಪರಿಂಟೆಂಡಿಂಗ್ ಇಂಜನೀಯರು ಜಿ. ಎಂ. ಕೃಷ್ಣಮೂರ್ತಿ ಇವರ ಸಂಬಂಧಿಗಳು. ಸರಸಕವಿಸಾರ್ವಭೌಮ ಅಚ್ಚಣ್ಣಾಚಾರ್ಯರ ಪ್ರಪೌತ್ರರು ವ್ಯಾಸರಾಯಾಚಾರ್ಯರ ಪೌತ್ರರು.

## ಎಂ. ಎಸ್. ಮಾಧವರಾಯರು

ವಾಸಸ್ಥಳ–ಬೆಂಗಳೂರು. ವಿದ್ಯಾಭ್ಯಾಸ ಮೈಸೂರು ವಿಶ್ವವಿದ್ಯಾನಿಲಯದ ಸಿವಿಲ್ ಇಂಜನೀಯರಿಂಗ್ ಪದವೀಧರರು ಮೈಸೂರು ಸರ್ಕಾರದಲ್ಲಿ ಸೂಪರಿಂಟೆಂಡಿಂಗ್ ಇಂಜನೀಯರಾಗಿ ಸೇವೆ ಸಲ್ಲಿಸಿ ನಿವೃತ್ತರಾಗಿದ್ದಾರೆ ಪೂರ್ವೀಕರ ವಾಸಸ್ಥಳ ಮುಳಬಾಗಲು ಸಮೀಪ ಮಾರಂಡಹಳ್ಳಿ.

## ಜೆ. ರಂಗನಾಥರಾವ್

ವಾಸಸ್ಥಳ–ಬೊಂಬಾಯಿ. ಪೂರ್ವೀಕರ ಸ್ಥಳ ಚಿಕ್ಕಬಳ್ಳಾಪುರದ ಸಮೀಪದಲ್ಲಿರುವ ಜಂಗಾನಹಳ್ಳಿ, ವಿದ್ಯಾಭ್ಯಾಸ ಎಂ. ಎ. ಪದವೀಧರರು. ರಿಸರ್ವ್ ಬ್ಯಾಂಕಿನ ಬೆಂಗಳೂರು ಶಾಖೆಯ ಮ್ಯಾನೇಜರಾಗಿದ್ದು ಈಗ ಬೊಂಬಾಯಿ ಶಾಖೆಯಲ್ಲಿ ಪ್ರಧಾನಾಧಿಕಾರಿಗಳಾಗಿದ್ದಾರೆ. ಇವರು ಗೌಡಗೆರೆ ಆಚಾರ್ಯರ ಸಂಬಂಧಿಗಳು. ಶ್ರೀವತ್ಸಗೋತ್ರದವರು. ಡಿ. ಎಸ್. ಗುಂಡಾಚಾರ್ಯರ ಅಳಿಯಂದಿರು. ವೆಂಕಟನಾರಣಪ್ಪನವರ ಪುತ್ರರು.

## ಡಿ. ಆರ್. ರಾಮರಾಯರು

ವಾಸಸ್ಥಳ–ಬೆಂಗಳೂರು ವಿದ್ಯಾಭ್ಯಾಸ ಎಂ. ಎ. ಪದವೀಧರರು. ಹಿಂದಿನ ಮೈಸೂರು ರೈಲ್ವೆ ಇಲಾಖೆಯಲ್ಲಿ ಉದ್ಯೋಗದಲ್ಲಿದ್ದ ಡಿ ರಾಮಚಂದ್ರಾಚಾರ್ಯರ ದ್ವಿತೀಯ ಪುತ್ರರು. ರಿಸರ್ವ್ ಬ್ಯಾಂಕಿನ ಬೆಂಗಳೂರು ಶಾಖೆಯ ಮ್ಯಾನೇಜರಾಗಿ ನಿವೃತ್ತರಾಗಿದ್ದಾರೆ. ನಿವೃತ್ತಿನಂತರ ಇಂಡಿಯನ್ ಓವರ್‌ಸೀಸ್ ಬ್ಯಾಂಕಿನಲ್ಲಿ ಮುಖ್ಯ ಹುದ್ದೆಯಲ್ಲಿದ್ದವರು ಕೌಂಡಿಣ್ಯ ಗೋತ್ರದವರು. ದೊಡ್ಡಬೆಲೆ ವೆಂಕಟೇಶಾಚಾರ್ಯರ ಸಂಬಂಧಿಗಳು. ಇವರ ಅಣ್ಣಂದಿರಾದ ಡಿ. ಆರ್ ಕೃಷ್ಣಮೂರ್ತಿಗಳು ಏಷ್ಯಾಟಿಕ್ ಜೀವವಿಮೆ ಕಂಪೆನಿಯ ಕಲ್ಕತ್ತಾ ಶಾಖೆಯ ಮ್ಯಾನೇಜರ್ ಆಗಿದ್ದರು. ಮೇಲಿನ ಇಬ್ಬರು ಮಹನೀಯರುಗಳು, ರಾಣ್ಯ ರಾಜಾರಾಯರ ಭಾವಂದಿರು ಮತ್ತು ಮಾವಂದಿರು. ಇವರ ಮಗ ಡಾ। ಡಿ. ಆರ್. ಚಂದ್ರ ಕೆನಡಾದಲ್ಲಿದ್ದಾರೆ.

## ಕೆ. ಗೋಪೀನಾಥರಾಯರು

ವಾಸಸ್ಥಳ–ಬೆಂಗಳೂರು. ಪೂರ್ವೀಕರ ಸ್ಥಳ ಹಿಂದೂಪುರ. ವಿದ್ಯಾಭ್ಯಾಸ ಎಂ. ಎ. ಪದವೀಧರರು ಮತ್ತು ಬ್ಯಾಂಕಿಂಗ್ ಪರೀಕ್ಷೆಗಳಲ್ಲಿ ಉತ್ತೀರ್ಣರಾಗಿದ್ದಾರೆ. ಕೆಲವು ಕಾಲ ಇಂಡಿಯನ್ ಬ್ಯಾಂಕಿನಲ್ಲಿ ಅಧಿಕಾರಿಗಳಾಗಿದ್ದು ಅನಂತರ ಬ್ಯಾಂಕ್ ಆಫ್ ಇಂಡಿಯಾದಲ್ಲಿ ವರಿಷ್ಠಾಧಿಕಾರಿಗಳಾಗಿ ನಿವೃತ್ತರಾಗಿದ್ದಾರೆ. ಇವರು ಹಿಂದೂಪುರದ ಗಣ್ಯ ವ್ಯಕ್ತಿಗಳಾದ ಕಾಶಿ ಶ್ರೀನಿವಾಸರಾಯರ ದ್ವಿತೀಯ ಪುತ್ರರು. ನಿವೃತ್ತ ನ್ಯಾಯಾಧಿಕಾರಿಗಳಾದ ಕೆ. ರಘುನಾಥರಾಯರ ತಮ್ಮ ಮತ್ತು ಕರಣಂ ರಾಜಾರಾಯರ ಅಣ್ಣ. ಗೌಡಗೆರೆ ಆಚಾರ್ಯರ ಸಂಬಂಧಿಗಳು ಮತ್ತು ಬಳ್ಳಾರಿಯ ಪ್ರಸಿದ್ಧ ನ್ಯಾಯವಾದಿಗಳಾದ ದೊಡ್ಡಿ ಗುಂಡೂರಾಯರ ಸಂಬಂಧಿಗಳು. ಕಾಶ್ಯಪ ಗೋತ್ರದವರು. ಕಾಶಿ ಮನೆತನದವರು. ಗೌಡಗೆರೆ ಗೋಪಾಲಕೃಷ್ಣಾಚಾರ್ಯರ ಸೋದರಳಿಯ ಡಿ ಎಸ್. ಗುಂಡಾಚಾರ್ಯರ ಬೀಗರು. ಇವರ ಇಬ್ಬರು ಪುತ್ರರು ಉನ್ನತ ಹುದ್ದೆಗಳಲ್ಲಿದ್ದಾರೆ. ಇಬ್ಬರು ಪುತ್ರಿಯರೂ ಇಂಗ್ಲೆಂಡ್ ಮತ್ತು ಅಮೇರಿಕಾದಲ್ಲಿ ಪ್ರಭಾವಶಾಲೀ ವೈದ್ಯರಾಗಿದ್ದಾರೆ.

## ಚನ್ನಪಟ್ಟಣದ ರಾಘವೇಂದ್ರಾಚಾರ್ಯರು

ವಾಸಸ್ಥಳ—ಮೈಸೂರು. ಪೂರ್ವೀಕರ ವಾಸಸ್ಥಳ— ಚನ್ನಪಟ್ಟಣ. ವಿದ್ಯಾಭ್ಯಾಸ–ಪದವೀಧರರು. ಮೈಸೂರು ಸರ್ಕಾರದ ಸೇವೆಯಲ್ಲಿ ಅಸಿಸ್ಟೆಂಟ್ ಕಂಟ್ರೋಲರ್ ಆಗಿದ್ದು ನಿವೃತ್ತರಾಗಿದ್ದಾರೆ. ಇವರು ಉತ್ತಮ ವರ್ಗದ ಪುರೋಹಿತರೂ ಆಗಿದ್ದಾರೆ. ಇವರ ಮೂಲ ಪುರುಷರು ತಿಮ್ಮಣ್ಣಾಚಾರ್ಯರು ಶ್ರೀವ್ಯಾಸರಾಜರ ಬಂಧುಗಳು ಮತ್ತು ಸಮಕಾಲೀನರು. ದ್ವಾದಶ ಸ್ತೋತ್ರಕ್ಕೆ ವ್ಯಾಖ್ಯಾನವನ್ನು ರಚಿಸಿರುತ್ತಾರೆ. ಈ ರಾಘವೇಂದ್ರಾಚಾರ್ಯರ ಪಿತೃಗಳೇ ವೆಂಕಟಸುಬ್ಬಾಚಾರ್ಯರು, ವ್ಯಾಸರಾಜ ಮಠದ ಮಠಾಧಿಕಾರಿಗಳಾಗಿದ್ದವರು. ಇವರ ಪಿತಾಮಹರೇ ಚನ್ನಪಟ್ಟಣದ ಶ್ರೀನಿವಾಸಾಚಾರ್ಯರು. ಇವರು ಗೌಡಗೆರೆ ಆಚಾರ್ಯರ ಸಂಬಂಧಿಗಳು.

## ಕೆ. ವಿ. ರಾಮಚಂದ್ರರಾಯರು

ವಾಸಸ್ಥಳ-ಬೆಂಗಳೂರು. ಕೋಲಾರದ ಕೊಪ್ಪದ ವಾಸುದೇವರಾಯರ ಹಿರಿಯ ಪುತ್ರರು. ಇಂಜನೀಯರಿಂಗ್ ಪದವೀಧರರು. ಹೆಸರಾಂತ ಕಂಟ್ರಾಕ್ಟದಾರರು. ಬೆಂಗಳೂರಿನ ಮಾಧ್ವಯುವಕಸಂಘದ ನಿಕಟ ಸಂಪರ್ಕ ಹೊಂದಿರುವವರು, ಅದರ ಏಳಿಗೆಗೆ, ಅನ್ನಪೂರ್ಣಾ ನಿಧಿಗ ಮುಖ್ಯ ಕಾರಣರು. ಮಾಡಲ್ ಹೌಸ್ ಬ್ಲಾಕ್ ಶ್ರೀರಾಘವೇಂದ್ರ ಸ್ವಾಮಿಗಳ ಮಠದಲ್ಲಿಯೂ ಕಾರ್ಯಕರ್ತರಾಗಿದ್ದು, ಕಲ್ಯಾಣ ಮಂಟಪ ನಿರ್ಮಾಣಕ್ಕೆ ಕಾರಣರಾದವರು. ಮೈಸೂರು ಆಸ್ಥಾನದ ಮಹಾವಿದ್ವಾಂಸರಾಗಿದ್ದ ವಿದ್ವನ್ಮಣಿ ದೊಡ್ಡಬಳ್ಳಾಪುರದ ವಾಸುದೇವಾಚಾರ್ಯರ ಅಳಿಯಂದಿರು. ಇವರ ತಮ್ಮಂದಿರೂ ಉನ್ನತ ಹುದ್ದೆಗಳಲ್ಲಿದ್ದಾರೆ.

## ಶಿವನಗೆರೆ ಶೇಷಗಿರಿರಾಯರು

ವಾಸಸ್ಥಳ-ಮಧುಗಿರಿ ತಾಲ್ಲೂಕು ಶಿವನಗರೆ. ವಿದ್ಯಾಭ್ಯಾಸ ಬೆಂಗಳೂರು ಚಾಮರಾಜೇಂದ್ರ ವೇದ ಮಹಾಪಾಠಶಾಲೆಯಲ್ಲಿ, ವೇದದ ಮಧ್ವರಾಯಾಚಾರ್ಯರಲ್ಲಿ ಯಜುರ್ವೇದವನ್ನು ಘನಾಂತವಾಗಿ ಅಧ್ಯಯನ ಮಾಡಿ ವಿದ್ವತ್ಪರೀಕ್ಷೆಯಲ್ಲಿ ಉತ್ತಮ ತರಗತಿಯಲ್ಲಿ ತೇರ್ಗಡೆಯಾದವರು. ಮಾಧ್ವರಲ್ಲಿ ಕ್ರಮವಾಗಿ ವೇದಾಧ್ಯಯನ ಮಾಡಿರುವವರು ಅತಿ ವಿರಳ. ಇವರು ಶಿಷ್ಯರಿಗೆ ಅಧ್ಯಯನ ಮಾಡಿಸುತ್ತಾ ಊರಿನಲ್ಲಿ ಭೂ ಒಡೆಯರಾಗಿದ್ದಾರೆ.

## ಪಿ. ಎಚ್. ರಾಘವೇಂದ್ರರಾಯರು

ವಾಸಸ್ಥಳ–ಚೆನ್ನಕೇಶವಪುರ. ಪಾವಗಡದ ಸಮೀಪ. ವಿದ್ಯಾಭ್ಯಾಸ ಭೂಗರ್ಭ ಶಾಸ್ತ್ರದಲ್ಲಿ ಕಾಶಿ ಹಿಂದೂ ವಿಶ್ವವಿದ್ಯಾನಿಲಯದ ಎಂ.ಎಸ್ಸಿ ಪದವೀಧರರು. ವಿಸ್ತಾರ ಭೂ ಒಡೆಯರು. ಪ್ರಸಿದ್ಧರಾದ ಪೋತಗಾನಹಳ್ಳಿ ಶೇಷಗಿರಿರಾಯರ ಮಕ್ಕಳಾದ ಹನುಮಂತರಾಯರ ಹಿರಿಯ ಪುತ್ರರು ಹಿಂದೂಪುರದ ಗಣ್ಯವ್ಯಕ್ತಿಗಳಾದ ಕಾಶಿ ಶ್ರೀನಿವಾಸರಾಯರ ಅಳಿಯ. ಟೇಕಹಳ್ಳಿಯವರೂ, ಹೊಳವನಹಳ್ಳಿಯವರೂ ಇವರ ಬಂಧು ವರ್ಗಕ್ಕೆ ಸೇರಿದವರು. ಗೌಡಗೆರೆ ಆಚಾರ್ಯರ ಸಂಬಂಧಿಗಳು.

## ವ್ಯಾಸರಾಯರು ಮತ್ತು ವಿದ್ಯಾಪೀಠಗಳು

ಶ್ರೀವ್ಯಾಸರಾಜರು ಆ ಸೇತು ಹಿಮಾಲಯ ಪರ್ಯಂತ ಸಂಚಾರ ಮಾಡಿ ಮುಖ್ಯ ಪಟ್ಟಣಗಳಲ್ಲಿದ್ದ ಪ್ರತಿವಾದಿಗಳನ್ನು ಜಯಿಸಿ, ಅವರ ವಿದ್ವತ್ತಿಗೆ ತಕ್ಕ ಮರ್ಯಾದೆಯನ್ನೂ ಮಾಡುತ್ತಿದ್ದರು. ಇವರಲ್ಲಿ ಮುಖ್ಯರಾದವರು ಗಧಾಧರ ಮಿಶ್ರರು, ಪಕ್ಷದರ ಮಿಶ್ರರು, ಲಿಂಗಣ್ಣ ಮಿಶ್ರರು, ವಾಜಪೇಯಿ ನಾರಸಿಂಹ ಯೋಗಿಗಳು ಮುಂತಾದವರು. ದ್ವೈತವೇದಾಂತ ವಿದ್ಯೆಯ ಶಾಶ್ವತ ಪ್ರಚಾರಕ್ಕಾಗಿ ಪ್ರಧಾನ ಸ್ಥಳಗಳಲ್ಲಿ ವೇದಾಂತ ವಿದ್ಯಾ ಪೀಠಗಳನ್ನು ಸ್ಥಾಪಿಸಿದರು. ಚರಿತ್ರೆಯ ಆಧಾರದಿಂದ ಅವರು ಸ್ಥಾಪಿಸಿದ ವಿದ್ಯಾಪೀಠಗಳು ಎಂಟೆಂದು ತಿಳಿದು ಬಂದಿದೆ. ಅವರು ಬದುಕಿರುವಾಗ ವಿಜಯನಗರದಲ್ಲ ಕೇಂದ್ರ ವಿದ್ಯಾನಿಲಯವಿತ್ತು. ಭಾರತದ ನಾನಾ ಸ್ಥಳಗಳಿಂದ ಬಂದ ಹತ್ತು ಸಾವಿರ ವಿದ್ಯಾರ್ಥಿಗಳು ವ್ಯಾಸಂಗ ಮಾಡುತ್ತಿದ್ದರು. ವ್ಯಾಸರಾಜರ ಕಾಲ ಕ್ರಿ. ಶ. ೧೪೭೮–೧೫೩೯ ವ್ಯಾಸರಾಜರೇ ಈ ಕೇಂದ್ರ ವಿದ್ಯಾಲಯಕ್ಕೆ ಅಧ್ಯಕ್ಷರಾಗಿ ಸುಮಾರು ೫೦ ವರ್ಷಗಳಿಗೂ ಹೆಚ್ಚು ಕಾಲ ಇದ್ದರು. ಇತರ ಸ್ಥಳದಲ್ಲಿ ಸ್ಥಾಪಿತವಾದ ವಿದ್ಯಾಪೀಠಗಳಲ್ಲಿ ಆಡಳಿತ ಸಮರ್ಥರೂ, ವಿದ್ವಾಂಸರೂ ಆದ ಅಧಿಕಾರಿಗಳನ್ನು ನಿಯಮಿಸಿ, ಮೇಲ್ವಿಚಾರಣೆಯನ್ನು ತಾವೇ ನೋಡಿಕೊಳ್ಳುತ್ತಿದ್ದರು ಅವರು ವೃಂದಾವನಸ್ಥರಾಗುವುದಕ್ಕೆ ಮುಂಚೆ ಎಂಟು ವಿದ್ಯಾಪೀಠಗಳ ಅಧಿಕಾರಗಳನ್ನು ಈ ರೀತಿ ಹಂಚಿದರು—

### ಉತ್ತರ ಹಿಂದೂಸ್ಥಾನ

| ವಿದ್ಯಾಪೀಠಗಳು | ಅಧ್ಯಕ್ಷರು |
|---|---|
| 1) ಹರಿದ್ವಾರ | ಸತ್ಯನಾಥರು |
| 2) ಗಯೆ | ಹರಿಮಿಶ ರು |
| 3) ಕಾಶಿ | ಜಯದೇವರು |
| 4) ವಂಗದೇಶ | ಈಶ್ವರಸೂರಿಗಳು |

### ದಕ್ಷಿಣ ಹಿಂದೂಸ್ಥಾನ

| | |
|---|---|
| 1) ಕುಂಭಕೋಣ | ವಿಜಯೀಂದ್ರರು |

2) ಉಡುಪಿ ವಾದಿರಾಜರು
3) ಮುಳಬಾಗಿಲು ಪ್ರಜ್ಞಾನಿಧಿಗಳು
4) ಕಾಂಚೀಪುರ (ವಿದ್ಯಾನಗರ) ಶ್ರೀನಿವಾಸರು

ಇದನ್ನು ರಾಘವೇಂದ್ರ ಕವಿಯು ಹೀಗೆ ವರ್ಣಿಸಿದ್ದಾನೆ.

ಗುರುವರರು ಶ್ರೀವ್ಯಾಸರಾಯರು ಪರಂಧಾಮಕ್ಕೆ ತೆರಳುವ ಮುನ್ನ ತಮ್ಮ ಘನತರದೆ ವಿದ್ಯಾಪೀಠದಧ್ಯಕ್ಷತೆಯ ಭಾರವನು ಹಲವು ಶಿಷ್ಯರಿಗೊಲಿದಾ ವಿಂಗಡ ಗೈದು ಕೊಟ್ಟರು ಮುಂದೆ ಬಹು ಕಾಲದೊಳು ಈ ರೀತಿಯಲೆ ನಡೆ ಯಲದೆಂಬ ಭರವಸದಿ ||

ವಿಜಯನಗರದ ವಿಶ್ವವಿದ್ಯಾಲಯದೊಳನು ದಿನ ಓದುತಿರ್ಪರು ಹತ್ತು ಸಾಸಿರದೆಣಿಕೆಯುಳ್ಳ ದ್ವೀಪದ್ವೀಪಾಂತರದ ಭಾರತದ ಹಲವು ವಿದ್ಯಾರ್ಥಿಗಳ ತಂಡವು ಅವರವರ ಪ್ರತ್ಯೇಕ ಸ್ಥಳದೊಳುಪಚರಿಸಿ ಅನುಕೂಲಗೈವುತಿರ್ದರು ವ್ಯಾಸರಾಯರು ತಾವೆ ಪ್ರತಿದಿನದಿ ಸತ್ಯನಾಥಗೆ ಆ ಹರಿದ್ವಾರದ ಸುವಿದ್ಯಾ ಪೀಠದಧ್ಯಕ್ಷತೆಯು ಗಯೆಗೆ ಹರಿಮಿಶ್ರ ಜಯದೇವಾಖ್ಯ ಕಾಶಿಕಾಪುರಕೆ ಈಶ್ವರ ಸೂರಿ ಎಂಬುವರು ವಂಗದೇಶಕ್ಕೆ ನೀವಿಹುದು ಪೋಗೆಂದು ನಿರೂಪಕೊಟ್ಟರು ಬರೆದು ಕೈಯೊಳಗೆ ಕುಂಭಕಾಪುರವರಕೆ ವಿಜಯೀಂದ್ರರು ಉಡುಪಿಗೆ ವಾದಿ ರಾಜರು ಮುಳುಬಾಗಿಲಿಗೆ ಪ್ರಜ್ಞಾನಿಧಿಗಳೆಂಬವರು ಉಳಿದ ವಿದ್ಯಾನಗರದಧ್ಯಕ್ಷ ತೆಯು ತಿರುಪತಿ ಕ್ಷೇತ್ರ ದೇವಾಲಯದ ಅಧ್ಯಕ್ಷತೆಯು ಶಿಷ್ಯರಾಗಿಹ ಶ್ರೀನಿವಾಸರಿಗೆ.

## ವ್ಯಾಸತ್ರಯ–ಸಂಕ್ಷೇಪ ಪರಿಚಯ

ಶ್ರೀವ್ಯಾಸರಾಜರಿಂದ ರಚಿತವಾಗಿರುವ ತಾತ್ಪರ್ಯ ಚಂದ್ರಿಕಾ, ನ್ಯಾಯಾ ಮೃತ ಮತ್ತು ತರ್ಕತಾಂಡವ ಗ್ರಂಥಗಳಿಗೆ ವ್ಯಾಸತ್ರಯವೆಂದು ಪ್ರಸಿದ್ಧಿ ವಿಜಯೀಂದ್ರರ ಸಮಕಾಲೀನರೂ ಶೈವಾದ್ವೈತದ ಪಂಡಿತಶ್ರೇಷ್ಠರೂ ಆದ ಕುಂಭಕೋಣದ ಅಪ್ಪಯ್ಯದೀಕ್ಷಿತರು ವ್ಯಾಸತ್ರಯದ ವಿಷಯದಲ್ಲಿ ದ್ರಾವಿಡ ಭಾಷೆಯಲ್ಲಿ ಹೀಗೆ ಹೇಳಿದ್ದಾರೆ–" ವಿರಿಂಚಿಪೋನ ವೆಲ್ಲಿ ಕಾಯಿಂಕಿ ಮೂಣಾಕಟ್ಟು

ಪೋಟ್ಸ್ಟಾರ್ ವ್ಯಾಸರ್". ದ್ವೈತ ಸಿದ್ಧಾಂತವೆಂಬ ಸೌತೆಕಾಯಿಯು ಅದ್ವೈತ ಶಾಸ್ತ್ರಗಳಿಂದ ಬಿರಿದು ಹೋಗುತ್ತಿತ್ತು ವ್ಯಾಸರಾಜರು ಚಂದ್ರಿಕಾ, ನ್ಯಾಯಾಮೃತ ಮತ್ತು ತರ್ಕತಾಂಡವಗಳೆಂಬ ಮೂರು ಕಟ್ಟುಗಳನ್ನು ಹಾಕಿ ದ್ವೈತ ವೇದಾಂತವೆಂಬ ಸೌತೆಕಾಯಿಯು ಬಿರಿಯುವುದನ್ನು ಶಾಶ್ವತವಾಗಿ ತಪ್ಪಿಸಿದರು.

## ತಾತ್ಪರ್ಯ ಚಂದ್ರಿಕಾ

ವೇದ, ಇವುಗಳ ಭಾಗಗಳು, ವಿಭಾಗಗಳು, ಇವುಗಳ ಅರ್ಥವನ್ನು ನಿರ್ಣಯ ಮಾಡುವುದಕ್ಕಾಗಿ, ನಾರಾಯಣಾವತಾರರಾದ ವ್ಯಾಸರು, ಬ್ರಹ್ಮಸೂತ್ರಗಳನ್ನು ರಚಿಸಿ ಸೂತ್ರಕಾರರೆಂದು ಪ್ರಸಿದ್ಧರಾದರು. ಈ ಸೂತ್ರಗಳ ಅರ್ಥವನ್ನು ವಿಶದ ಪಡಿಸುವುದಕ್ಕಾಗಿ, ಮಧ್ವಾಚಾರ್ಯರು, ಭಾಷ್ಯ (ವ್ಯಾಖ್ಯಾನ)ವನ್ನು ರಚಿಸಿ ಭಾಷ್ಯಕಾರರೆಂದು ಪ್ರಸಿದ್ಧರಾದರು ಈ ಭಾಷ್ಯದ ಅರ್ಥವನ್ನು ಸ್ಪಷ್ಟಪಡಿಸುವುದಕ್ಕಾಗಿ, ಜಯತೀರ್ಥರು "ತತ್ತ್ವ ಪ್ರಕಾಶಿಕಾ" ಎಂಬ ಟೀಕೆಯನ್ನು ರಚಿಸಿ, ಟೀಕಾಚಾರ್ಯರೆಂದು ಪ್ರಸಿದ್ಧರಾದರು ಈ "ತತ್ತ್ವಪ್ರಕಾಶಿಕೆಯ" ಮೊದಲು ಎರಡು ಅಧ್ಯಾಯಗಳ ಅರ್ಥವನ್ನು ಸ್ಪಷ್ಟಪಡಿಸುವುದಕ್ಕಾಗಿ ಬ್ರಹ್ಮಣ್ಯತೀರ್ಥರ ಶಿಷ್ಯರಾದ ವ್ಯಾಸರಾಜರು "ತಾತ್ಪರ್ಯಚಂದ್ರಿಕಾ" ಎಂಬ ಮೇರುಕೃತಿರೂಪವಾದ ವ್ಯಾಖ್ಯಾನವನ್ನು ರಚಿಸಿ ಚಂದ್ರಿಕಾಚಾರ್ಯರೆಂದು ಪ್ರಸಿದ್ಧರಾದರು ತತ್ತ್ವಪ್ರಕಾಶಿಕೆಯ ಮೂರು ಮತ್ತು ನಾಲ್ಕನೆಯ ಅಧ್ಯಾಯಗಳ ಅರ್ಥವನ್ನು ಸ್ಪಷ್ಟಪಡಿಸುವುದಕ್ಕಾಗಿ ವ್ಯಾಸರಾಜರಿಂದ ಹತ್ತನೆಯವರಾದ ರಘುನಾಥತೀರ್ಥರು ಶಿಷ್ಟತಾತ್ಪರ್ಯ ಚಂದ್ರಿಕಾ (ಶೇಷಚಂದ್ರಿಕಾ)" ಎಂಬ ವ್ಯಾಖ್ಯಾನವನ್ನು ರಚಿಸಿ "ಶೇಷಚಂದ್ರಿಕಾಚಾರ್ಯ" ರೆಂದು ಪ್ರಸಿದ್ಧರಾದರು. ಇವರ ಶಿಷ್ಯರೇ "ಭಾಷ್ಯದೀಪಿಕೆಯನ್ನು" ರಚಿಸಿದ ಜಗನ್ನಾಥತೀರ್ಥರು. (ಭಾಷ್ಯದೀಪಿಕಾಚಾರ್ಯರು)

ತಾತ್ಪರ್ಯಚಂದ್ರಿಕೆಯ ಮೊದಲು ಖಂಡನಗ್ರಂಥ–ವಿಜಯೀಂದ್ರರು ಮತ್ತು ಅಪ್ಪಯ್ಯ ದೀಕ್ಷಿತರ ಸಮಕಾಲೀನರಾದ ಕುಂಭಕೋಣದ ಶತಾವಮರ್ಷಣ

ಶ್ರೀನಿವಾಸತಾತಾಚಾರ್ಯರಿಂದ ರಚಿತವಾದ "ತತ್ತ್ವಮಾರ್ತಾಂಡ"ವೆಂಬ ಗ್ರಂಥ. ಇದಕ್ಕೆ ಪ್ರತಿಖಂಡನ ಗ್ರಂಥ–ವ್ಯಾಸತತ್ತ್ವಜ್ಞರೆಂದು ಪ್ರಸಿದ್ಧರಾದ ಐಜಿ ಆಚಾರ್ಯರಿಂದ ರಚಿತವಾದ "ಶಾರದಾಗಮ"ವೆಂಬ ಗ್ರಂಥ ಈಚೆಗೆ, ಪ್ರಸಿದ್ಧ ಪಂಡಿತರಾದ ಜಾಲೀಹಾಳ್ ಶ್ರೀನಿವಾಸಚಾರ್ಯರು 'ಅಭಿನವಶಾರದಾಗಮ"ವೆಂಬ ಖಂಡನ ಗ್ರಂಥವನ್ನು ರಚಿಸಿರುತ್ತಾರೆ ಹಾಗೆಯೇ ಭಂಡಾರಕೇರಿ ಮಠದ ವಿದ್ಯಾಮಾನ್ಯತೀರ್ಥರೂ ಸಹ ಒಂದು ಖಂಡನ ಗ್ರಂಥವನ್ನು ರಚಿಸಿರುತ್ತಾರೆ

ಇದಾದನಂತರ ಪುಣೆಯ ಸುಪ್ರಸಿದ್ಧ ಪಂಡಿತರಾದ ರಘುನಾಥಶಾಸ್ತ್ರಿ ಪರ್ವತೇ ಎಂಬುವರು "ಶಂಕರಪಾದ ಭೂಷಣ"ವೆಂಬ ಚಂದ್ರಿಕಾಖಂಡನಗ್ರಂಥ ವನ್ನು ರಚಿಸಿದರು. ಇದಕ್ಕೆ ಪ್ರತಿಖಂಡನ ರೂಪವಾಗಿ ಸರಟೂರು ಶ್ರೀನಿವಾಸಾ ಚಾರ್ಯರೂ, ಮತ್ತು ಕಟ್ಟೆ ನರಸಿಂಹಾಚಾರ್ಯರೂ ದ್ವೈತಭೂಷಣವೆಂಬ ಪ್ರತ್ಯೇಕ ಗ್ರಂಥಗಳನ್ನು ರಚಿಸಿದರು ಸರಟೂರು ಶ್ರೀನಿವಾಸಾಚಾರ್ಯರ ದ್ವೈತಭೂಷಣವು ಮಾತ್ರ ಮುದ್ರಿತವಾಗಿದೆ.

ಇದಾದನಂತರ ಕ್ರಿ. ಶ ೧೯೧೯ರಲ್ಲಿ ತಂಜಾವೂರು ಸಮೀಪದ ತಿರುವಿಶ ನಲ್ಲೂರು ಗ್ರಾಮವಾಸಿಗಳಾದ ಮಹಾಮಹೋಪಾಧ್ಯಾಯ ರಾಮಸುಬ್ಬಾಶಾಸ್ತ್ರಿ ಗಳು "ಮಾಧ್ವಚಂದ್ರಿಕಾಖಂಡನ"ವೆಂಬ ಗ್ರಂಥವನ್ನು ರಚಿಸಿದರು. ಇದಕ್ಕ ಪ್ರತಿ ಖಂಡನವಾಗಿ ಸತ್ಯಧ್ಯಾನತೀರ್ಥರು "ಚಂದ್ರಿಕಾ ಮಂಡನ"ವೆಂಬ ಗ್ರಂಥ ವನ್ನೂ, ಗೌಡಗರಿ ವೆಂಕಟರಮಣಾಚಾರ್ಯರು "ಚಂದ್ರಿಕಾಪ್ರಕಾಶಪ್ರಸರ" ವೆಂಬ ಗ್ರಂಥವನ್ನೂ ರಚಿಸಿದರು. ಚಂದ್ರಿಕಾಮಂಡನವು ಪೂರ್ತಿಯಾಗಿ ಮುದ್ರಿತವಾಗಿಲ್ಲ. ಚಂದ್ರಿಕಾಪ್ರಕಾಶಪ್ರಸರವು ಪೂರ್ತಿಯಾಗಿ ಮುದ್ರಿತ ವಾಗಿದೆ.

ಇವಕ್ಕೆ ಖಂಡನರೂಪವಾಗಿ ನೂರಣಿ ಅನಂತಕೃಷ್ಣಶಾಸ್ತ್ರಿಗಳು ಅದ್ವೈತ ದೀಪಿಕಾ ಎಂಬ ಗ್ರಂಥವನ್ನು ರಚಿಸಿದರು. ಇದಕ್ಕೆ ಪ್ರತಿ ಖಂಡನವಾಗಿ ಗೌಡಗೆರಿ ವೆಂಕಟರಮಣಾಚಾರ್ಯರು, ತಮ್ಮ ಪರವಾಗಿಯೂ, ಸತ್ಯಧ್ಯಾನರ ಪರವಾ ಗಿಯೂ 'ಅದ್ವೈತದೀಪಿಕಾವಂತಾಗಮ"ವೆಂಬ ಗ್ರಂಥವನ್ನು ರಚಿಸಿದರು.

ರಾಮಸುಬ್ಬಾಶಾಸ್ತ್ರಿಗಳ ಶಿಷ್ಯರಾದ ನಟೇಶಯ್ಯರ್ ಎಂಬುವರು "ಅದ್ವೈತ ತರಣಿ" ಎಂಬ ಗ್ರಂಥದಿಂದ ಚಂದ್ರಿಕಾ ಮಂಡನವನ್ನು ಖಂಡಿಸಿದರು. ಅದ್ವೈತ ದೀಪಿಕಾವಾತಾಗಮವೇ ಇದಕ್ಕೂ ಖಂಡನ ರೂಪವಾಗಿದೆ.

## ನ್ಯಾಯಾಮೃತ

ಇದು ಒಂದು ಸ್ವತಂತ್ರ ಗ್ರಂಥ. ಅದ್ವೈತ ಮತವು ಖಂಡಿತವಾಗಿದೆ. ವ್ಯಾಸರಾಜರು ಅನೇಕ ಅದ್ವೈತ ಮತಗಳ ಗ್ರಂಥಗಳನ್ನು ಶೋಧಿಸಿ ಅವು ಗಳನ್ನು ಖಂಡನಮಾಡಿ ನ್ಯಾಯಾಮೃತವನ್ನು ರಚಿಸಿರುತ್ತಾರೆ. ಹಾಗೆಯೇ ವಿಶಿಷ್ಟಾದ್ವೈತ ಮತವನ್ನೂ ಖಂಡಿಸಿರುತ್ತಾರೆ ನ್ಯಾಯಾಮೃತದಲ್ಲಿ 114 ಭಂಗ ಗಳೂ ನಾಲಕ್ಕು ಪರಿಚ್ಛೇದಗಳೂ ಇವೆ. ಮೊದಲನೆಯ ಪರಿಚ್ಛೇದದಲ್ಲಿ ಜಗನ್ಮಿಥ್ಯಾ ತ್ವಾದಿ ಅದ್ವೈತವಾದಗಳನು ಖಂಡಿಸಿ, ಪರಬ್ರಹ್ಮನು ಸತ್ಯ, ಜಗತ್ಕರ್ತೃತ್ವಾದಿ ಅನಂತ ಗುಣಪರಿಪೂರ್ಣನೆಂಬಲ್ಲಿ ವೇದಾಂತಗಳು ಪ್ರಮಾಣವಾಗಿವೆ ಎಂಬು ದನ್ನು ಸಾಧಿಸಿದ್ದಾರೆ ಎರಡನೆಯ ಪರಿಚ್ಛೇದದಲ್ಲಿ ನಿರ್ದೋಷನಾದ ಬ್ರಹ್ಮನು ದೋಷಿಗಳಾದ ಜೀವರಿಂದ ಅತ್ಯಂತ ಭಿನ್ನ. ಮೋಕ್ಷವನ್ನು ಹೊಂದಲು ಉಪಾಸನೆಯ ಮೂಲಕ ಅವನ ಪ್ರಸಾದವನ್ನು ಸಂಪಾದಿಸಲೇಬೇಕು ಎಂಬುದು ಸಮರ್ಥಿಸಲ್ಪಟ್ಟಿದೆ ಮೂರನೆಯ ಪರಿಚ್ಛೇದದಲ್ಲಿ ಸಾಧನಯಿಂದ ಮೋಕ್ಷ ವಾಗುವುದೆಂದು ತಿಳಿಸಲ್ಪಟ್ಟಿದೆ ನಾಲ್ಕನೆಯ ಪರಿಚ್ಛೇದದಲ್ಲಿ ಆನಂದತಾರ ತಮ್ಯವು ಸಮರ್ಥಿಸಲ್ಪಟ್ಟಿದೆ ಇದಕ್ಕೆ ಅನೇಕ ಖಂಡನ, ಮಂಡನ ಗ್ರಂಥ ಗಳಿವೆ. ಪ್ರಥಮ ಖಂಡನ ಗ್ರಂಥ-ಮಧುಸೂದನ ಸರಸ್ವತಿಗಳಿಂದ ರಚಿತ ವಾದ ಅದ್ವೈತಸಿದ್ಧಿ.

ನ್ಯಾಯಾಮೃತಕ್ಕೆ ವ್ಯಾಖ್ಯಾನವಾಗಿಯೂ ಮತ್ತು ಅದ್ವೈತಸಿದ್ಧಿ ಖಂಡನವಾಗಿಯೂ ತರಂಗಿಣಿರಾಮಾಚಾರ್ಯರು "ನ್ಯಾಯಾಮೃತತರಂಗಿಣಿ" ಎಂಬ ಗ್ರಂಥವನ್ನು ರಚಿಸಿದರು.

ಇದಕ್ಕೆ ಖಂಡನವಾಗಿ ಬ್ರಹ್ಮಾನಂದಸರಸ್ವತಿಗಳು "ಗುರು ಮತ್ತು ಲಘು ಬ್ರಹ್ಮಾನಂದೀಯಾ" ಎಂಬ ಗ್ರಂಥಗಳನ್ನು ರಚಿಸಿದರು. ಇವು ಅದ್ವೈತ

ಸಿದ್ಧಿಗೆ ವ್ಯಾಖ್ಯಾನ ಮತ್ತು ತರಂಗಿಣಿಗೆ ಖಂಡನ ರೂಪವಾಗಿವೆ.

ಇದಾದನಂತರ ವನಮಾಲಿಮಿಶ್ರರು "ಬ್ರಹ್ಮಾನಂದೀಯಾ" ಖಂಡನ ರೂಪವಾಗಿ "ನ್ಯಾಯಾಮೃತ ಸೌಗಂಧ್ಯ" ಮತ್ತು "ತರಂಗಿಣಿ ಸೌರಭ" ಎಂಬ ಗ್ರಂಥಗಳನ್ನು ರಚಿಸಿದರು

ಅನಂತರ ಆನಪ್ಪಾಚಾರ್ಯರು ತಮ್ಮ ಪಂಚಗ್ರಂಥೀಯಾ ಎಂಬ ಗ್ರಂಥದಲ್ಲಿ ನ್ಯಾಯಾಮೃತ, ಅದ್ವೈತಸಿದ್ಧಿ, ತರಂಗಿಣಿ, ಬ್ರಹ್ಮಾನಂದೀಯಾ, ವನಮಾಲಾಮಿಶ್ರೀಯಾ ಎಂಬ ಐದು ಗ್ರಂಥಗಳನ್ನು ವಿಮರ್ಶಿಸಿದ್ದಾರೆ.

ಇದಾದನಂತರ ಕಾಶಿಯ ಪ್ರಸಿದ್ಧಪಂಡಿತರಾದ ವಿ ರ ಲೇ ಶೋ ಪಾಧ್ಯಾಯರು ವಿರಲೇಶೀಯಾ ಎಂಬ ಗ್ರಂಥವನ್ನು ರಚಿಸಿ ನ್ಯಾಯಾಮೃತ ಸೌಗಂಧ್ಯವನ್ನು ಖಂಡಿಸಿರುತ್ತಾರೆ.

ಇದಕ್ಕೆ ಖಂಡನ ರೂಪವಾಗಿ ಹುಲಿಗಿ ಶ್ರಿಯಃ ಪತ್ಯಾಚಾರ್ಯರು ತತ್ತ್ವೋದ್ಯೋತ ಟಿಪ್ಪಣಿ ನಮಿಕ ದ್ವೈತ ದ್ಯುಮಣಿ ಎಂಬ ಗ್ರಂಥವನ್ನು ರಚಿಸಿರುತ್ತಾರೆ

ಈಚೀಚೆಗೆ ಅನಂತಕೃಷ್ಣಶಾಸ್ತ್ರಿಗಳು "ನ್ಯಾಯಾಮೃತಸೌಗಂಧ್ಯ ವಿಮರ್ಶೆ" ಎಂಬ ಖಂಡನ ಗ್ರಂಥವನ್ನು ರಚಿಸಿದರು.

ಇದಕ್ಕೆ ಖಂಡನರೂಪವಾಗಿ ಜಾಲೀಹಾಳ್ ಶ್ರೀನಿವಾಸಾಚಾರ್ಯರು ನ್ಯಾಯಾಮೃತಾರ್ಣವ ಎಂಬ ಗ್ರಂಥವನ್ನು ರಚಿಸಿರುತ್ತಾರೆ.

## ತರ್ಕತಾಂಡವ

ಇದು ತಾರ್ಕಿಕಮತ ಖಂಡನಾತ್ಮಕ ಗ್ರಂಥ. ನವೀನನ್ಯಾಯ ಪ್ರವರ್ತಕರಾದ ಗಂಗೇಶೋಪಾಧ್ಯಾಯರ "ಚಿಂತಾಮಣಿ" ಗ್ರಂಥವು ಖಂಡಿತ

ವಾಗಿದೆ. ಇದರಲ್ಲಿ ಮೂರು ಪರಿಚ್ಛೇದಗಳಿವೆ ವೇದಾಂತ ಗ್ರಂಥಗಳಲ್ಲಿ ನಾಲಕ್ಕು ಅಧ್ಯಾಯಗಳಿರುವುದು ಸಾಮಾನ್ಯ, ಈ ಗ್ರಂಥದಲ್ಲಿ ಮೂರೇ ಪರಿಚ್ಛೇದಗಳಿವೆ; ಯಾತಕ್ಕೆಂದರೆ ಪ್ರಮಾಣಗಳು, ಪ್ರತ್ಯಕ್ಷ ಅನುಮಾನ ಮತ್ತು ಆಗಮಗಳೆಂಬ ಮೂರನ್ನು ತೋರಿಸುವುದಕ್ಕಾಗಿ. ವಿಷ್ಣು ತತ್ವ ನಿರ್ಣಯ ದಲ್ಲಿಯೂ ಮೂರೇ ಪರಿಚ್ಛೇದಗಳಿವೆ.

ತಾರ್ಕಿಕಮತದ ಪ್ರಮೇಯಗಳು ಹೀಗಿವೆ·

"ವೇದವು ಪೌರುಷೇಯ. ಪ್ರಮಾಣದಲ್ಲಿ ಸಹಕಾರಿ ಮಾತ್ರ. ಈಶ್ವರ ಪರಿಮಿತಗುಣನು. ದುಃಖಧ್ವಂಸವೇ ಮೋಕ್ಷ." ಈ ಮತವನ್ನು ಯುಕ್ತಿ ಯಿಂದಲೇ ನಿರಾಕರಿಸಿರುತ್ತಾರೆ. ತರ್ಕತಾಂಡವ ಎಂಬ ಪದವನ್ನು ತರ್ಕದಲ್ಲಿ ತಾಂಡವ, ತರ್ಕದತಾಂಡವ ಮತ್ತು ತರ್ಕದಿಂದ ತಾಂಡವ ಎಂದು ಮೂರು ವಿಧವಾಗಿ ವಿಗ್ರಹ ವಾಕ್ಯ ಮಾಡಬಹುದು.

ವ್ಯಾಸತ್ರಯದಲ್ಲಿ ಇದಕ್ಕೆ "ವಾದಗ್ರಂಥಾಧಿರಾಜ" ಎಂಬ ಖ್ಯಾತಿ ಇದೆ. ಇದನ್ನು ಇದುವರಿಗೆ ಯಾರೂ ಖಂಡಿಸಿಲ್ಲ.

ವಾದೀಂದ್ರರಿಂದ ರಚಿತವಾದ ಗುರುಗುಣಸ್ತವನದ ಏಳನೆಯ ಶ್ಲೋಕ ದಲ್ಲಿ ಈ ರೀತಿ ವರ್ಣಿತವಾಗಿದೆ.

"ಈ ಜಗತ್ತು ಮಾಯೆಯಿಂದ ಕಲ್ಪಿತವಾದುದು ಎಂದು ಬೋಧಿಸುವ ಅದ್ವೈತ ಶಾಸ್ತ್ರವೆಂಬ ದೇವತಾ ಶತ್ರುವಾದ ಹಿರಣ್ಯ ಕಶಿಪುವಿನ ಗರ್ವವನ್ನು ನಾಶಮಾಡಿದ ಶ್ರೀಮನ್ಮಧ್ವಾಚಾರ್ಯರ ವೈದಿಕಸಿದ್ಧಾಂತನಾಮಕವಾದ ನರಸಿಂಹದೇವರ ಮೂರು ಕಣ್ಣುಗಳಂತಿರುವ ವ್ಯಾಸತ್ರಯ ಗ್ರಂಥಗಳು, ಮೂರು ಲೋಕಗಳಲ್ಲಿ ಶೋಭಾಯಮಾನವಾಗಿವೆಯೋ ಮತ್ತು ಯಾವ ವ್ಯಾಸ ರಾಜರ ವಾಕ್ಯವು ಅದ್ವೈತ ಶಾಸ್ತ್ರ ರೂಪ ಪರ್ವತಗಳ ಗುಂಪನ್ನು ನಾಶಪಡಿಸು ವುದರಲ್ಲಿ ಇಂದ್ರನ ವಜ್ರಾಯುಧದಂತೆ ಸಮರ್ಥವಾಗಿದೆಯೋ, ಅತ್ಯಂತ

ವಿಖ್ಯಾತ ಮಹಿಮರಾದ ವ್ಯಾಸರಾಜರು ಈಗ ನಮಗೆ ಅತಿಶಯವಾದ ಶ್ರೇಯ ಸ್ಸನ್ನುಂಟು ಮಾಡಲಿ." (ರಾಜಾಗುರುರಾಜಾಚಾರ್ಯರು)

ಈ ಗ್ರಂಥದ ಪರಿಶೀಲನೆಯಿಂದ ವಿಷ್ಣುತತ್ತ್ವನಿರ್ಣಯದ ಪ್ರಮಾಣ ನಿರೂಪಣವಾಕ್ಯಗಳ ನಾನಾ ವಿವರಣೆಗಳು ದೊರಕುತ್ತವೆ. ವಿಷ್ಣು ತತ್ತ್ವ ನಿರ್ಣಯದ ಪ್ರಾರಂಭದಲ್ಲಿ "ಸದಾಗಮೈಕ" ಎಂದಿದೆ. ತರ್ಕತಾಂಡವದಲ್ಲಿ "ಸ್ವತಃ ಪ್ರಮಾಣೈಃ" ಎಂದಿದೆ ತತ್ತ್ವನಿರ್ಣಯದಲ್ಲಿಯೂ ತರ್ಕತಾಂಡವದಲ್ಲಿ ರುಪಂತೆ ಮೂರೇ ಪರಿಚ್ಛೇದಗಳಿವೆ ಆದ್ದರಿಂದ ತರ್ಕತಾಂಡವ ಗ್ರಂಥವನ್ನು ತತ್ತ್ವ ನಿರ್ಣಯದ ವಿವರಣ ಗ್ರಂಥವೆಂದು ತಿಳಿಯಬಹುದು.

ತಾರ್ಕಿಕ ಮತಕ್ಕೂ ವೇದಾಂತ ಮತಕ್ಕೂ ಇರುವ ಮುಖ್ಯಪ್ರಮೇಯ ಗಳು ಹೀಗಿವೆ

| ವೇದಾಂತಿಗಳು | ತಾರ್ಕಿಕರು |
|---|---|
| 1) ಪ್ರಾಮಾಣ್ಯಸ್ವತಸ್ತ್ವ | 1) ಪ್ರಾಮಾಣ್ಯಪರತಸ್ತ್ವ |
| 2) ವೇದಗಳು ಅಪೌರುಷೇಯ ಮತ್ತು ನಿತ್ಯ | 2) ವೇದಗಳು ಈಶ್ವರೋಚ್ಚಾರಿತ ಮತ್ತು ಅನಿತ್ಯ |
| 3) ಈಶ್ವರನ ಸಾರ್ವಜ್ಞ್ಯಾದಿಗಳು ವೇದಗಳಿಂದ ಸಿದ್ಧವಾಗುತ್ತವೆ | 3) ಈಶ್ವರನ ಸಾರ್ವಜ್ಞ್ಯಾದಿಗಳು ಧರ್ಮಿಗ್ರಾಹಕಾನುಮಾನಗಳಿಂದ ಸಿದ್ಧವಾಗುತ್ತವೆ. |
| 4) ವರ್ಣಗಳು ನಿತ್ಯವಿಭುದ್ರವ್ಯಗಳು | 4) ಅನಿತ್ಯಾಗುಣಾಃ |
| 5) ವರ್ಣ ಸಂಯೋಗದಿಂದ ತಿಳಿಯಲ್ಪಡುತ್ತದೆ | 5) ಸಮವಾಯದಿಂದ ತಿಳಿಯಲ್ಪಡುತ್ತದೆ |
| 6) ನಿರ್ವಿಕಲ್ಪಕಜ್ಞಾನವಿಲ್ಲ | 6) ನಿರ್ವಿಕಲ್ಪಕಜ್ಞಾನವಿದೆ. |

ಶ್ರೀವ್ಯಾಸರಾಜರು ನ್ಯಾಯಾಮೃತವನ್ನು ರಚಿಸಿ ಅದ್ವೈತ ಮತವನ್ನು ಖಂಡಿಸಿದರು ನೈಯಾಯಿಕರು ಇದರಿಂದ ಸಂತೋಷಪಟ್ಟು ಅವರನ್ನು

ಹೊಗಳಿದರು. ತರ್ಕತಾಂಡವವನ್ನು ರಚಿಸಿ ನ್ಯಾಯಾಮೃತವನ್ನು ಖಂಡಿಸಿದರು. ಇದರಿಂದ ಕುಪಿತರಾದ ತಾರ್ಕಿಕರು ಹೀಗೆ ಹೇಳಿದರು—

"ಅಮೃತೇನಾರ್ಜಿತಾ ಕೀರ್ತಿಸ್ತಾಂಡವೆ ನ ವಿನಾಶಿತಾ" "ಇದಕ್ಕೆ ಪ್ರತಿಯಾಗಿ" ತೃಪ್ತರಾದ ದ್ವೈತಿಗಳು "ಅಮೃತೇನಾರ್ಜಿತಾ ಕೀರ್ತಿಸ್ತಾಂಡವೇನ ವಿವರ್ಧಿತಾ."

## ಕರ್ನಾಟಕ ಭಾಷೆಯಲ್ಲಿ ವೇದಾಂತ ಸಾರ

ಶ್ರೀವ್ಯಾಸರಾಜರು ಅನೇಕ ದೇವರನಾಮ, ಸುಳಾದಿ, ಉಗಾಭೋಗಗಳನ್ನು ನಾನಾ ರಾಗಗಳಲ್ಲಿ ರಚಿಸಿರುತ್ತಾರೆ. ಇವುಗಳು ವೇದಾಂತತತ್ತ್ವಗಳನ್ನು ಸಾಮಾನ್ಯ ಜನರಿಗೆ ಬೋಧಿಸಿ ಹರಿಯಲ್ಲಿ ಭಕ್ತಿಯನ್ನು ಹುಟ್ಟಿಸುತ್ತವೆ ಬ್ರಹ್ಮಸೂತ್ರಗಳ ಅರ್ಥವನ್ನೂ ತಿಳಿಸುವ ಕೆಲವು ಉಕ್ತಿಗಳಿವೆ.

ಬ್ರಹ್ಮಮೀಮಾಂಸಾಶಾಸ್ತ್ರದ ಆದಿ ಸೂತ್ರ "ಓಂ ಓಂ ಅಥಾತೋ ಬ್ರಹ್ಮಜಿಜ್ಞಾಸಾ ಓಂ". ಇದು ತೈತ್ತಿರೀಯೋಪನಿಷತ್ತಿನ "ತದ್ವಿಜಿಜ್ಞಾಸಸ್ವ" ಎಂಬ ವಾಕ್ಯದ ಅರ್ಥವನ್ನು ತಿಳಿಸುತ್ತದೆ ಮೋಕ್ಷಾಪೇಕ್ಷಿಗಳು ಶಮದಮಾದಿಗಳಿಂದ ಕೂಡಿ ವೇದಾಂತ ಶ್ರವಣ, ಮನನಗಳಿಂದ ಭಗವಂತನ ಅಚಿಂತ್ಯಾದ್ಭುತ ಶಕ್ತಿಯನ್ನು ತಿಳಿದುಕೊಂಡು ಅನಂತರ, ನಿರಂತರಧ್ಯಾನದಿಂದ ಪರಬ್ರಹ್ಮನನ್ನು ಪ್ರತ್ಯಕ್ಷೀಕರಿಸಿಕೊಂಡು, ಅವನ ಅನುಗ್ರಹದಿಂದಲೇ ಮೋಕ್ಷವನ್ನು ಪಡೆಯಬೇಕು ಎಂಬುದೇ ಜಿಜ್ಞಾಸಾಧಿಕರಣದ ಸಾರಾಂಶ

ವ್ಯಾಸರಾಜರು ಈ ವಿಷಯವನ್ನು ಇಲ್ಲಿ ಸೂಚಿತವಾಗಿರುವ ಸುಳಾದಿಯಲ್ಲಿ ಹೀಗೆ ನಿರೂಪಿಸಿದ್ದಾರೆ.

ರಾಗ ಆದಿತಾಳ

ಜಿಜ್ಞಾಸುವಿಗೆ ಜ್ಞಾನಕರಣ। ಜ್ಞಾನಿಗೆ ಅಪರೋಕ್ಷ ಕಾರಣ । ಅಪರೋಕ್ಷಿಗೆ ಅಧಿಕಾನಂದಕಾರಣ । ಮುಕ್ತಿಗೆ ತಾನೇ ಫಲರೂಪ । ಸಿರಿ ಕೃಷ್ಣನ ಪಾದ ಸೇವೆ । ಇದರ ತೂಕಕ್ಕೆ ಸಾರ ಕೈವಲ್ಯ ॥

ಹೀಗೆಯೇ ಬ್ರಹ್ಮಸೂತ್ರ ಅಧ್ಯಾಯ 3, ಪಾದ 3, ಸೂತ್ರ 12 "ಓಂ ಆನಂದಾಯಃ ಪ್ರಧಾನಸ್ಯ ಓಂ" ಎಂಬಲ್ಲಿ ಮುಮುಕ್ಷುಗಳಿಂದ ಆಚರಿಸಬೇಕಾದ ಉಪಾಸನೆಯ ಕ್ರಮವು ನಿರೂಪಿತವಾಗಿದೆ. "ನಿರ್ದೋಷಜ್ಞಾನಾನಂದ ರೂಪಿಯಾದ ಶ್ರೀಹರಿಯು ನನ್ನ ಸ್ವಾಮಿ" ಎಂದು ಉಪಾಸನೆ ಮಾಡಬೇಕು. ವ್ಯಾಸರಾಜರು ಇದನ್ನು ಹೀಗೆ ಹೇಳುತ್ತಾರೆ

ರಾಗ ಝಂಪೆತಾಳ

ಶೋಕಾದಿ ದೋಷಾತಿದೂರನೆಂಬ
ಜ್ಞಾನೈಕರಸ ದಿವ್ಯ ಮೂರುತಿಯೆಂಬ ಆ
ಲೌಕಿಕ ಮಂದಾನಂದಸಾಂದ್ರನೆಂಬ
ನಾಕುವ ತನ್ನ ನಿಜ ಸ್ವಾಮಿಯೆಂಬ
ನಾಲ್ಕು ಬಗೆಯ ಉಪಾಸನವಿಲ್ಲದವನಿಗೆ
ಶ್ರೀ ಕೃಷ್ಣನು ತನ್ನ ಮೂರುತಿಯ ತೋರಗಡ

——

## ವ್ಯಾಸರಾಜರು ರಚಿಸಿದ ಕನ್ನಡ ಭಗವದ್ಗೀತಾರ್ಥಸಾರ

ರಾಗ–ನಾದನಾಮಕ್ರಿಯ. ಛಾಪು–ತಾಳ

ಕೇಳಯ್ಯಾ ಎನ್ನ ಮಾತ ಪ್ರಾರ್ಥನೆ ಗೀತಾಪ್ರಾರ್ಥನೆ ॥ಪ॥

ಪದ್ಯ॥ ಕುರುಕ್ಷೇತ್ರದಿ ಎನ್ನವರು ಪಾಂಡವರು ಕದನಹೂಡಿ
ಪೇಳೋ ಸಂಜಯ ಏನು ಮಾಡುವರು ಕೂಡಿ
ಕೇಳೈ ಅರಸನೆ ಪಾಂಡವರ ಸೇನೆ ನೋಡಿ
ಮಾತಾಡಿದ ನಿನ್ನ ಸುತನು ದ್ರೋಣರ ಕೂಡಿ ॥

ಪದ–ಕೇಳಿ ತಾ ಪಾರ್ಥನು ಕುರುದಂಡೆ ರಣದಲಿ ಚಂಡ–ಗಾಂಡೀವ ಕರದಂಡ ಅಚ್ಯುತ ಪಿಡಿ ರಥ ನಡೆ ಮುಂದಾ ಬಹುತ್ವರದಿಂದ ನೋಡುವೆ ನೇತ್ರದಿಂದ ಗುರುಹಿರಿಯರ ಕೂಡೆ ಯಾಕೆಂದ–ಯುದ್ಧಸಾಕೆಂದ–ಭಿಕ್ಷವೆ ಸುಖವೆಂದ. ಕುಂತೀಸುತ ಈ ಮಾತು ಉಚಿತಲ್ಲ–ನಿನಗದು ಸಲ್ಲ–ಪಿಡಿ ಗಾಂಡೀವ ಬಿಲ್ಲ ॥೧॥

ಪದ್ಯ॥ ಭಾಲ್ಯ ಯೌವನ ಮುಪ್ಪು ತನ್ನ ದೇಹದಲ್ಲಿ
ಇಂಥ ದೇಹಕೆ ಮೋಹ ಮತ್ಯಾತಕಲ್ಲಿ
ಕಾಯ್ದು ಕೊಲ್ಲುವ ನಾನು ಇರುತಿರಲು ಇಲ್ಲಿ
ಬಿಲ್ಲು ಪಿಡಿದು ಕೀರ್ತಿ ಪಡೆ ಲೋಕದಲ್ಲಿ

ಪದ–ಶಸ್ತ್ರದಂಜಿಕೆಯಿಲ್ಲ ಜೀವಕ್ಕೆ–ಈ ದೇಹಕ್ಕೆ–ಪಾವಕನ ದಾಹಕ್ಕೆ ಉದಕಗಳಿಂದ ವೇದನೆಯಾಕೆ– ಈ ಜೀವಕ್ಕೆ ಮಾರುತ ಶೋಷಕ್ಕೆ– ನಿತ್ಯ ಅಭೇದ್ಯ ತಾ ಜೀವನು–ಸನಾತನನು–ವಸ್ತ್ರದ್ಹಾಗೆ ಈತನು–ಆದಾವು ಪೋದಾವು ನಿನಗಯ್ಯ ನನಗಿಲ್ಲಯ್ಯ ಆದನಾ ಬಲ್ಲೆನಯ್ಯ ॥೨॥

ಪದ್ಯ॥ ಜ್ಞಾನ ದೊಡ್ಡದು ಕರ್ಮಬಂಧವ ಬಿಟ್ಟು
ಕರ್ಮಬಿಟ್ಟರೆ ಪ್ರತ್ಯವಾಯವೆಷ್ಟು
ಫಲಬಿಟ್ಟು ನೀ ಮಾಡು ಕರ್ಮಗಳ
ಸಮದೇಹಕೆ ಫಲಕರ್ಮ ಕಾರಣವಲ್ಲ

ಪದ-ಕರ್ಮದಲ್ಲೇ ನಿನಗಧಿಕಾರ ಫಲ ತಾದೂರ-ಧನಂಜಯಗೋಸ್ಕರ ಜ್ಞಾನ ದೊಡ್ಡದು ಕರ್ಮದೂಡಯ್ಯ ಇತ್ತ ಬಾರೈಯ್ಯ ಯೋಗಬುದ್ಧಿ ಮಾಡಯ್ಯ ಜಿತಬುದ್ಧಿ ಯಾವುದೈ ಕೇಶವ-ಜಗತ್ಪಾಶವ-ನೋಡದೆ ಪರವಶವ-ಗೋವಿಂದ ನಲ್ಲಿ ಮನವಿಟ್ಟವ-ಕಾಮಬಿಟ್ಟವ ಜಿತದೇಹತಾನಾವ ||೩||

ಪದ್ಯ|| ಜ್ಞಾನದೊಡ್ಡದು ಕರ್ಮದಲ್ಯಾಕೆ ಎನ್ನ
ಬುದ್ಧಿ ಮೋಹಿಸಿ ಕೃಷ್ಣ ಕೇಳ್ಳೆ ಬಿನ್ನ
ಕರ್ಮವಿಲ್ಲದೆ ಮೋಕ್ಷಫಲವುಂಟೆ ಇನ್ನಾ
ಕರ್ಮ ಮೋಕ್ಷದ ಬುದ್ಧಿಗೆ ಬೀಜವಲ್ಲೆ

ಪದ-ಯುದ್ಧಕರ್ಮವ ಮಾಡೋ ಪಾಂಡವ-ರಣತಾಂಡವ-ವೈರಿ ಷಂಡನೆಂಬುವ ಜನರೆಲ್ಲ ಮಾಳ್ಪರು ನಿನ್ನ ನೋಡಿ-ಮತ್ತೆನನೋಡಿ-ನೋಡಿದರ ನೀ ಬೇಡಿ ಎನಗೇಕೆ ಪೇಳಯ್ಯ ಜನಕರ್ಮ-ಕ್ಷತ್ರಿಯ ಧರ್ಮ-ನಷ್ಟವಾಗುವುದು ಧರ್ಮ ಅರ್ಪಿಸು ಎನ್ನಲಿ ಸರ್ವವ-ಬಿಟ್ಟು ಗರ್ವವ-ತಿಳಿ ಎನ್ನೊಳು ಸರ್ವವ ||೪||

ಪದ್ಯ|| ಯೋಗ ಸಂನ್ಯಾಸವೆರಡು ಮುಕ್ತಿಗೆ ದೃಢವು
ಭೋಗವರ್ಜಿತ ಕೇಳು ಸಂನ್ಯಾಸಿಯಿರವು
ಹೇಗೆ ಪದ್ಮಕೆ ಪಾಣಿಯ ಲೇಪವಿಲ್ಲ
ಹಾಗೆ ಭಕ್ತಿಗೆ ಸಂಸೃತಿಯು ಇಲ್ಲ

ಪದ—ಅಜನಲ್ಲಿ-ದ್ವಿಜನಲ್ಲಿ ಗಜದಲ್ಲಿ-ಸಮನಾನಲ್ಲಿ-ಭಜಿಪರ ಮನದಲ್ಲಿ ಮನಸು ಯಾರ ಜೀವಕೆ ಬಂದು-ಇತ್ತಬಾರೆಂದು-ಮತ್ತೆ ವೈರಿದಾರೆಂದು-ಲೋಪ್ಪಕಾಂಚನ ನೋಡು ಸಮಮಾಡಿ-ಆಸನಹೂಡಿ-ನಾಸಿಕತಾದಿ ನೋಡಿ ಧ್ಯಾನ ಮಾಡು ಹರಿ ಅಲ್ಲಿಹ-ಅವನಲ್ಲಿಹ-ಯೋಗಸನ್ನಿಹಿತನಹ ||೫||

ಪದ್ಯ|| ಯಾರ ಭಕ್ತಿಯು ಎನ್ನ ಪಾದಾಬ್ಜದಲ್ಲಿ
ಘೋರ ಸಂಸಾರ ಯಾತನೆ ಅವರಿಗೆಲ್ಲಿ
ಶರೀರವೇ ಕ್ಷೇತ್ರವೆಂತೆಂದು ತಿಳಿಯೊ
ಮರೆಯದೇ ಕ್ಷೇತ್ರಜ್ಞನೆಂದೆನ್ನ ತಿಳಿಯೊ

ಪದ —ಶರೀರದೊಳಗಿದ್ದು ಪಾಪಿಲ್ಲ-ದುಃಖಲೇಪಿಲ್ಲ-ಆಕಾಶವು ಎಲ್ಲ ಯಾತರಿಂದ್ಹುಟ್ಟಿತು ಈ ಗುಣ-ಮೂರು ಸದ್ಗುಣ-ಕೇಳೈಯ್ಯ ಫಲ್ಗುಣ-ಸುಖ ದುಃಖ ಸಮ ಮಾಡಿ ನೋಡು ನೀ-ಈಡಾಡು ನೀ-ಬ್ರಹ್ಮನ ನೋಡು ನೀ ಚಂದ್ರ ಸೂರ್ಯರ ತೇಜವೆನದಯ್ಯ-ಗುಡಾಕೇಶಯ್ಯ-ಅನ್ನಪಚನನ್ನತೀದಯ್ಯ ॥೬॥

ಪದ್ಯ॥ ನಾನೆ ಉತ್ತಮ ಮನಸ್ಸು ಎನ್ನಲ್ಲಿ ಮಾಡೊ
ಜ್ಞಾನ ವಿಜ್ಞಾನ ಪೇಳುವೆ ತಿಳಿದು ನೋಡೊ
ಜ್ಞಾನ ದುರ್ಲಭ ಅವರ ಭಕ್ತಿಗಳಂತೆ
ನಾನು ಕೊಡುವೆನು ಫಲವ ಮನಸು ಬಂದಂತೆ

ಪದ—ಸ್ಮರಣೆ ಮಾಡುತ ದೇಹ ಬಿಡುವರು-ಎನ್ನ ಪಡೆವರು-ಬಲು ಭಕ್ತಿ ಮಾಡುವರು-ಅನಂತ ಚೇತನ ಸುಳಿವೇನು ಹರಿ ಸುಲಭನು-ಮತ್ತೆ ಜನನರಹಿತನು-ಎನ್ನ ಭಕ್ತರಿಗಿಲ್ಲ ನಾಶವು-ಸ್ವರ್ಗದಾಸೆಯು-ಬಿಟ್ಟು ಚರಣ ಭಕುತಿಯು ॥೭॥

ಪದ್ಯ॥ ಕೃಷ್ಣ ತೋರಿಸು ನಿನ್ನ ವಿಭೂತಿ ರೂಪ
ಇಷ್ಟ ಪೂರತಿಯಾಗಲೊ ಎನಗೆ ಶ್ರೀಪ
ರಾಮ ನಾನಯ್ಯ ರಾಜರ ಗುಂಪಿನಲ್ಲಿ
ಸೋಮ ನಾನಯ್ಯ ತಾರಕ ಮಂಡಲದಲ್ಲಿ

ಪದ — ಅಕ್ಷರದೊಳಗೆ ಅಕಾರನು-ಗುಣಸಾರನು-ಪಕ್ಷಿಗಳಲ್ಲಿ ನಾನು ಗರುಡನು ಸಕಲ ಜಾತಿಗಳಲ್ಲಿ-ಶ್ರೇಷ್ಠತನದಲ್ಲಿ-ಎನ್ನ ರೂಪ ತಿಳಿಯಲ್ಲಿ ತೋರಿಸೊ ಶ್ರೀಕೃಷ್ಣ ನಿನ್ನ ರೂಪ-ನಾನಾ ರೂಪ-ಅರ್ಜುನ ನೋಡೊ ರೂಪ ಕಂಡನು ತನ್ನನು ಸಹಿತದಿ-ಹರಿದೇಹದಿ-ಬ್ರಹ್ಮಾಂಡದಿ ॥೮॥

ಪದ್ಯ॥ ಕ್ಷರ ಅಕ್ಷರ ಎರಡಕ್ಕು ಉತ್ತಮನು
ಘೋರ ನರಕಕೆ ಲೋಭ ಕಾಮನು
ಸಾರದಾನವು ಸಜ್ಜನರ ಹಸ್ತದಲ್ಲಿ
ಭೂರಿ ದಕ್ಷಿಣೆ ನೀಡೊ ಸತ್ಪಾತ್ರದಲ್ಲಿ

ಪದ–ಸರ್ವದಾನದಕಿಂತ ಎನ್ನ ಭಕ್ತಿ–ಕೇಳೊಭೂಶಕ್ತಿ–ಮಾಡಯ್ಯ ವಿರಕ್ತಿ ಕೃಷ್ಣ ಹರಣವಾಯ್ತು ನಿನ್ನಿಂದ–ಮೋಹ ಎನ್ನಿಂದ–ಬಹು ಸುವಾಕ್ಯದಿಂದ–ಕೃಷ್ಣಭೀಮಾರ್ಜುನರ ಸಂವಾದ - ಮಹಸುಖಪ್ರದ–ಧೃತರಾಷ್ಟ್ರ ಕೇಳಿದ ಒಲ್ಲೆನು ವ್ಯಾಸರ ದಯದಿಂದ–ಮನಸಿನಿಂದ ಕೃಷ್ಣನಲ್ಲೇ ಜಯವೆಂದ ||೯||

## ವ್ಯಾಸರಾಜವಿರಚಿತ ವೇದಾಂತಸ್ತೋತ್ರಮ್

ಶ್ರೀಮನ್ಮಧ್ವಮತೇ ಹರಿಃ ಪರತರಃ ಸತ್ಯಂ ಜಗತ್ತತ್ತ್ವತೋ
ಭೇದೋ ಜೀವಗಣಾ ಹರೇರನುಚರಾ ನೀಚೋಚ್ಚಭಾವಂಗತಾಃ |
ಮುಕ್ತಿರ್ನೈಜಸುಖಾನುಭೂತಿರಮಲಾ ಭಕ್ತಿಶ್ಚ ತತ್ಸಾಧನಂ
ಹ್ಯಕ್ಷಾದಿತ್ರಿತಯಂ ಪ್ರಮಾಣಮಖಿಲಾಮ್ನಾಯೈಕವೇದ್ಯೋ ಹರಿಃ ||

ಶ್ರೀಮನ್ಮಧ್ವಮತದಲ್ಲಿ ಹರಿಯೇ ಸರ್ವೋತ್ತಮನು, ಜಗತ್ತು ಸತ್ಯ, ಜೀವಗಣಗಳಲ್ಲಿ ತತ್ತ್ವತಃ ಭೇದ, ಎಲ್ಲರೂ ಹರಿಯ ದಾಸರು, ತಾರತಮ್ಯದಿಂದ ಕೂಡಿದವರು, ಸ್ವರೂಪಾನಂದಾವಿರ್ಭಾವವೇ ಮುಕ್ತಿ, ಶುದ್ಧವಾದ ಭಕ್ತಿಯೇ ಮೋಕ್ಷಕ್ಕೆ ಸಾಧನ, ಪ್ರತ್ಯಕ್ಷಾನುಮಾನಾಗಮಗಳೇ ಮೂರು ಪ್ರಮಾಣಗಳು, ವೇದಗಳಿಂದ ಮಾತ್ರವೇ ಪರಮಾತ್ಮನು ವೇದ್ಯನು

ಸಮಸ್ತದ್ವೈತವೇದಾಂತ ಪ್ರಮೇಯಗಳೂ ಈ ಶ್ಲೋಕದಲ್ಲಿ ಅಡಗಿವೆ.

## ವ್ಯಾಸರಾಜವಿರಚಿತ ವೇದಾಂತ ಸಂಗ್ರಹಾಖಂಡನ

ಕೃಷ್ಣದೇವರಾಯರು ವಿಜಯನಗರದ ಸಂಸ್ಥಾನಾಧಿಪತಿಗಳಾಗಿದ್ದಾಗ ಶ್ರೀವ್ಯಾಸರಾಜರು ರಾಜಗುರುಗಳಾಗಿದ್ದರು. ಈ ಸಮಯದಲ್ಲಿ ಕಳಿಂಗದೇಶದಲ್ಲಿ "ಸಾರ್ವಭೌಮ" ಎಂಬ ದಿಗ್ದಂತಿ ಅದ್ವೈತ ಪಂಡಿತರಿದ್ದನು. ಇವನು ಅದ್ವೈತ ತತ್ತ್ವಗಳನ್ನು ಉದ್ಧರಿಸುವ "ವೇದಾಂತ ಸಂಗ್ರಹ" ಎಂಬ ಗ್ರಂಥವನ್ನು ರಚಿಸಿ ತನ್ನ ಒಡೆಯನಾದ ಕಳಿಂಗಾಧಿಪತಿಗೆ ಸಮರ್ಪಿಸಿದನು. ಆ ಗ್ರಂಥವನ್ನು ಕಳಿಂಗಾಧಿಪತಿಯು ಪಂಡಿತಸಮೂಹದೊಂದಿಗೆ ಕೃಷ್ಣದೇವರಾಯರಿಗೆ ಕಳುಹಿಸಿಕೊಟ್ಟು ಇದಕ್ಕೆ ಉತ್ತರ ಹೇಳುವ ಪಂಡಿತರು ನಿಮ್ಮ ರಾಜ್ಯ

ದಲ್ಲಿದ್ದಾರೆಯೆ ಎಂದು ಹಾಸ್ಯ ಮಾಡಿ ಪತ್ರ ಬರೆದನು ಕೃಷ್ಣದೇವರಾಯ ಆ ಗ್ರಂಥವನ್ನು ಶ್ರೀವ್ಯಾಸರಾಜರಿಗೆ ಕಳುಹಿಸಿದನು ಶ್ರೀವ್ಯಾಸರಾಜರು ರಾಜಸಭೆಯಲ್ಲಿ ಆ ಗ್ರಂಥವನ್ನು ಖಂಡಿಸಿ "ವೇದಾಂತ ಸಂಗ್ರಹ ಖಂಡನ"ವೆಂಬ ಅದರ ಖಂಡನ ಗ್ರಂಥವನ್ನು ರಚಿಸಿದರು. ಕಳಿಂಗ ದೇಶದಿಂದ ಬಂದಿದ್ದ ಅದ್ವೈತ ಪಂಡಿತ ವರ್ಗವು ಉತ್ತರ ಕೊಡಲಾರದೆ ಗಾಬರಿಯಿಂದ ಮುಖ ಬಿಳಿಚಿಕೊಂಡು, ಮಾತು ಕೂಡ ಆಡಲಾರದೆ ಸಭೆಯಿಂದ ಹೊರಟು ಹೋಯಿತು. ಈ ವೇದಾಂತ ಸಂಗ್ರಹದಲ್ಲಿ ಉತ್ಪತ್ತಿ, ಸ್ಥಿತಿ, ಉಪಶಮ ಮತ್ತು ನಿರ್ವಾಣವೆಂಬ ನಾಲ್ಕು ಪ್ರಕರಣಗಳಿವೆ. ಇವೆಲ್ಲವನ್ನು ಸಪ್ರಮಾಣವಾಗಿ ಖಂಡಿಸಿ, ತತ್ತ್ವಮಸಿ ಎಂಬ ಶ್ರುತಿವಾಕ್ಯವನ್ನು ದ್ವೈತಪರವಾಗಿ "ವೇದಾಂತ ಸಂಗ್ರಹ ಖಂಡನ"ವೆಂಬ ಗ್ರಂಥದಲ್ಲಿ ಶ್ರೀವ್ಯಾಸರಾಜರು ತೋರಿಸಿರುತ್ತಾರೆ.

## ವ್ಯಾಸತ್ರಯ ಪ್ರಶಂಸೆ

"ತಾತ್ಪರ್ಯಚಂದ್ರಿಕಾ" ಗ್ರಂಥಕ್ಕೆ ಮೂಲಗ್ರಂಥ "ತತ್ತ್ವಪ್ರಕಾಶಿಕಾ" ಇದು ಜಯತೀರ್ಥರಿಂದ ರಚಿತವಾದ ಬ್ರಹ್ಮಸೂತ್ರಭಾಷ್ಯದ ಟೀಕೆ. ಜಯತೀರ್ಥರ ವಾಕ್ಯಗಳೇ ಗಂಗಾನದಿ. ಸಜ್ಜನರು ಪ್ರತಿದಿನವೂ ಪ್ರಾತಃಕಾಲದಲ್ಲಿ ಆ ಜಯತೀರ್ಥವಾಕ್ಯಗಳೆಂಬ ಗಂಗಾನದಿಯಲ್ಲಿ ಸ್ನಾನ ಮಾಡಲಿ ಎಂದು ರಾಜೇಂದ್ರತೀರ್ಥರ ಶಿಷ್ಯರಾದ ವಿಷ್ಣುದಾಸಾಚಾರ್ಯರು ತಮ್ಮಿಂದ ರಚಿತವಾದ "ವಾದರತ್ನಾವಳಿ"ಯ ಮೂರನೆಯ ಸರದ ಅಂತ್ಯದಲ್ಲಿ ಹೀಗೆ ಹೇಳಿದ್ದಾರೆ.

ನೋ ಧತ್ತೇ ಜಡತಾಂ ನ ಭಂಗಮಯತೇ ನೀಚಸ್ಥಲಂ ನೇಹತೇ
ಸ್ಖಾಲಿತ್ಯಂ ನ ಚ ಯಾತಿ ನೈತಿ ಕೃಶತಾಂ ಕ್ಷೋಭಂ ಕ್ವಚಿನ್ನಾಂಚತೇ ।
ಮಾನಂ ನೋಜ್ಝತಿ ನೋ ಜಹಾತಿ ಚ ಪದಂ ವ್ಯರ್ಥಂ ನ ಕೋಕೂಯತೇ
ಕಲ್ಯೇಯಂ ಜಯತೀರ್ಥ ಕೋವಿದವಚಃಕಲ್ಲೋಲಿನೀ ಸೇವ್ಯತಾಮ್ ॥

## ತಾತ್ಪರ್ಯಚಂದ್ರಿಕಾ

ಆಮೂಲಾಗ್ರನಿಬದ್ಧತರ್ಕಜಟಿಲಂ ಶಬ್ದೈಕ ಜೀವಾತುಕಂ
ಮೀಮಾಂಸಾನುನಯಂ ಚ ಶಂಕರವಚೋ ಹುಂಕಾರಭಂಗಪ್ರದಮ್ ।
ಶಾಸ್ತ್ರಂ ತಂತ್ರಚತುಷ್ಟಯಾತ್ಮಕಮಿದಂ ನಿಃ ಸ್ವಪ್ನತಂತ್ರಾಂತರಾ
ವ್ಯಾಖ್ಯಾಸ್ಯಂತಿ ಪಠಂತಿ ಚ ಜನಾ ಕಿಂ ವಾ ಕಲೌ ದುಷ್ಕರಮ್ ॥
(ಆನೆಪ್ಪಾಚಾರ್ಯರು ಪಂಚಗ್ರಂಥೀಯಾ)

ವಿಸ್ಪೃಪುರ ಜಗನ್ಮಿಥ್ಯಾಜ್ಞಾನಾಂಧಕಾರಭಿದಾ ಕೃತಾ–
ಮಹಿತವಿಭವಂ ಸಂತನ್ವತ್ಯಾ ಚ ಮಧ್ವಮತಾಂಬುಧೇಃ ।
ವಿಮಲಿತಮಭೂದ್ಯೋಗಿವ್ಯಾಸಾನನೇಂದುಸಮುತಯಾ
ಸಪದಿ ಭುವನಂ ಸರ್ವಂ ತಾತ್ಪರ್ಯಚಂದ್ರಿಕಯಾ ತಯಾ ॥

## ನ್ಯಾಯಾಮೃತ

ನ್ಯಾಯಾಮೃತಂ ನಿಗಮವಾರಿನಿಧೇರ್ಗೃಹೀತ್ವಾ
ಶ್ರೀವ್ಯಾಸಯೋಗಿಹರಿಣಾ ಪ್ರತಿಮೀರ್ಯಮಾಣಮ್ ।
ಪೀತ್ವಾ ಭೃಶಂ ಸುಮನಸೋ ಧಿಷಣಾಭಿರನ್ಯಾನ್
ಸರ್ವಾನಮಂಸತ ತೃಣಾಯ ಸಪತ್ನವರ್ಗಾನ್ ॥

## ತರ್ಕತಾಂಡವ

ವ್ಯಾಸಯೋಗಿಲಸದುಕ್ತಿನರ್ತಕೀ
ಕಲ್ಪಿತಂ ಕಮನತರ್ಕತಾಂಡವಮ್ ।
ಪಶ್ಯತಸ್ಸದಸಿ ಕಸ್ಯ ಮಾನಸೇಽ
ತೃಪ್ತಿರಾದಿತಪದಂ ವಿಪಶ್ಚಿತಃ ॥
(ಇವು ಮೂರು ಸೋಮನಾಥ ಕವಿಯ ವ್ಯಾಸಯೋಗಿ ಚರಿತೆಯಿಂದ)

# ಷಾಷ್ಟಿಕಕುಲೋತ್ಪನ್ನ ಗ್ರಂಥಕಾರರು (ಸಂಸ್ಕೃತಭಾಷೆ)

**ಅಕ್ಷೋಭ್ಯತೀರ್ಥರು** ;—ವೇದಸಾರ ಸ್ತೋತ್ರ

**ಜಯತೀರ್ಥರು** ;–ತತ್ತ್ವಪ್ರಕಾಶಿಕಾ, ಶ್ರೀಮನ್ನ್ಯಾಯಸುಧಾ, ನ್ಯಾಯ ವಿವರಣ ಟೀಕಾ, ಪ್ರಮೇಯ ದೀಪಿಕಾ, ನ್ಯಾಯದೀಪಿಕಾ, ಪ್ರಕರಣಗಳ ಟೀಕೆಗಳು, ಋಗ್ಭಾಷ್ಯಟೀಕೆ, ಪ್ರಮಾಣಪದ್ಧತಿ, ವಾದಾವಳಿ, ಈಶಾವಾಸ್ಯ ಮತ್ತು ಷಟ್‌ಪ್ರಶ್ನೋಪನಿಷದ್ಭಾಷ್ಯಗಳ ಟೀಕೆಗಳು.

**ವಿದ್ಯಾಧಿರಾಜರು** ;—ಗೀತಾವಿವೃತಿ, ವಿಷ್ಣುಸಹಸ್ರನಾಮ ಟೀಕೆ.

**ಶ್ರೀಪಾದರಾಜರು** ·–(ಶ್ರೀಲಕ್ಷ್ಮೀನಾರಾಯಣತೀರ್ಥರು) ಶ್ರೀಮನ್ನ್ಯಾಯ ಸುಧಾವಾಗ್ವಜ್ರೋಪನ್ಯಾಸ.

**ವ್ಯಾಸರಾಜರು** ;—(ಚಂದ್ರಿಕಾಚಾರ್ಯರು) ಖಂಡನತ್ರಯ ಮಂದಾರ ಮಂಜರಿಗಳು, ತತ್ತ್ವವಿವೇಕ ಮಂದಾರಮಂಜರಿ, ತಾತ್ಪರ್ಯಚಂದ್ರಿಕಾ, ನ್ಯಾಯಾಮೃತ, ತರ್ಕತಾಂಡವ, ಭೇದೋಜ್ಜೀವನ, ವೇದಾಂತಸಂಗ್ರಹ ಖಂಡನ. ಷಾಷ್ಟಿಕವಂಶ ಮುಕ್ತಾಕಲಾಪ.

**ವಿಜಯೀಂದ್ರರು** :—ಇವರು 104 ಗ್ರಂಥಗಳನ್ನು ರಚಿಸಿದ್ದಾರೆಂದು ತಿಳಿದು ಬಂದಿದೆ. ಇಲ್ಲಿ ಸೂಚಿತವಾಗಿರುವ ಗ್ರಂಥಗಳು ಮಾತ್ರ ಉಪಲಬ್ಧವಿವೆ. ನ್ಯಾಯಾಮೃತವ್ಯಾಖ್ಯಾನ ಆಮೋದ, ನ್ಯಾಯಾಧ್ವದೀಪಿಕಾ, ನ್ಯಾಯಾಮೃತ ನ್ಯಾಯರತ್ನಮಾಲಾ, ನಯಚಂಪಕಮಾಲಾ, ನ್ಯಾಯಾಮೃತೋದಾಹೃತ ಜೈಮಿನೀಯನ್ಯಾಯಮಾಲಾ, ನಯಮಂಜರಿ, ನಯಮುಕುರ, ವಾಗ್ವೈಖರಿ, ವಾದಮಾಲಿಕಾ, ಶ್ರುತಿತಾತ್ಪರ್ಯಕೌಮುದಿ, ಶ್ರುತ್ಯರ್ಥಸಾರ, ತುರೀಯಶಿವ ಖಂಡನ, ಭೇದವಿದ್ಯಾವಿಲಾಸ, ಪರತತ್ತ್ವ ಪ್ರಕಾಶಿಕಾ, ಉಪಸಂಹಾರವಿಜಯ ಮಧ್ವಾಧ್ವಕಂಟಕೋದ್ಧಾರ, ಚಕ್ರಮೀಮಾಂಸಾ, ಅಧಿಕರಣಮಾಲಾ, ಅಪ್ಪಯ್ಯಕಪೋಲಚಪೇಟಿಕಾ, ಬ್ರಹ್ಮಸೂತ್ರ ನ್ಯಾಯ ಸಂಗ್ರಹ, ಪ್ರಮಾಣ ಪದ್ಧತಿ ಟಿಪ್ಪಣಿ, ರಾಮಾನುಜಮತರೀತ್ಯಾಸೂತ್ರಾರ್ಥ, ದಶಪ್ರಕರಣಗಳ

ಟಿಪ್ಪಣಿಗಳು, ಮಧ್ವಸಿದ್ಧಾಂತ ಸಾರೋದ್ಧಾರ, ಸರ್ವಸಿದ್ಧಾಂತ ಸಾರಾಸಾರ ವಿವೇಕ, ಸಾರಾಸಾರ ವಿವೇಕ, ಯುಕ್ತಿರತ್ನಾಕರ (ತರ್ಕತಾಂಡವವ್ಯಾಖ್ಯಾನ) ಪ್ರಣವದರ್ಪಣಖಂಡನ, ಸನ್ಮಾರ್ಗದೀಪಿಕಾ, ಪದಾರ್ಥಸಂಗ್ರಹ, ಚಂದ್ರಿಕೋದಾಹೃತಜೈಮಿನೀಯನ್ಯಾಯಮಾಲಾ, ನಾರಾಯಣಶಬ್ದನಿರ್ವಚನ, ಪಿಷ್ಟಪಶುಮೀಮಾಂಸ, ಅದ್ವೈತಶಿಕ್ಷಾ, ವಿರೋಧೋದ್ಧಾರ, ಶ್ರವಣವಿದ್ಯಾವಿಲಾಸ, ವ್ಯಾಸರಾಜಾಭ್ಯುದಯ

ಚನ್ನಪಟ್ಟಣದ ತಿಮ್ಮಣ್ಣಾಚಾರ್ಯರು ; (ವ್ಯಾಸರಾಜರ ಶಿಷ್ಯರು) ದ್ವಾದಶ ಸ್ತೋತ್ರ ವ್ಯಾಖ್ಯಾನ

ವಿಠಲರು : (ವ್ಯಾಸರಾಜರ ಶಿಷ್ಯರು) ಅವತಾರತಾರತಮ್ಯಸದ್ವೃತ್ತಮಾಲಾ.

ಸುಧೀಂದ್ರರು ; ತರ್ಕತಾಂಡವವ್ಯಾಖ್ಯಾನ ಸದ್ಯುಕ್ತಿರತ್ನಾಕರ, ಭಾಗವತ ಎರಡು ಮತ್ತು ೧೧ನೇಸ್ಕಂಧ ವ್ಯಾಖ್ಯಾನ, ಅಲಂಕಾರಮಂಜರಿ, ಅಲಂಕಾರನಿಕಷ, ಸಾಹಿತ್ಯಸಾಮ್ರಾಜ್ಯ ಸುಭದ್ರಾಪರಿಣಯ ನಾಟಕ, ವ್ಯಾಸರಾಜಾಭ್ಯುದಯ ವ್ಯಾಖ್ಯಾನ, ಭಾವರತ್ನಮಂಡನ, ಗುರುಗುಣರತ್ನಮಾಲಾ.

ಯಾದವೇಂದ್ರರು : ನ್ಯಾಯಾಮೃತವ್ಯಾಖ್ಯಾನ.

ರಾಘವೇಂದ್ರಸ್ವಾಮಿಗಳು : ಮಂತ್ರಾರ್ಥಮಂಜರಿ, ಋಗರ್ಥಮಂಜರಿ, ಉಪನಿಷತ್ ಖಂಡಾರ್ಥಗಳು, ಗೀತಾವಿವೃತಿ, ತಂತ್ರದೀಪಿಕಾ, ದಶಪ್ರಕರಣ ಟಿಪ್ಪಣಿಗಳು, ತತ್ತ್ವಪ್ರಕಾಶಿಕಾಟಿಪ್ಪಣಿ, ಶ್ರೀಮನ್ನ್ಯಾಯಸುಧಾ ಟಿಪ್ಪಣಿ ಪರಿಮಳ, ಗೀತಾಭಾಷ್ಯಪ್ರಮೇಯದೀಪಿಕಾ ಭಾವದೀಪ, ಗೀತಾತಾತ್ಪರ್ಯನ್ಯಾಯದೀಪಿಕಾಭಾವದೀಪ, ಪ್ರಮಾಣಪದ್ಧತಿಟಿಪ್ಪಣಿ, ವಾದಾವಳಿ ಟಿಪ್ಪಣಿ, ತಾತ್ಪರ್ಯ ಚಂದ್ರಿಕಾ ಟಿಪ್ಪಣಿ-ಪ್ರಕಾಶ, ತರ್ಕತಾಂಡವ ಟಿಪ್ಪಣಿ-ನ್ಯಾಯದೀಪ, ಅಣುಭಾಷ್ಯಟೀಕಾ–ತತ್ತ್ವಮಂಜರಿ, ಪ್ರಮೇಯನವಮಾಲಿಕಾ ವ್ಯಾಖ್ಯಾನ, ಮಹಾಭಾರತ ತಾತ್ಪರ್ಯ ನಿರ್ಣಯ–ಭಾವಸಂಗ್ರಹ, ನ್ಯಾಯಮುಕ್ತಾವಲಿ, ಪ್ರಮೇಯ ಸಂಗ್ರಹ, ರಾಮಚಾರಿತ್ರ ಮಂಜರಿ, ಕೃಷ್ಣ

ಚಾರಿತ್ರಮಂಜರಿ, ಪ್ರಾತಃಸಂಕಲ್ಪಗದ್ಯ, ಪಂಚಸೂಕ್ತ ವ್ಯಾಖ್ಯಾನಗಳು, ಭಾಟ್ಟ ಸಂಗ್ರಹ.

**ಸುಮತೀಂದ್ರರು :** ಗೀತಾಭಾಷ್ಯಪ್ರಮೇಯದೀಪಿಕಾವ್ಯಾಖ್ಯಾನ ಭಾವರತ್ನಕೋಶ, ತತ್ತ್ವಪ್ರಕಾಶಿಕಾ ಭಾವರತ್ನಕೋಶ, ನರಸಿಂಹ ಸ್ತುತಿ ವ್ಯಾಖ್ಯಾನ, ಭಾವರತ್ನ ಮಂಡನ ವ್ಯಾಖ್ಯಾನ.

**ವಾದೀಂದ್ರರು :** ನವ್ಯದುರುಕ್ತಿಶಿಕ್ಷಾ, ತತ್ತ್ವಪ್ರಕಾಶಿಕಾ ಟಿಪ್ಪಣಿ, (ಮೀಮಾಂಸಾನಯದರ್ಪಣ,) ತತ್ತ್ವೋದ್ಯೋತ ಟಿಪ್ಪಣಿ, ಗುರುಗುಣಸ್ತವನ.

**ಧೀರೇಂದ್ರರು :** ನಾರಾಯಣೋಪನಿಷದ್ವ್ಯಾಖ್ಯಾನ, ಈಶಾವಾಸ್ಯೋಪನಿಷದ್ವ್ಯಾಖ್ಯಾನ, ವಿಷಯವಾಕ್ಯಸಂಗ್ರಹ, ಗುರುಗುಣಸ್ತವವ್ಯಾಖ್ಯಾನ, ಮನ್ಯುಸೂಕ್ತವ್ಯಾಖ್ಯಾನ, ರಾಘವೇಂದ್ರಸ್ತೋತ್ರವ್ಯಾಖ್ಯಾನ, ಕಾರಕವಾದ ಇತರ ಕೆಲವು ಸೂಕ್ತ ವ್ಯಾಖ್ಯಾನಗಳು.

**ಸುಜನೇಂದ್ರರು :** ಪಕ್ಷತಾವಚ್ಛೇದಕವಿಚಾರ, ಚಂದ್ರಿಕಾಭೂಷಣ.

**ಲಕ್ಷ್ಮೀನಾರಾಯಣಾಚಾರ್ಯರು :** ರಾಘವೇಂದ್ರರ ಪೂರ್ವಾಶ್ರಮದ ಪುತ್ರರು—ಋಗ್ಭಾಷ್ಯಟೀಕಾಟಿಪ್ಪಣಿ, ರಾಮಚಾರಿತ್ರಮಂಜರಿ ವ್ಯಾಖ್ಯಾನ.

**ನಾರಾಯಣಾಚಾರ್ಯರು :** ಇವರು ರಾಘವೇಂದ್ರರ ಪೂರ್ವಾಶ್ರಮದ ಸೋದರಳಿಯಂದಿರು. ರಾಘವೇಂದ್ರವಿಜಯ ಮಹಾಕಾವ್ಯ.

**ಅಪ್ಪಣ್ಣಾಚಾರ್ಯರು :** ಇವರು ರಾಯರ ಶಿಷ್ಯರು–ರಾಘವೇಂದ್ರ ಸ್ತೋತ್ರ, ರಾಘವೇಂದ್ರಗದ್ಯ, ರಾಘವೇಂದ್ರ ದಂಡಕ.

**ಕೃಷ್ಣಾಚಾರ್ಯರು :** ಇವರು ಯೋಗೀಂದ್ರರ ಪೂರ್ವಾಶ್ರಮದ ಪುತ್ರರು ರಾಘವೇಂದ್ರರ ವಿದ್ಯಾಶಿಷ್ಯರು–ಸ್ಮೃತಿಮುಕ್ತಾವಳಿ, ಕೃಷ್ಣಾಮೃತ ಮಹಾರ್ಣವ ಟೀಕೆ, ಸದಾಚಾರಸ್ಮೃತಿ ವ್ಯಾಖ್ಯಾನ.

**ಲಕ್ಷ್ಮೀನರಸಿಂಹಸೂರಿಗಳು :** ಇವರು ರಾಘವೇಂದ್ರರ ಪೂರ್ವಾಶ್ರಮದ ಭಾವಂದಿರು ಕಥಾಲಕ್ಷಣವ್ಯಾಖ್ಯಾನ ಇವರ ಮಕ್ಕಳು ಆನಂದ ತೀರ್ಥಾಚಾರ್ಯರು–ಮಧ್ವವಿಜಯಕ್ಕೆ ವ್ಯಾಖ್ಯಾನ.

**ಲಕ್ಷ್ಮೀನಾಥತೀರ್ಥರು :** ನ್ಯಾಯಾಮೃತ ಟಿಪ್ಪಣಿ.

**ರಘುನಾಥತೀರ್ಥರು :** (ಶೇಷಚಂದ್ರಿಕಾಚಾರ್ಯರು) ಶಿಷ್ಟತಾತ್ಪರ್ಯ ಚಂದ್ರಿಕೆ, ತಂತ್ರಸಾರ ಸಂಗ್ರಹ ಟೀಕೆ ತತ್ತ್ವಕಣಿಕಾ, ಬೃಹತೀಸಹಸ್ರನಾಮ ಟೀಕೆ ತತ್ತ್ವಸಾರ. ಗಂಗಾಸ್ತುತಿ,

**ಜಗನ್ನಾಥತೀರ್ಥರು :** (ಭಾಷ್ಯದೀಪಿಕಾಚಾರ್ಯರು) ಭಾಷ್ಯದೀಪಿಕೆ ಸೂತ್ರದೀಪಿಕೆ.

**ಚಿಕ್ಕಬಳ್ಳಾಪುರದ ಆಚಾರ್ಯರು :** ಅನ್ವಿತಾಭಿಧಾನವಾದ.

**ಗೌಡಗೆರೆ ವೆಂಕಟರಮಣಾಚಾರ್ಯರು :** ಚಂದ್ರಿಕಾಪ್ರಕಾಶಪ್ರಸರ, ಅದ್ವೈತದೀಪಿಕಾ ವಾತಾಗಮ, ಜೀವಕರ್ತೃತ್ವ ವಿಚಾರ

**ಗೌಡಗೆರೆ ಶ್ರೀನಿವಾಸಾಚಾರ್ಯರು :** ಮಧ್ವಸಿದ್ಧಾಂತ ಸಂಗ್ರಹ ಉಪನ್ಯಾಸ ಮಂಜರೀ.

**ಮಾಗಡಿ ರಂಗನಾಥಾಚಾರ್ಯರು :** ವಿಜಯೀಂದ್ರವಾಗ್ವಜ್ರವಿಜಯ (ಪರಕಾಲಪರಾಭವ).

**ಗೌಡಗೆರೆ ಗೋಪಾಲಕೃಷ್ಣಾಚಾರ್ಯರು :** ಗ್ರಂಥಮಾಲಿಕಾ ಪ್ರಸರ.

**ಭಾಸ್ಕರಭಟ್ಟರು ·** ಸಿದ್ಧಾಂತ ಶಿರೋಮಣಿ, ಲೀಲಾವತಿ,

**ಭಟ್ಟೋತ್ಪಲರು :** ಭಟ್ಟೋತ್ಪಲೀಯ ಕಾವ್ಯ.

**ಜಗನ್ನಾಥದಾಸರು :** ಹರಿಕಥಾಮೃತಸಾರ. ಕನ್ನಡ ಭಾಷೆಯಲ್ಲಿ

# ಮಠತ್ರಯಪೀಠಾಧಿಪತಿಗಳ ಹೆಸರು ಮತ್ತು ವೃಂದಾವನ ಸ್ಥಳ

## ಶ್ರೀರಾಘವೇಂದ್ರಸ್ವಾಮಿಗಳ ಮಹಾಸಂಸ್ಥಾನ

| | ಹೆಸರು | ಸ್ಥಳ |
|---|---|---|
| 1 | ಶ್ರೀಪದ್ಮನಾಭತೀರ್ಥರು | ನವವೃಂದಾವನ |
| 2 | ಶ್ರೀನರಹರಿತೀರ್ಥರು | ಹಂಪೆ |
| 3 | ಶ್ರೀಮಾಧವತೀರ್ಥರು | ಮಣ್ಣೂರು |
| 4 | ಶ್ರೀಅಕ್ಷೋಭ್ಯ ,, | ಮಲಖೇಡ |
| 5 | ಶ್ರೀಜಯತೀರ್ಥರು | ,, |
| 6 | ಶ್ರೀವಿದ್ಯಾಧಿರಾಜರು | ಯರಗೊಳ |
| 7 | ಶ್ರೀಕವೀಂದ್ರತೀರ್ಥರು | ನವವೃಂದಾವನ |
| 8 | ಶ್ರೀವಾಗೀಶತೀರ್ಥರು | ,, |
| 9 | ಶ್ರೀರಾಮಚಂದ್ರತೀರ್ಥರು | ಯರಗೊಳ |
| 10 | ಶ್ರೀವಿಬುಧೇಂದ್ರತೀರ್ಥರು | ತಿರುನೆಲ್‌ವೇಲಿ |
| 11 | ಶ್ರೀಜಿತಾಮಿತ್ರತೀರ್ಥರು | ಶಿವಪೂರ |
| 12 | ಶ್ರೀರಘುನಂದನತೀರ್ಥರು | ಹಂಪೆ |
| 13 | ಶ್ರೀಸುರೇಂದ್ರತೀರ್ಥರು | ಮಧುರೆ |
| 14 | ಶ್ರೀವಿಜಯೀಂದ್ರತೀರ್ಥರು | ಕುಂಭಕೋಣ |
| 15 | ಶ್ರೀಸುಧೀಂದ್ರತೀರ್ಥರು | ನವವೃಂದಾವನ |
| 16 | ಶ್ರೀರಾಘವೇಂದ್ರತೀರ್ಥರು | ಮಂತ್ರಾಲಯ |
| 17 | ಶ್ರೀಯೋಗೀಂದ್ರತೀರ್ಥರು | ಶ್ರೀರಂಗ |
| 18 | ಶ್ರೀಸೂರೀಂದ್ರತೀರ್ಥರು | ಮಧುರೆ |
| 19 | ಶ್ರೀಸುಮತೀಂದ್ರತೀರ್ಥರು | ಶ್ರೀರಂಗ |
| 20 | ಶ್ರೀಉಪೇಂದ್ರತೀರ್ಥರು | ,, |

| | | |
|---|---|---|
| 21 | ಶ್ರೀವಾದೀಂದ್ರತೀರ್ಥರು | ಮಂತ್ರಾಲಯ |
| 22 | ಶ್ರೀವಸುಧೇಂದ್ರತೀರ್ಥರು | ಕೆಂಚನಗುಡ್ಡ |
| 23 | ಶ್ರೀವರದೇಂದ್ರತೀರ್ಥರು | ಪುಣೆ |
| 24 | ಶ್ರೀಧೀರೇಂದ್ರತೀರ್ಥರು | ಹೊಸರಿತ್ತಿ |
| 25 | ಶ್ರೀಭುವನೇಂದ್ರತೀರ್ಥರು | ರಾಜೋಳಿ |
| 26 | ಶ್ರೀಸುಬೋಧೇಂದ್ರ ತೀರ್ಥರು | ನಂಜನಗೂಡು |
| 27 | ಶ್ರೀಸುಜನೇಂದ್ರತೀರ್ಥರು | ,, |
| 28 | ಶ್ರೀಸುಜ್ಞಾನೇಂದ್ರತೀರ್ಥರು | ,, |
| 29 | ಶ್ರೀಸುಧರ್ಮೇಂದ್ರತೀರ್ಥರು | ಮಂತ್ರಾಲಯ |
| 30 | ಶ್ರೀಸುಗುಣೇಂದ್ರತೀರ್ಥರು | ಗಿರಿಯಂಪೇಟೆ (ಚಿತ್ತೂರು) |
| 31 | ಶ್ರೀಸುಪ್ರಜ್ಞೇಂದ್ರತೀರ್ಥರು | ನಂಜನಗೂಡು |
| 32 | ಶ್ರೀಸುಕೃತೀಂದ್ರತೀರ್ಥರು | ,, |
| 33 | ಶ್ರೀಸುಶೀಲೇಂದ್ರತೀರ್ಥರು | ಹೊಸರಿತ್ತಿ |
| 34 | ಶ್ರೀಸುವ್ರತೀಂದ್ರತೀರ್ಥರು | ಮಂತ್ರಾಲಯ |
| 35 | ಶ್ರೀಸುಯಮೀಂದ್ರತೀರ್ಥರು | ,, |
| 36 | ಶ್ರೀಸುಜಯೀಂದ್ರತೀರ್ಥರು | ಈಗ ವಿರಾಜಮಾನವಾಗಿರುವವರು |

## ಶ್ರೀಶ್ರೀಪಾದರಾಜರ ಮಹಾಸಂಸ್ಥಾನ

| | | |
|---|---|---|
| 1 | ಶ್ರೀಪದ್ಮನಾಭತೀರ್ಥರು | ನವವೃಂದಾವನ |
| 2 | ಶ್ರೀಲಕ್ಷ್ಮೀಧರತೀರ್ಥರು | ಗೊತ್ತಿಲ್ಲ |
| 3 | ಶ್ರೀಸಂಕರ್ಷಣತೀರ್ಥರು | ,, |
| 4 | ಶ್ರೀಪರಶುರಾಮ ,, | ಶ್ರೀರಂಗ |
| 5 | ಶ್ರೀಆದಿರಾಜತೀರ್ಥರು | ಗೊತ್ತಿಲ್ಲ |
| 6 | ಶ್ರೀಸತ್ಯವ್ರತ ,, | ,, |
| 7 | ಶ್ರೀಸ್ವರ್ಣವರ್ಣತೀರ್ಥರು | ಶ್ರೀರಂಗ |

| | | |
|---|---|---|
| 8 | ಶ್ರೀನರಸಿಂಹತೀರ್ಥರು | ಮುಳಬಾಗಿಲು |
| | ಲಕ್ಷ್ಮೀನಾರಾಯಣತೀರ್ಥರು (ಶ್ರೀಪಾದರಾಯರು) | |
| 9 | ಶ್ರೀಹಯಗ್ರೀವತೀರ್ಥರು | ,, |
| 10 | ಶ್ರೀಪತಿತೀರ್ಥರು | ,, |
| 11 | ಶ್ರೀಧರತೀರ್ಥರು | ,, |
| 12 | ಶ್ರೀಗೋಪಾಲಸ್ವಾಮಿತೀರ್ಥರು | ,, |
| 13 | ಶ್ರೀರಾಮಚಂದ್ರತೀರ್ಥರು | ಪೆನುಗೊಂಡ |
| 14 | ಶ್ರೀರಘುನಾಥತೀರ್ಥರು | ಗೊತ್ತಿಲ್ಲ |
| 15 | ಶ್ರೀಲಕ್ಷ್ಮೀಮನೋಹರತೀರ್ಥರು | ಪುದುಪಾಳ್ಯ |
| 16 | ಶ್ರೀಲಕ್ಷ್ಮೀಪತಿತೀರ್ಥರು | ,, |
| 17 | ಶ್ರೀಲಕ್ಷ್ಮೀನಾಥತೀರ್ಥರು | ಅಬ್ಬೂರು |
| 18 | ಶ್ರೀಲಕ್ಷ್ಮೀಕಾಂತ ,, | ವೆಂಗೆರೆ ನಾಮಕಲ್ |
| 19 | ಶ್ರೀಕಾಂತತೀರ್ಥರು | ಸಂಗಲಿ |
| 20 | ಶ್ರೀನಿಧಿತೀರ್ಥರು | ಪುದುಪಾಳ್ಯ |
| 21 | ಶ್ರೀವಿದ್ಯಾನಿಧಿತೀರ್ಥರು | ,, |
| 22 | ಶ್ರೀಜ್ಞಾನನಿಧಿತೀರ್ಥರು | ಶ್ರೀರಂಗಪಟ್ಟಣ |
| 23 | ಶ್ರೀಗುಣನಿಧಿತೀರ್ಥರು | ತಾಯೂರು |
| 24 | ಶ್ರೀಗುಣಸಾರನಿಧಿತೀರ್ಥರು | ನೃಸಿಂಹತೀರ್ಥ |
| 25 | ಶ್ರೀಪ್ರಜ್ಞಾನಿಧಿತೀರ್ಥರು | ,, |
| 26 | ಶ್ರೀಸುಬೋಧನಿಧಿತೀರ್ಥರು | ,, |
| 27 | ಶ್ರೀವೈರಾಗ್ಯನಿಧಿತೀರ್ಥರು | ,, |
| 28 | ಶ್ರೀಸುಜ್ಞಾನನಿಧಿತೀರ್ಥರು | ,, |
| 29 | ಶ್ರೀಸುಗುಣನಿಧಿತೀರ್ಥರು | ಭವಾನಿ |
| 30 | ಶ್ರೀಸುಧೀನಿಧಿತೀರ್ಥರು | ಪುದುಪಾಳ್ಯ |
| 31 | ಶ್ರೀಮೇಧಾನಿಧಿತೀರ್ಥರು | ,, |
| 32 | ಶ್ರೀದಯಾನಿಧಿತೀರ್ಥರು | ನೃಸಿಂಹತೀರ್ಥ |

| | | | |
|---|---|---|---|
| 33 | ಶ್ರೀಸತ್ಯನಿಧಿತೀರ್ಥರು | | ,, |
| 34 | ಶ್ರೀವಿಜಯನಿಧಿತೀರ್ಥರು | | ಈಗ ವಿರಾಜಮಾನರಾಗಿರುವವರು |

## ಶ್ರೀವ್ಯಾಸರಾಜ ಮಹಾಸಂಸ್ಥಾನ

| | | | |
|---|---|---|---|
| 1 | ಶ್ರೀಪದ್ಮನಾಭತೀರ್ಥರು | | ನವವೃಂದಾವನ |
| 2 | ಶ್ರೀನರಹರಿತೀರ್ಥರು | | ಹಂಪೆ |
| 3 | ಶ್ರೀಮಾಧವತೀರ್ಥರು | | ಮಣ್ಣೂರು |
| 4 | ಶ್ರೀಅಕ್ಷೋಭ್ಯತೀರ್ಥರು | | ಮಲಖೇಡ |
| 5 | ಶ್ರೀಜಯತೀರ್ಥರು | | ,, |
| 6 | ಶ್ರೀವಿದ್ಯಾಧಿರಾಜರು | | ಯರಗೋಳ |
| 7 | ಶ್ರೀರಾಜೇಂದ್ರತೀರ್ಥರು | | ,, |
| 8 | ಶ್ರೀಜಯಧ್ವಜ | ,, | ,, |
| 9 | ಶ್ರೀಪುರುಷೋತ್ತಮತೀರ್ಥರು | | ಅಬ್ಬೂರುಗುಹೆ |
| 10 | ಶ್ರೀಬ್ರಹ್ಮಣ್ಯತೀರ್ಥರು | | ಅಬ್ಬೂರು |
| 11 | ಶ್ರೀವ್ಯಾಸರಾಜರು | | ನವವೃಂದಾವನ |
| 12 | ಶ್ರೀನಿವಾಸತೀರ್ಥರು | | ,, |
| 13 | ಶ್ರೀರಾಮತೀರ್ಥರು | | ,, |
| 14 | ಶ್ರೀಲಕ್ಷ್ಮೀಕಾಂತತೀರ್ಥರು | | ಪೆನುಗೊಂಡ |
| 15 | ಶ್ರೀಪತಿತೀರ್ಥರು | | ವೆಲ್ಲೂರು |
| 16 | ಶ್ರೀರಾಮಚಂದ್ರತೀರ್ಥರು | | ,, |
| 17 | ಶ್ರೀಲಕ್ಷ್ಮೀವಲ್ಲಭ | ,, | ಬೇಲೂರು |
| 18 | ಶ್ರೀಲಕ್ಷ್ಮೀನಾಥ | ,, | ಶ್ರೀರಂಗ |
| 19 | ಶ್ರೀಲಕ್ಷ್ಮೀಪತಿ | ,, | ,, |
| 20 | ಶ್ರೀಲಕ್ಷ್ಮೀನಾರಾಯಣ | ,, | ಬದರಿಕಾಶ್ರಮ |
| 21 | ಶ್ರೀರಘುನಾಥ | ,, | ತಿರುಮಕೂಡಲು |
| 22 | ಶ್ರೀಜಗನ್ನಾಥತೀರ್ಥರು | | ಕುಂಭಕೋಣ |

| | | | |
|---|---|---|---|
| 23 | ಶ್ರೀನಾಥತೀರ್ಥರು | | ತ್ರಿಮಕೂಟ |
| 24 | ಶ್ರೀವಿದ್ಯಾನಾಥತೀರ್ಥರು | | ಕುಂಭಕೋಣ |
| 25 | ಶ್ರೀವಿದ್ಯಾಪತಿ | ,, | ಕುಂಭಕೋಣ |
| 26 | ಶ್ರೀವಿದ್ಯಾವಲ್ಲಭರು | ,, | ಸೋಸಲೆ |
| 27 | ಶ್ರೀವಿದ್ಯಾಕಾಂತ | ,, | ,, |
| 28 | ಶ್ರೀವಿದ್ಯಾನಿಧಿ | ,, | ,, |
| 29 | ಶ್ರೀವಿದ್ಯಾಪೂರ್ಣ | ,, | ,, |
| 30 | ಶ್ರೀವಿದ್ಯಾಶ್ರೀಸಿಂಧುತೀರ್ಥರು | | ,, |
| 31 | ಶ್ರೀವಿದ್ಯಾಶ್ರೀಧರ | ,, | ,, |
| 32 | ಶ್ರೀವಿದ್ಯಾಶ್ರೀನಿವಾಸ | ,, | ,, |
| 33 | ಶ್ರೀವಿದ್ಯಾಸಮುದ್ರ | ,, | ,, |
| 34 | ಶ್ರೀವಿದ್ಯಾರತ್ನಾಕರ | ,, | ,, |
| 35 | ಶ್ರೀವಿದ್ಯಾವಾರಿಧಿ | ,, | ಶ್ರೀರಂಗ |
| 36 | ಶ್ರೀವಿದ್ಯಾಪ್ರಸನ್ನ | ,, | ಸೋಸಲೆ |
| 37 | ಶ್ರೀವಿದ್ಯಾಪಯೋನಿಧಿ | ,, | ಈಗ ವಿರಾಜಮಾನರಾಗಿರುವವರು |



# ಷಾಷ್ಟಿಕ ನಾಮಾವಳಿ

ಕರ್ನಾಟಕದಲ್ಲಿಯ ಷಾಷ್ಟಿಕಮನೆತನವು ಬಹಳ ಪುರಾತನವಾದುದು. ಪಂಜಾಬಿಗೆ ಸೇರಿದ ಅಹಿಚ್ಛತ್ರ ಅಗ್ರಹಾರವು ಇವರ ಮೂಲ ವಾಸಸ್ಥಾನ. ಬನವಾಸಿಯ ಕದಂಬರಾಜರಲ್ಲಿ ಹೆಸರಾಂತ ತ್ರಿಣೇತ್ರಕದಂಬನು ತಾನು ಕೈಗೊಂಡ ಅಶ್ವಮೇಧಯಾಗದ ಪೂರ್ತಿಕೆಗಾಗಿ ಕ್ರಿ. ಶ. ೪ನೆಯ ಶತಮಾನದಲ್ಲಿ ಇವರನ್ನು ಇಲ್ಲಿಗೆ ಕರೆತಂದನು. ಅಶ್ವಮೇಧ ಮತ್ತು ರಾಜಸೂಯಗಳಂತಹ ದೊಡ್ಡ ಯಾಗಗಳಿಗೆ ಅರವತ್ತು ನಾಲ್ಕು ಜನ ಋತ್ವಿಜರು ಬೇಕಾಗುವರು. ಲಕ್ಷ್ಮೀಶನ ಕನ್ನಡ ಜೈಮಿನಿ ಭಾರತದ ೩೪ನೆ ಸಂಧಿಯ ಆದಿಪದ್ಯದಲ್ಲಿ.

ಪ॥ ಅರಸಕೇಳರವತ್ತುನಾಲ್ಕು ದಂಪತಿಗಳ
ಧ್ವರದ ಋತ್ವಿಕ್ಕುಗಳ್ವೆರಸಿ ವೇದವ್ಯಾಸ
ಪರಮಋಷಿ ಗಂಗೆಯೊಳ್ಕುಲದೇವತೆಯನರ್ಚಿಸಿ ಮಂತ್ರೋ
ದಕವನು ।

ಎಂದಿದೆ. ಈ ಕಾರಣದಿಂದ ತ್ರಿಣೇತ್ರಕದಂಬನು ಉತ್ತರಭಾರತದಿಂದ ಶ್ರೌತ್ರ ಸೂತ್ರದಲ್ಲಿ ನಿಷ್ಣಾತರಾದ ಅರವತ್ತುನಾಲ್ಕು ಬ್ರಾಹ್ಮಣಕುಟುಂಬಗಳನ್ನು ಇಲ್ಲಿಗೆ ಕರೆತಂದನೆಂಬುದನ್ನು ಒಪ್ಪತಕ್ಕುದಾಗಿದೆ

## ತಾಳಗುಂದ ಅಗ್ರಹಾರವೂ ಷಾಷ್ಟಿಕರೂ

ಈಗಿನ ಶಿವಮೊಗ್ಗೆಯ ಜಿಲ್ಲೆಯ ಷಿಕಾರಿಪುರ ತಾಲ್ಲೋಕಿನ ಆಡಳಿತಕ್ಕೆ ಒಳಿತವಾಗಿರುವ ತಾಳಗುಂದ ಅಗ್ರಹಾರವು ಷಾಷ್ಟಿಕರ ನೆಲಮನೆಯಾಗಿದ್ದಿತು. ಇಲ್ಲಿ ಷಾಷ್ಟಿಕರ ಹಿರಿಮೆಗೆ ಸಂಬಂಧಪಟ್ಟ ಪುರಾತನ ಶಿಲಾಶಾಸನಗಳು ಹೇರಳ ವಾಗಿವೆ ಇವುಗಳಲ್ಲಿ ಮಾಕಿಮಯ್ಯಬ್ರಾಹ್ಮಣಶ್ರೇಷ್ಠನ ಐವರು ಪುತ್ರರಾದ ವಾಮನ, ಗೋಪ, ತ್ರಿಲೋಚನ, ಈಶ್ವರ ಮತ್ತು ನೃಸಿಂಹ ಇವರು

ಕ್ರಿ. ಶ, ೧೩ ನೆಯ ಶತಮಾನದ ಪೂರ್ವಾರ್ಧದಲ್ಲಿ ಮಾಧವದೇವರ ಪೂಜೆಗಾಗಿ ಭೂಸ್ವಾಸ್ಥ್ಯಗಳನ್ನು ದತ್ತಿಯಾಗಿ ಬಿಟ್ಟ ಶಿಲಾಶಾಸನವೂ ಒಂದಾಗಿದೆ. ಈ ಶಾಸನದಲ್ಲಿ ಷಾಷ್ಟಿಕರ ಇತಿಹಾಸಕ್ಕೆ ಸಂಬಂಧಿಸಿದ ಮಹತ್ವವಿಚಾರಗಳ ಉಲ್ಲೇಖ ಎದೆ

ಈ ಶಾಸನದಲ್ಲಿ ಉಕ್ತನಾಗಿರುವ ಮಾಕಿಮಯ್ಯನು ಷಾಷ್ಟಿಕರ ವಿಶ್ವಾಮಿತ್ರಗೋತ್ರದ ಚಕ್ರಿಯರ ಮನೆತನಕ್ಕೆ ಸೇರಿದವನು. ಈ ಶಾಸನದ ಒಂದೆಡೆಯಲ್ಲಿ "ಆ ಗ್ರಾಮದೊಳು ವಿಬುಧರ್ಗೆ ಚಕ್ರಧರನಂತೆ ಬುದ್ಧಿಚಕ್ರದಿಂ ಗ್ರಾಮಕ್ಕೆ ಬಪ್ಪದುರಿತಂಗಳಂ ಪರಿಹರಿಸಿ ಹಿತಮನಾಚರಿಸುವ ಕಾರಣದಿಂ ಚಕ್ರಿಯರೆಂಬಡ್ಡವೆಸರಂ ಪಡೆದ ವಂಶಮದೆನ್ತೆನೆ" ಎಂದಿದೆ. ಇದರಿಂದ ಷಾಷ್ಟಿಕಮನೆತನದ ಪ್ರತಿ ಉಪನಾಮವೂ ಅರ್ಥಪೂರಿತವಾಗಿದೆ ಎಂದು ವ್ಯಕ್ತವಾಗುವುದು. ಈ ಶಾಸನದ ಬೇರೊಂದು ಸ್ಥಳದಲ್ಲಿ "ಬನವಸೆ ಮೊದಲೆನಿಸಿದನೇಕ ಮಂಡಳೀಶ್ವರಂ ಮುಕ್ಕಣ್ಣ ಕದಂಬಂ ಜಗದನುಗ್ರಹ ವಿಗ್ರಹಂ ದಾನವಿನೋದದಕ್ಷಿಣಾಪಥದೊಳು ವಿಪ್ರಕುಳಮ ನರಕೆಯುನೆಳಸಿ ಪಡೆಯದಹಿಚ್ಛತ್ರ ಗ್ರಹಾರಮನಾರಾಧಿಸಿ ಪಡೆದಪಂ ನಿತ್ಯಾಸಿರಾಗ್ನಿಹೋತ್ರಪವಿತ್ರ ದ್ವಾತ್ರಿಂಶದ್ವಿಪ್ರಕುಟುಂಬಮಂ" ಎಂಬ ಲೇಖನವಿದೆ.

ದಕ್ಷಿಣಾಪಥದಲ್ಲಿ ಬ್ರಾಹ್ಮಣರನ್ನು ಹುಡುಕಿಸಿದಾಗ್ಯೂ ಅವರು ದೊರೆಯದೆ ಹೋದುದರಿಂದ ಈ ೬೪ ಬ್ರಾಹ್ಮಣ ಕುಟುಂಬಗಳನ್ನು ಅಹಿಚ್ಛತ್ರ ಅಗ್ರಹಾರದಿಂದ ಇಲ್ಲಿಗೆ ಕರೆತಂದನೆಂಬುದು ಗಮನಾರ್ಹವಾದ ವಿಚಾರ. ಈ ಶಾಸನದಲ್ಲಿನ "ದ್ವಾತ್ರಿಂಶದ್ವಿಪ್ರಕುಟುಂಬಮಂ" ಎಂಬ ವಾಕ್ಯದ ಗೂಡಾರ್ಥವನ್ನು ಬಿಡಿಸಿ ಹೇಳುವುದು ಯುಕ್ತವಾಗಿದೆ. ಶ್ರೌತ್ರಸೂತ್ರದಲ್ಲಿನ ದ್ವಂದ್ವಸಂಪಾದನಕ್ರಮವನ್ನನುಸರಿಸಿ "ದ್ವಾತ್ರಿಂಶತ್ ದ್ವಂದ್ವಾನಿ ವಿಪ್ರಕುಟುಂಬಮಂ" ಎಂದರೆ ಅರವತ್ತುನಾಲ್ಕು ಬ್ರಾಹ್ಮಣಕುಟುಂಬಗಳನ್ನು ಎಂದು ಅರ್ಥವಾಗುವುದು.

ಈ ಮಾಕಿಮಯ್ಯಧಣಾಯಕನು ಮುಮ್ಮಡಿ ಬಲ್ಲಾಳರಾಜನ ಆಳ್ವಿಕೆ

ಯಲ್ಲಿ ಪೆನಗೊಂಡೆಯಲ್ಲಿ ರಾಜಪ್ರತಿನಿಧಿಯಾಗಿ ರಾಜ್ಯವಾಳುತಲಿದ್ದನೆಂದು ಮಿಥಿಕ್ ಸೊಸೈಟಿಯು ೧೯೩೬ನೇ ವರ್ಷದ xxvi ನೆ ಸಂಪುಟದ ೨೨೩ನೆಯು ಪುಟದಲ್ಲಿ ವರದಿಯಾಗಿದೆ.

ಮೈಸೂರು ಗೆಜೆಟಿಯರಿನ ಎರಡನೆಯ ಸಂಪುಟದ ಹನ್ನೊಂದನೆಯು ಪರಿಚ್ಛೇದದ ೧೩೬೭ನೆಯು ಪುಟದಲ್ಲಿ "ಬಲ್ಲಾಳರ ಮಾಂಡಲಿಕ ಮಾಚಿದೇವ ನೆಂಬುವನು ಕ್ರಿ. ಶ. ೧೨೦೫ರಲ್ಲಿ ಹೊಳಲಕೆರೆನಾಡಿನ ಒಡೆಯನಾಗಿದ್ದ" ನೆಂಬ ಖಚಿತವಾದ ಬರಹವಿದೆ. ಶಾಸನಾಧಾರಗಳಲ್ಲದೆ, ಗ್ರಂಥಾಧಾರಗಳಿಂದಲೂ ಈ ಮಾಕಿಮಯ್ಯನು ಐತಿಹಾಸಿಕವ್ಯಕ್ತಿ ಎಂಬುದನ್ನು ದೃಢಪಡಿಸಲು ಸಾಧ್ಯ ವಿದೆ. ಮೈಗಣ್ಣದೇವನಿಂದ ರಚಿತವಾದ "ರನ್ನಗನ್ನಡಿ" ಎಂಬ ಕಾವ್ಯದಲ್ಲಿ ಮಾಕಿಮಯ್ಯನನ್ನು ಪೂಜ್ಯತಮನೆಂಬುದಾಗಿ ಶ್ಲಾಘಿಸಿದ್ದಾನೆ. ಅಲ್ಲದೆ ಮಾಕಿ ಮಯ್ಯನೆಂಬುದಕ್ಕೆ ವೈಕುಂಠಯ್ಯನೆಂದು ವ್ಯಾಖ್ಯಾನ ಮಾಡಿರುತ್ತಾನೆ ಮಾಕ, ನಾಕ, ಪಿನಾಕ ಎಂಬ ಪದಗಳಿಗೆ ಕನ್ನಡದಲ್ಲಿ ಅನುಕ್ರಮವಾಗಿ ವೈಕುಂಠ, ಸ್ವರ್ಗ ಮತ್ತು ಕೈಲಾಸ ಎಂದು ಅರ್ಥವಾಗುವುದು "ಜಗನ್ನಾಥವಿಜಯ", "ರಸಕಲಿಕೆ" ಮತ್ತು "ಕಾವ್ಯಾಲಂಕಾರ" ಇತ್ಯಾದಿ ಮಹಾಕಾವ್ಯಗಳನ್ನು ರಚಿಸಿರುವ ಕವಿಕುಲತಿಲಕ–ರುದ್ರಭಟ್ಟನು ಮಾಕಿಮಯ್ಯನ ದೌಹಿತ್ರನೆಂದು ಗ್ರಂಥಾಂತರ ಗಳಿಂದ ಬೆಳಕಿಗೆ ಬಂದಿದೆ. ಅಲ್ಲದೆ ಈ ವಿಚಾರವನ್ನೊಳಗೊಂಡ ರುದ್ರಭಟ್ಟನ "ರಸಕಲಿಕೆಯ" ಅಂತ್ಯಗದ್ಯವನ್ನು ಓದುಗರ ಅವಗಾಹನೆಗಾಗಿ ಇಲ್ಲಿ ಉಲ್ಲೇ ಖಿಸಿದೆ.

"ಇದು ಸಮಸ್ತ ಕುಲಾಧರ ಕ್ರಮನಿಷ್ಠ ಸಂಕ್ರಂದನಾದಿ ಸುರನಿಕರ ಮಣಿಮಕುಟ ಮಯೂಖ ಮಾಲಾಪುಂಜರಂಜಿತ ಚರಣ ಕಿಂಜಲ್ಕ ಮಂಜರೀ ಪಂಜರಿಕದಿಶಾವಲಯಂ, ಸಕಲ ದೈವದೀಕ್ಷಾಕರ್ತು–ನಿಖಿಲದೇವ ರಕ್ಷಾದೀಕ್ಷ ದೈನ್ಯದೇವದಾನವ ಶರಣಾಗತ ವಜ್ರಪಂಜರ–ವಿದ್ವಿಷ ಸರ್ಪ ಮಯೂರ– ಗರ್ವಿತ ರಾಕ್ಷಸ ಕುಲಕಮಲಾಕರ ಮತ್ತೇಭ–ಸಮಸ್ತ ಇಂದ್ರಾದಿ ದಿಕ್ಪಾಲ ಸಾರ್ವ ಭೌಮ – ರಾಜಚೂಡಾಮಣಿ – ರಾಜರಾಜ ಪರಮಾಪ್ತ ಕಾಶಿಕಾ ವಿಶ್ವೇಶ್ವರಂ ಪ್ರತ್ಯಕ್ಷಮಾಗಿ ಗುರೂಪದೇಶಂಗೈದಂತೆ–ಸರಸಕವಿ ಸಾರ್ವಭೌಮ–ಚತುರ ಕವಿ ಚತುರ್ಮುಖಂ_ಭಾವಕವಿ ಫಾಳಲೋಚನಂ-ವರ್ಣಕವಿ ವರ್ಣಾವತಂಸಂ–

ವಸ್ತುಕವಿ ಮಸ್ತಕನ್ಯಸ್ತಹಸ್ತಂ–ಅಘಟಕವಿ ಮಾನಮರ್ದನಂ–ಗರ್ವಿತಕವಿಗಿರಿ ವಜ್ರದಂಡಂ – ವರ್ತಮಾನಕವಿ ಕಾವ್ಯಲಕ್ಷಣ ದೀಕ್ಷಾಚಾರ್ಯ – ಚಕ್ರೇಶ್ವರ ಕುಲದುಹಿತಾ ಮಾಳಲ (ಮಾಲತೀ) ದೇವಿಗರ್ಭಸುಧಾಂಬೋಧಿ ರಾಕಾಸುಧಾ ಯಮಾನ ಸಕಲಪಂಡಿತಾರಾಧ್ಯ ಆರಾಧ್ಯಕುಲಪ್ರದೀಪ–ಹರಿತಸಕುಲಪಂಕೇರುಹ ಪದ್ಮಮಿತ್ರಂ – ಸಾಕಾರಸಕಲವೈದಿಕಾಗಮಶ್ರೌತಮಂತ್ರತಂತ್ರಸಕಲಾಚಾರ್ಯ ಪ್ರತಿಷ್ಠಾಪನಾಚಾರ್ಯ ಶೌರ್ಯಾಬ್ಧಿಸೋಮಂ ಸೋಮಾತ್ಮಜಂ–ಉಭಯ ಕವಿಕಮಲಾದಿತ್ಯ ಅರಿಮಹೀಶ ಕುರಾರರುದ್ರಂ ರುದ್ರಭಟ್ಟಂ–ವೀರಬಲ್ಲಾಳ ಮಂಡಳೇಶ್ವರಸಚಿವಂ–ಸಮಸ್ತ ಕಾವ್ಯರಸ ಸಾರಭೂತಂ–ಸುಕವೀಂದ್ರ ರುದ್ರ ಪ್ರಣೀತ "ರಸಕಲಿಕೆ" ಮಹಾಕಾವ್ಯದೊಳ್"

ಈ ಗದ್ಯದ ಪಶ್ಚಿಮಾರ್ಧದಲ್ಲಿ "ಚಕ್ರೇಶ್ವರಕುಲದುಹಿತಾ ಮಾಳಲ (ಮಾಲತೀ) ದೇವಿಗರ್ಭಸುಧಾಂಬೋಧಿ ರಾಕಾಸುಧಾಯಮಾನ" ಎಂಬ ಸ್ಪಷ್ಟೋಕ್ತಿಯಿಂದ ಇವನು ಮಾಕಿಮಯ್ಯನ ದೌಹಿತ್ರನೆಂಬುದು ನಿರ್ವಿವಾದ.

## ಇದೇ ಕಾವ್ಯದ ಬೇರೊಂದು ವೃತ್ತದಲ್ಲಿ

ವೃತ್ತ :—ಅಘಟರನಟ್ಟಿಮೆಟ್ಟಿ ರಿಪುವೀರರ ಬಿನ್ನಣಮಂ ನೆಗಳ್ಚಿಕಳಲ್ಚಿ
ಮೀರಿದ ಸುಭಟರ್ಕಳಂ ಪರಿಯೆ ಪೊಯ್ದಿದಿರಾಂತರನಿಕ್ಕಿ ಖಡ್ಗದಂಡದಿ
ನುರದಾಜಿಯೊಳ್ ವಿಜಯಲಕ್ಷ್ಮಿಗಧೀಶ್ವರನಾದುದಾತ್ತ ಶೌರ್ಯದಕಣಿ
ಷಾ ಷ್ಟಿ ಕ ಕು ಲ ವಿ ಭೂ ಷ ಣ ಆರಾಧ್ಯಕುಲಕಮಲಿನೀಮಾರ್ತಾಂಡ
ರುದ್ರಭಟ್ಟಂ ಪೆಸರ್ವೆತ್ತನುರ್ವಿಯೊಳ್ ವಿದ್ಯುಪ್ರಭಾಲಹರಿ
ಯಂತೆಸೆದು (ಗು) ಮಾವಗಂ ‖ ಎಂದಿರುವುದು.

ಇದರಿಂದ ಈತನು ದಂಡನಾಯಕನಾಗಿದ್ದು ರಣರಂಗದಲ್ಲಿ ಹೋರಾಡಿ ವಿಜಯವನ್ನು ಗಳಿಸುತ್ತಲಿದ್ದನೆಂದು ಗೊತ್ತಾಗುವುದು. ಅಲ್ಲದೆ ತಾನು ಷಾಷ್ಟಿಕಕುಲಸಂಜಾತನೆಂದು ಸ್ಪಷ್ಟೋಕ್ತಿಯಿಂದ ಹೇಳಿಕೊಂಡಿದ್ದಾನೆ.

**ರುದ್ರಭಟ್ಟನು—ವೀರಬಲ್ಲಾಳರಾಯನಿಗೆ ಮುಖ್ಯಮಂತ್ರಿಯಾಗಿದ್ದ ಚಂದ್ರಮೌಳಿಯ ಮಗಳು ಶಾರದಾದೇವಿಯನ್ನು ವಿವಾಹವಾಗಿದ್ದನು.**

ಚಂದ್ರಮೌಳಿಯು ಅಳಿಯನ ವಿದ್ಯಾಪ್ರೌಢಿಮೆಯನ್ನು ಈ ರೀತಿ ಕೊಂಡಾಡಿ ಆಶೀರ್ವದಿಸಿದ್ದಾನೆ.

ವೃ :—ಸಿದ್ಧಾಂತಾದ್ಯಖಿಳಾಗಮಾರ್ಥನಿಪುಣ ವ್ಯಾಖ್ಯಾನ ಸಂಶುದ್ಧಿಯಿಂ। ಶುದ್ಧಾಧ್ಯಾತ್ಮಕ ತತ್ತ್ವನಿರ್ಣಯವ ಚೋವಿನ್ಯಾಸದಿಂ ಪ್ರೌಢಿಸಂಬದ್ಧ ವ್ಯಾಕರಣಾರ್ಥಶಾಸ್ತ್ರಭರತಾಲಂಕಾರಸಾಹಿತ್ಯದಿಂಬದ್ಧಾಧಿಶ್ರೀಯುಮನೋವಿಕಾಸಬುಧಾಗ್ರಣಿರುದ್ರಂ ಜಾಮಾತಾವಿಲಸತ್ಕಾಂತಾಸಮೇತಮಿರ್ಕುಂಚಿರಂ ॥

ಚಂದ್ರಮೌಳಿಯು ಈ ಕೆಳಗಿನ ವೃತ್ತದಿಂದ ತನ್ನ ಮಗಳು ಶಾರದೆಯ ಜಾಣ್ಮೆಯನ್ನು ಮುಕ್ತಕಂಠದಿಂದ ಹೊಗಳಿದ್ದಾನೆ.

ವೃ :—ವಿಮಲವಿಭಾಸ್ವದೇಕಮುಖಿನುನ್ನತಸನ್ಮತಿ ಪ್ರಕಾಶನುತ್ತಮ ಚರಿತಾಂಚಿತಂ ಸಕಳಜೀವಹಿತಾಗಮವರ್ಧನೀಕೃತೋತ್ತಮನ ಮದಾತ್ಮನ ಪ್ರತಿಹತಂ ದಿ ಟ ಮೆ ಂ ದೊ ಲ ವಿ ಂ ದ ಜ ಸ್ತ್ರೀಯೋ ಕಮಲಭವಾಸ್ಯಪದ್ಮಮೆನೆಪೊರ್ದಿದಳೀಂಗಡ ಶಾರದೆ (ವಾಣಿ) ಮತ್ತುನತೆ ಏಂ ಜಾಣೆಯೋ ॥

ಚನ್ನರಾಯಪಟ್ಟಣದ ತಾಲ್ಲೂಕು ೧೫೦ನೇ ಸಂಖ್ಯೆಯ ಶಾಸನದಲ್ಲಿ "ಹೊಯ್ಸಳಬಲ್ಲಾಳದೇವದ್ಧಕ್ಷಿಣಮಹೀಮಂಡಲಮಂ ಪರಿಪಾಲಿಸುತ್ತಂ ದೋರಸಮುದ್ರದ ನೆಲವೀಡಿನೋಳ್ಸುಖ ಸಂಕಥಾವಿನೋದರಾಜ್ಯಂ ಗೆಯ್ಯುತ್ತಮಿರೆ x x x ಭಾರತಾಗಮತರ್ಕವ್ಯಾಕರಣೋಪನಿಷತ್ಕರವಿದ್ವಜ್ಜನನುತನೆನಿಪ ಸ್ಥಿರಪುಣ್ಯಚಂದ್ರಮೌಳಿಲಲಾಮಂ ನುತಬಲ್ಲಾಳನೃಪಾಳದಕ್ಷಿಣಭುಜಾದಂಡಂ x x x ನಿಶ್ಶೇಷವಿದ್ವಜ್ಜನಸ್ತುತನಪ್ಪೀವಿಭು ಚಂದ್ರಮೌಳಿಸಚಿವಂ ಧನ್ಯಂ ಪೆರರ್ಧನ್ಯರೆ" ಎಂದು ಮುಂತಾಗಿ ವರ್ಣನೆ ಇದೆ. ಈ ಕಾರಣಗಳಿಂದ ಈತನು ಷಾಷ್ಟಿಕಕುಲದೀಪರಲ್ಲೊಬ್ಬನಾಗಿದ್ದನೆಂಬುದು ನಿರ್ವಿವಾದವಾಗಿದೆ.

ಇವರು ಶ್ರೀಮನ್ಮಧ್ವಾಚಾರ್ಯರ ಅವತಾರಕ್ಕೆ ಒಂದು ನೂರು ವರ್ಷಗಳ ಹಿಂದೆ ಇದ್ದವರು. ಆ ಕಾಲದಲ್ಲಿ ರುದ್ರಭಟ್ಟ, ಗಂಗಾಧರಭಟ್ಟ, ಚಂದ್ರಮೌಳಿ ಮುಂತಾಗಿ ಹೆಸರಿಟ್ಟುಕೊಳ್ಳುತ್ತಲಿದ್ದರು.

ಶ್ರೀಮತ್ಸುಮಧ್ವವಿಜಯವನ್ನು ರಚಿಸಿರುವ ನಾರಾಯಣಪಂಡಿತಾಚಾರ್ಯರಿಗೆ ಶಂಕರಾಚಾರ್ಯರೆಂಬ ಹೆಸರಿನ ಚಿಕ್ಕತಂದೆ ಇದ್ದರೆಂದು ಮಧ್ವವಿಜಯದ ಹದಿನಾಲ್ಕನೇ ಸರ್ಗದ ಎರಡನೇ ಶ್ಲೋಕದಲ್ಲಿ ಉಕ್ತವಾಗಿದೆ. ಅದನ್ನು ವಾಚಕರ ಅವಗಾಹನೆಗಾಗಿ ಇಲ್ಲಿ ಕೊಡಲಾಗಿದೆ.

ಶ್ಲೋ ॥ ಕೃತಮಪಕೃತಮಾರ್ಯೈಃ ಕ್ಷಮ್ಯತಾಂ ಕ್ಷಾಂತಿಭೂಷೈ
ರಿತಿ ಮೃದುವದತಾಂ ಸಂಪ್ರಾರ್ಥನಾಭಿಪ್ರಭೂಣಾಮ್ ।
ಅಪಹೃತಮಪರೇಷಾಂ ಮಂತ್ರತೋ ಗ್ರಂಥಜಾತಂ
ದಶಹೃದನಿಯೋಗಾದಗ್ರಹೀಚ್ಛಂಕರಾರ್ಯಃ ॥

ಷಾಷ್ಟಿಕರಲ್ಲಿ ಆರಾಧ್ಯಮನೆತನವು ಬಹಳ ಪ್ರಖ್ಯಾತವಾದುದು. ಈ ಮನೆತನಕ್ಕೆ ಸೇರಿದ ಗಂಗಾಧರಭಟ್ಟನು ಶ್ರೀಅಕ್ಷೋಭ್ಯತೀರ್ಥರ ಪ್ರೀತಿಪಾತ್ರನಾದ ಶಿಷ್ಯ. ಇವನು ಬಹಮನಿರಾಜ್ಯವನ್ನು ಸ್ಥಾಪಿಸಿದ ರಾಜಕಾರಣಪಟು ; ಇವನು ಭರತಖಂಡದ ಇತಿಹಾಸದಲ್ಲಿ ಪ್ರಮುಖಸ್ಥಾನವನ್ನು ಪಡೆದಿರುವನು. ವಿಜಯನಗರಸಾಮ್ರಾಜ್ಯಸ್ಥಾಪಿಸಿದ ಹೆಸರಾಂತ ವಿದ್ಯಾರಣ್ಯರೂ–ಗಂಗಾಧರನೂ ಸಹಾಧ್ಯಾಯಿಗಳೂ ಆಪ್ತಮಿತ್ರರೂ ಆಗಿದ್ದರು. ಇವನ ಅಳ್ವಿಕೆಯಲ್ಲಿ ಶ್ರೀಅಕ್ಷೋಭ್ಯತೀರ್ಥರು ವಿಜಯನಗರದಿಂದ ಬಹಮನೀರಾಜ್ಯಕ್ಕೆ ಸೇರಿದ ಮಾನ್ಯಖೇಟಪುರಕ್ಕೆ ಹೋಗಿ ಆಶ್ರಮವನ್ನು ರಚಿಸಿಕೊಂಡು ಅಲ್ಲಿ ತಮ್ಮ ಉಳಿದ ಕಾಲವನ್ನು ಕಳೆದರು.

ತ್ರಿಕೋನಮಿತಿ (Trignometry) ಬೀಜಗಣಿತ, ಲೀಲಾವತಿ, ಸಿದ್ಧಾಂತ ಶಿರೋಮಣಿ ಮುಂತಾದ ಗ್ರಂಥಗಳನ್ನು ರಚಿಸಿ ವಿಶ್ವವಿಖ್ಯಾತನಾದ ಭಾಸ್ಕರಾಚಾರ್ಯನು ಗಂಗಾಧರಭಟ್ಟನ ಸಹೋದರರಲ್ಲೊಬ್ಬನು

ಈ ರೀತಿ ಷಾಷ್ಟಿಕಮಹಾಪುರುಷರ ಜೀವನಚರಿತ್ರೆಯನ್ನು ಇಲ್ಲಿ ವಿಸ್ತರಿಸುತ್ತ ಹೋದರೆ ಇದು ಒಂದು ದೊಡ್ಡ ಗ್ರಂಥದ ಆಕಾರವನ್ನು ತಾಳಬಹುದಾದುದರಿಂದ ಇದನ್ನು ಹೆಚ್ಚು ಬೆಳೆಸಲು ಬಯಸುವುದಿಲ್ಲ. ಚಿತ್ತಪಾವನ ಷಾಷ್ಟಿಕಬ್ರಾಹ್ಮಣರಿಗೂ ಕರ್ಣಾಟಕದ ಷಾಷ್ಟಿಕಬ್ರಾಹ್ಮಣರಿಗೂ ಇರತಕ್ಕ ನಿಕಟ ಸಂಬಂಧವು ಸೂಕ್ಷ್ಮವಾಗಿ ವಿವೃತವಾಗಿದೆ.

## ರತ್ನಗಿರಿಪ್ರಾಂತ್ಯ ಮತ್ತು ಷಾಷ್ಟಿಕರು

ಷಾಷ್ಟಿಕರಲ್ಲಿ ಕೆಲವರು ತಾಳಗುಂದದಿಂದ ಉತ್ತರ ಕರ್ನಾಟಕಕ್ಕೆ ಸೇರಿದ್ದ ರತ್ನಗಿರಿಪ್ರಾಂತ್ಯಕ್ಕೆ ಹೋಗಿ ನೆಲೆಸಿದರು. ಕಾಲಕ್ರಮದಲ್ಲಿ ಆ ಪ್ರಾಂತ್ಯವು ಮಹಾರಾಷ್ಟ್ರವೀರರ ವಶವಾಯಿತು. ಅಲ್ಲಿಯ ಜನರು ಇವರನ್ನು ಆರಂಭದಲ್ಲಿ ಅಗ್ನಿಹೋತ್ರಪಾವನರೆಂದು ಸಂಬೋಧಿಸಲಾರಂಭಿಸಿದರು. ಕೆಲ ಕಾಲಾನಂತರ ಪೂರ್ವ ಪದವನ್ನು ಲೋಪ ಮಾಡಿ ಪಾವನಬ್ರಾಹ್ಮಣರೆಂದು ಕರೆದರು. ಇವರು ಸ್ಮಾರ್ತಾಚಾರನಿಷ್ಠರೂ ಭಾಗವತಸಂಪ್ರದಾಯಪ್ರವರ್ತಕರೂ ಆಗಿದ್ದರು. ಇವರಿಗೆ ಚಿತ್ತಪಾವನಬ್ರಾಹ್ಮಣರೆಂಬ ಹೆಸರು ಬರಲು ಇದೊಂದು ಕಾರಣ ವಿರಬೇಕು.

ಆದರೆ ಆ ಪದವು ಬರುಬರುತ್ತಾ ಅಪಭ್ರಂಶವಾಗಿ ಚಿತ್ಪಾವನವೆಂದಾಯಿತು. ಪರಶುರಾಮನಿಗೆ ಪಿತೃಶ್ರಾದ್ಧ ಮಾಡಲು ಬ್ರಾಹ್ಮಣರು ದೊರೆಯದೆ ಹೋದುದರಿಂದ ಅವನು ಚಿತೆಯ ಮೇಲಿದ್ದ ಶವಗಳಿಗೆ ಜೀವದಾನ ಮಾಡಿ ಪಿತೃಶ್ರಾದ್ಧವನ್ನು ಪೂರೈಸಿದನೆಂದೂ ಅದು ಮೊದಲು ಇವರಿಗೆ ಚಿತ್ಪಾವನ ಬ್ರಾಹ್ಮಣರೆಂಬ ಹೆಸರು ಬಂದಿತೆಂದೂ ಒಂದು ದಂತಕಥೆಯನ್ನು ಕಲ್ಪಿಸಿದ್ದಾರೆ. ಸೃಷ್ಟಿಕರ್ತನಾದ ಭಗವಂತನು ಹೆಣಕ್ಕೆ ಜೀವವನ್ನೀಯಬೇಕಾಗಿದ್ದ ಅವಶ್ಯಕತೆ ಏನಿತ್ತೆಂಬುದಕ್ಕೆ ಸಮಂಜಸವಾದ ಸಮಾಧಾನವಿಲ್ಲದಿರುವುದರಿಂದ ಈ ಕಲ್ಪನಾ ಕಥೆಯು ನಂಬಲರ್ಹವಾಗಿಲ್ಲ. ದೇಶಭೇದ, ಕಾಲಭೇಧ, ಭಾಷಾಭೇಧ, ಪರ ರಾಜರುಗಳು ಆಳಿದ ಭೇಧ ಇವುಗಳಿಂದ ಈ ಉಭಯ ಷಾಷ್ಟಿಕಸಹೋದರರಿಗೂ ಇದ್ದ ಆತ್ಮೀಯತೆಯು ದೂರವಾಗಲು ಕಾರಣವಾಯಿತು.

ಧಾರವಾಡದ ಶ್ರೀನಾರಾಯಣಾಚಾರ್ಯ ಶ್ರೀನಿವಾಸಾಚಾರ್ಯ ರಾಜ ಪುರೋಹಿತರು ಪ್ರಬುದ್ಧಕರ್ಣಾಟಕದ ಪಾರ್ಥಿವ ಸಂ। ಕಾಮನ ಸಂಚಿಕೆಯಲ್ಲಿ "ತಾಳಗುಂದ ಮತ್ತು ಚಿಪಳೂಣ ಅಗ್ರಹಾರಗಳು" ಎಂಬ ಶಿರೋನಾಮೆಯಲ್ಲಿ ಸಂಶೋಧನಾತ್ಮಕವಾದ ಒಂದು ದೀರ್ಘ ಲೇಖನವನ್ನು ಪ್ರಕಟಿಸಿರುತ್ತಾರೆ. ಇದನ್ನು ಪ್ರತಿಯೊಬ್ಬ ಷಾಷ್ಟಿಕನೂ ಅಧ್ಯಯನ ಮಾಡಿ ತನ್ನ ಹಿರಿಯರ ಹಿರಿಮೆಯನ್ನು ತಿಳಿಯತಕ್ಕದ್ದಿದೆ.

ಈ ಉಭಯ ಷಾಷ್ಟಿಕಮನೆತನಗಳ ೧೪ ಗೋತ್ರಗಳಲ್ಲಿ ಈ ಕೆಳಗೆ ಕಾಣಿಸಿರುವ ೯ ಗೋತ್ರಗಳು ಒಂದೇ ಆಗಿರುತ್ತವೆ.

| | | | |
|---|---|---|---|
| ೧. | ಕಾಶ್ಯಪಗೋತ್ರ | ೫. | ವಸಿಷ್ಠಗೋತ್ರ |
| ೨. | ಅತ್ರಿಗೋತ್ರ | ೬. | ಕೌಂಡಿಣ್ಯಗೋತ್ರ |
| ೩. | ಭಾರಧ್ವಾಜಗೋತ್ರ | ೭. | ಶಾಂಡಿಲ್ಯಗೋತ್ರ |
| ೪. | ಜಾಮದಗ್ನಿಗೋತ್ರ | ೮. | ಕೌಶಿಕಗೋತ್ರ |

ಉಳಿದ ಗೋತ್ರಗಳು ಬೇರೆಯಾಗಿವೆ. ಅವುಗಳ ನಿರೂಪಣೆಯು ಇಲ್ಲಿ ಅನವಶ್ಯಕವಾಗಿ ಕಂಡುಬಂದುದರಿಂದ ಉಲ್ಲೇಖಿಸಿಲ್ಲ.

## ಈ ಮನೆತನಗಳ ಉಪನಾಮಗಳ ನಿತಾಂತಸಾಮ್ಯವು ಈ ರೀತಿ ಇದೆ

| ಕರ್ನಾಟಕದ ಷಾಷ್ಟಿಕ-ಬ್ರಾಹ್ಮಣರು | ಚಿತ್ತಪಾವನ ಷಾಷ್ಟಿಕ-ಬ್ರಾಹ್ಮಣರು |
|---|---|
| ೧ ಬೆಟ್ಟದವರು | ೧ ಡೋಂಗರೆ |
| ೨ ಮೈದೇವ | ೨ ಮಾಯಿದೇವ |
| ೩ ವಾರಣಾಶೀ | ೩ ಕಾಶೀಕರ |
| ೪ ದೀಪದವರು | ೪ ದಿವೇಕರ |
| ೫ ಸವಿನುಡಿಯುವರು | ೫ ಗೋಡಬೋಲೆ |
| ೬ ಚಕ್ರದವರು | ೬ ಚಕ್ರದೇವ |
| ೭ ಬಲದೇವ | ೭ ಮಹಾಬಳ |
| ೮ ವೇದಾಂತಿಯುವರು ... | ೮ ದೇವಧರ |
| ೯ ಬೀಗಮುದ್ರೆಯುವರು | ೯ ಕಿಲ್ಲೇದಾರ |
| ೧೦ ನಯುನಾರಿ | ೧೦ ಕಾಣೆ |
| ೧೧ ಆರಾಧ್ಯರು | ೧೧ ಪರಾಂಜಪೆ |
| ೧೨ ಮದ್ದಿನವರು | ೧೨ ಆಗಲಾವೆ |

೧೩ ಹರಿಬಂಟನವರು — ೧೩ ಭಾಗವತ
೧೪ ದವಸದವರು — ೧೪ ಕಾಣ್ಯಾಚೀ
೧೫ ಧಣಾಯಕರು — ೧೫ ದೇಶಮುಖ
೧೬ ಖಂಡೇಕಾರ — ೧೬ ಭಾತಖಂಡೆ
೧೭ ಜ್ವಾಲಸಾಗರ — ೧೭ ಭಾನು

ಮರಾರಾಚಕ್ರಾಧೀಶರಾಗಿದ್ದ ಪೇಷ್ವೆಗಳು. ಈ ಚಿತ್ತಪಾವನ ಪಾಷ್ಟಿಕ ಮನೆತನಕ್ಕೆ ಸೇರಿದವರು. ಒಂದನೆಯ ಬಾಜೀರಾಯನು ಕ್ರಿ. ಶ. ೧೭೩೨ ನೆಯ ಪರಿಧಾವಿ ಸಂವತ್ಸರದಲ್ಲಿ ಸಾತಾರೆಯಲ್ಲಿ ಭಾರತ ಪರಿಷನ್ಮಂಡಲಿಯನ್ನು ಸೇರಿಸಿ ಬ್ರಾಹ್ಮಣರ ಸಭೆಯೊಳಗೆ ತನ್ನ ವಂಶವನ್ನು ವಿಸ್ತರಿಸಿ ತಾನು ಪಾಷ್ಟಿಕ ನೆಂದು ಪ್ರವರೋಚ್ಚಾರಣೆಯನ್ನು ಮಾಡಿ ತುಲಾಭಾರವನ್ನು ತೂಗಿಸಿಕೊಂಡು ಬ್ರಾಹ್ಮಣರ ಪಾದ ಪೂಜೆಯನ್ನು ಮಾಡಿದನು. ಈ ಬಗ್ಗೆ ಪೇಷ್ವೆ ಬಾಜೀ ರಾಯನು ರಾಜ ಶಾಸನವನ್ನು ಹೊರಡಿಸಿ ಪ್ರಸಿದ್ಧ ಪಡಿಸಿರುವನೆಂದು ಒಂದು ಪ್ರಾಚೀನ ಗ್ರಂಥದಲ್ಲಿ ಉಲ್ಲೇಖವಿದೆ.

ಪಾಷ್ಟಿಕರ ಇತಿಹಾಸದಲ್ಲಿ ಭರತಖಂಡದ ಚರಿತ್ರೆಗೆ ಸಂಬಂಧಪಟ್ಟ ಅನೇಕ ಮಹತ್ವದ ಅಂಶಗಳಿವೆ. ಅವುಗಳೆಲ್ಲವನ್ನು ಇಲ್ಲಿ ಸಂಗ್ರಹಿಸಿ ಬರೆಯಲು ಗ್ರಂಥ ವಿಸ್ತಾರ ಭಯದಿಂದ ಸಾಧ್ಯವಾಗಿಲ್ಲ.

— —

|| ಶ್ರೀ ||

# ಷಾಷ್ಟಿಕರ ಮನೆತನಗಳು ಮತ್ತು ಗೋತ್ರಗಳು

## ೧) ಕಾಶ್ಯಪಗೋತ್ರಕ್ಕೆ ೪ ಮನೆತನಗಳು

೧ ನಂಜೆಯುವರು ೨ ಭಾರತದವರು
೩ ಸವಿನುಡಿಯುವರು ೪ ಬಲ್ಲರಸರು

## ೨) ಆತ್ರೇಯಸಗೋತ್ರಕ್ಕೆ ೫ ಮನೆತನಗಳು

೫ ಹೊನ್ನರಸರು ೬ ಬಂದರಸರು
೭ ಬುರುಡ್ಡಿಯುವರು ೮ ಹರಿಬಂಟನವರು
೯ ಈಚಲೂರಿನವರು (ಈಸೂರಿನವರು)

## ೩) ಭಾರದ್ವಾಜಗೋತ್ರಕ್ಕೆ ೮ ಮನೆತನಗಳು

೧೦ ಕೂಚರಸರು ೧೧ ವಿಶ್ವರೂಪದವರು
೧೨ ಮಣಿಮಾಲದವರು ೧೩ ಹೋತ್ನೂರವರು
೧೪ ಚಿನ್ನಭಂಡಾರದವರು ೧೫ ಜಂಬುಖಂಡಿಯುವರು
೧೬ ನೋತೂರವರು ೧೭ ವಾರಣದವರು

## ೪) ವಿಶ್ವಾಮಿತ್ರಗೋತ್ರಕ್ಕೆ ೭ ಮನೆತನಗಳು

೧೮ ಮಿಂಚಿನವರು ೧೯ ಬೆಟ್ಟದವರು
೨೦ ವನಂಖಣೆಯುವರು ೨೧ ಮಾಲ್ಯವಂತರು
೨೨ ಶಿವಪುರದವರು ೨೩ ಧಣಾಯಕರು
೨೪ ಚಕ್ರದವರು

## ೫) ಗೌತಮಗೋತ್ರಕ್ಕೆ ೪ ಮನೆತನಗಳು

೨೫ ವೇದಾಂತಿಯುವರು ೨೬ ಪರಿಗಿಯುವರು
೨೭ ಪನಗಲ(ಪೆನುಗೊಂಡೆ)ಯುವರು ೨೮ ಬೀಗಮುದ್ರೆಯುವರು

### ೬) ಜಾಮದಗ್ನಿಗೋತ್ರಕ್ಕೆ ೬ ಮನೆತನಗಳು

೨೯ ಉದ್ದಿಯವರು ೩೦ ಬೊಕ್ಕಸದವರು
೩೧ ಜಾನಸಾಲೆಯವರು ೩೨ ಸಾಧುಗಳು
೩೩ ತಿರದಂಡಿಯವರು ೩೪ ಕುಂತೂರವರು

### ೭) ವಸಿಷ್ಠಗೋತ್ರಕ್ಕೆ ೮ ಮನೆತನಗಳು

೩೫ ವೈದೇವರು ೩೬ ಬಲದೇವರು
೩೭ ಚೀಟಿಯವರು ೩೮ ತೆರಟಿಯವರು
೩೯ ಹುಲ್ಲುಬಂಡಿಯವರು ೪೦ ಖಂಡೇಕಾರರು
೪೧ ಮದ್ದಿನವರು ೪೨ ಯರವಿನಕಲೆಯವರು

### ೮) ಶಾಂಡಿಲ್ಯಗೋತ್ರಕ್ಕೆ ೨ ಮನೆತನಗಳು

೪೩ ನಯನಾರಿಯವರು ೪೪ ಮರಸಲುಯವರು

### ೯) ಅಗಸ್ತ್ಯಗೋತ್ರಕ್ಕೆ ೨ ಮನೆತನಗಳು

೪೫ ಗುತ್ತಿಯವರು ೪೬ ಬುಡೇಕಣದವರು

### ೧೦) ಹರಿತಸಗೋತ್ರಕ್ಕೆ ೩ ಮನೆತನಗಳು

೪೭ ಆರಾಧ್ಯರು ೪೮ ಗಂಗರಸರು
೪೯ ಚಂಡೂರಿನವರು

### ೧೧) ಬಾದರಾಯಣಗೋತ್ರಕ್ಕೆ ೨ ಮನೆತನಗಳು

೫೦ ಬುಕ್ಕರಾಯ ಸಮುದ್ರದವರು ೫೧ ಜ್ವಾಲಸಾಗರದವರು

### ೧೨) ಕೌಂಡಿಣ್ಯಸಗೋತ್ರಕ್ಕೆ ೫ ಮನೆತನಗಳು

೫೨ ಕುಂತಲೂರ(ಕೂಡಲೂರ)ರವರು ೫೩ ಬೆನಕನ ಕಾಲುವೆಯವರು
೫೪ ಬೊಮ್ಮಿನವರು ೫೫ ತಂಗಿಹಳ್ಳಿಯವರು
೫೬ ವಡ್ಡಧಾಳಿಯವರು

### ೧೩) ಕೌಶಿಕಗೋತ್ರಕ್ಕೆ ೩ ಮನೆತನಗಳು

೫೭ ಆಂಕರಸರು  ೫೮ ಮಾಕರಸರು

೫೯ ಬೊಮ್ಮರಸರು

### ೧೪) ಶ್ರೀವತ್ಸಗೋತ್ರಕ್ಕೆ ೫ ಮನೆತನಗಳು

೬೦ ಮಾಳಖೇಡದವರು  ೬೧ ದೀಪದವರು

೬೨ ದವಸದವರು  ೬೩ ವಾರಣಾಸಿಯವರು

೬೪ ಮುತ್ತಿನಸತ್ತಿಗೆಯವರು



# ಪ ರಿ ಶಿ ಷ್ಟ

## ಅಣ್ಣಾಜಿನಾಯಕರಿಗೂ ಅಕ್ಬರ್ ಚಕ್ರವರ್ತಿಗಳಿಗೂ ನಡೆದ ಸಂವಾದ

(ಸಾರಸ್ವತಪರಿಣಯದಿಂದ ಉದ್ಧೃತವಾದುದು)

ಆ ಮಹಾ ಅಕ್ಬರರ ರಾಜಾಸ್ಥಾನವದು ಪಾಂಡುವರಪಟ್ಟಣ ಹಿಂದೆ ಕೃಷ್ಣನು ಹಲವು ಕಾಲದೊಳು । ಲೀಲೆಯೊಳು ನರನಂತೆ ನಟಿಸುತ ಕೃತಾಂತನ ಭಗಿನಿಯಹ ಯಮುನೆಯ ಮೇಳದಲಿ ಖೇಲನದೊಳಿರ್ದನು ಪಾಂಡುಸುತ ರೊಡನೆ ॥

ಅದನರಿವುತಕ್ಬರನು ಹರಿಯೊಳು ಘನತರದ ಸದ್ಭಕ್ತಿಭಾವದಿ ವಿಪ್ರರೊಳು ಮಿತ್ರತ್ವವನು ಮಾಡಿ । ಆದರಿಸಿ ಸಲಹುತ್ತ ಮುಸಲರ ಹೈಂದವರೊಳಡಗೂಡಿ ಮೈತ್ರಿಯ ಗಳಿಸುವಂದವಮಾಳ್ಪ ಪ್ರತಿದಿನದಿ ॥

ಆದರಿನಿಂದೀಬಂದ ಬ್ರಾಹ್ಮಣಸೋದರರ ತಾನಾದರಿಸಿ ನೀವಾರು ಎಲ್ಲಿಂದ ಬಂದಿರಿಲ್ಲಿಗೆ ಕಾರ್ಯವೇನುಂಟು । ಮುಂದೆಮಾಡುವಿರೇನನೆನ್ನಲು ಮಂದ ಭಾಗ್ಯರದಾಗಿ ಬಂದೆವು ಸಂಧ್ಯವಿದ್ಯದೊಳಾವು ಶ್ರಮವನು ನೀಗಿಹೆವೆಂದು ಪೇಳ್ದರು ಸೋದರೋತ್ತಮರು ॥

ಇಲ್ಲಿ ನಮ್ಮಯ ಬಂಧು ನಿಮ್ಮಯ ರಾಯಭಾರಿಯು ಇವರಪಿತ ವೆಂಕಣ್ಣ ನೆಂಬುವ ವೀರಗುಣಯುತರು। ನಿಮ್ಮ ಸಖಿರಹಷಾಹಿಸುಲ್ತಾನರಿಗೆ ಈಗ ಮಹಾ ಪ್ರಧಾನರು ಕನ್ನಡನಾಡು ನಮ್ಮದು ನಮ್ಮವರು ನೆಲಸಿಹರಲ್ಲಿಬಾಂಧವವೃಂದ ಸಹಿತದಿ ಭಾಗ್ಯಯುತರಾಗಿ ॥

ಆದು ಬಿಜಾಪುರಕೀಗ ಸೇರಿದೆ ಹಿಂದೆ ಆದು ವಿಜಯನಗರದ ಸಾರ್ವಭೌಮ ರಿಗೆ ವಳಿತವಾಗುತಲಾಗ ಮೆರೆಯಿತು ಬಾಲತನ ನಿಮಗಿರ್ದಕಾಲದಲಿ । ಈಗ

ಲದು ಖಿಲವಾಗಿ ಲಯಕಾಲವ ಸಮೀಪಿಸಿ ಕಾಲದೇವತೆ ಮೃತ್ಯುರೂಪದಿ ಲೀಲೆ ಯಾಡಿದಳು ||

ಶಕಪುರುಷ ಪ್ರಖ್ಯಾತಶಾಲಿಯು ಸಾರ್ವಭೌಮನು ಮೊದಲು ಕನ್ನಡದೊಳಗೆ। ಸತ್ಯಾಶ್ರಯನು ಪುಲಿಕೇಶಿಗಳು ತರುವಾಯ । ಆ ತ್ರಿಣೇತ್ರಕದಂಬನಾತನ ತನಯ ಶೂರಮಯೂರರಾಳಿದ ನಾಡುಶಿರಿಗೆ ತೌರೂರಾದ ಕನ್ನಡವು ||

ಶರಧಿಯೊಳು ದ್ವಾರಕಿಯ ಮರೆಯಿಸಿ ತೆರಳಿದನು ವೈಕುಂಠಲೋಕಕೆ ಕೃಷ್ಣ । ನಾ ಪಾಂಡವ ತನಯರಾಗಲು ಸ್ವರ್ಗಮೊದಲಾಗಿರ್ಪ ತಂತಮ್ಮಯ ನಿವಾಸಗಳ ಕುರಿತು ತೆರಳಿದ ಬಳಿಕ ಯದುಕುಲರಾಜಪುತ್ರರು ರಾಜ್ಯಸಂಪಾದನೆಗೆ ನೆಲಮನೆಯಾವುದೆಂದರಸುತ್ತ ಸಿರಿಸಂಪದದ ಭೂಮಿಗಳ ||

ಕಂಡರಾಗಲು ಮುಂದೆ ಬಹುಸಂಪದದ ಮಲ್ಲಿಗೆ ಜಾಜಿ ಪಾದರಿ ಚಂಪಕಾವಳಿ ಕೇತಕೀಬನದ । ವರಕದಂಬಸಮೂಹದಿಂ ಮೆರೆವುತ್ತನದಿಪರಿಸರದ ಪುಣ್ಯಾಶ್ರಮದ ಬೀಡುಗಳಿಂದ ಕೂಡಿದ ಪೈಠಣ ಸ್ಥಳವ ||

ಇದುವೆ ಗೋದಾವರಿಯ ಮೂಲವು ರಾಮರಾಶ್ರಮಗೈದರಾವಿದು ರಾವಣನ ಸೋದರಿಯ ಮೂಗನು ಕೊಯ್ದು ಪಂಚವಟಿ । ಕನ್ನಡದ ಲಕ್ಷ್ಮೀ ನಿವಾಸಕೆ ಮೂಲವೆಂದೆನಿಸಿರ್ದ ರಾಮಕ್ಷೇತ್ರವಿದು ಋಷಿವರರು ದಂಡಕವನ ವಿದೆಂದೇ ಕರೆವುತಿರುತಿಹರು ||

ಇದರೊಳಗೆ ಯಾದವರು ನೆಲೆಮಾಡಿ ರಾಜ್ಯವ ಕಟ್ಟಿ ಪೈಠಣವೆಂಬ ಪೆಸರಿನ ರಾಜಧಾನಿಯಲಿ। ಆಳುತಿರ್ದರು ಹಲವು ಕಾಲವು ಕಳೆದ ತರುವಾಯ ದಲಿ ಶಾಲೀವಾಹನನು ಶಕಪುರುಷ ತಾನವತಾರ ಗೈದನು ಯದುವಂಶಾಬ್ಧಿ ಚಂದ್ರಮನು ||

ಇದು ಕದಂಬದಹೆಸರುಹೊಂದಿದ ರಾಜ್ಯವಾಯಿತು ಬಳಿಕಿನಲ್ಲಿ ತದ್ವಂಶ ಜರು ಪೈಠಣವನುಳಿದರು ವೈಜಯಂತೀಪಟ್ಟಣವ ನಿರ್ಮಿಸುತ ಗೈದರು ರಾಜಧಾನಿಯನು । ಬಳಿಕವರ ಕೋಶಾದಿಸಂಪದವೆಲ್ಲ ಮಿತ್ರರ ಸಹಿತ ಬಂದರು ವೈಜಯಂತೀ ಪಟ್ಟಣಕೆ ವೈಭವದ ಸೊಬಗಿನಲಿ ||

ಕೃಷ್ಣಭಕ್ತರು ಭಾಗವತಧರ್ಮಿಗಳು ಶೂರರು ವೇದವೇದಾಂಗದಲಿ ಪರಿಣತಪಂಡಿತೋತ್ತಮರು । ರಾಜರಿಗೆ ಸನ್ಮಿತ್ರರಾಗುತ ಹಿತವ ಬಯಸುವ ಕೋವಿದರು, ಮಂತ್ರಿ, ಚಮೂಪ, ಪದವೀಧರರು ಅರವತ್ನಾಲ್ಕು ಜನಗಳು ಬ್ರಾಹಣೋತ್ತಮರಿರ್ದರರಸನ ಬಳಿಯು ನೆಳಲಾಗಿ ॥

ವಿದ್ವಿಷರ ನಿಗ್ರಹಿಪ ಸಮರೋದ್ಯೋಗದಲಿ ಮೂವರು ಪರೇತನ ಪಟ್ಟಣಕೆ ಪಯಣವನು ಮಾಡಿದ ಬಳಿಕ ಅರವತ್ತೊಂದು ಮನೆತನದ ಬಾಂಧವರು ತಾವಿರುವ ಸಮಯಕೆ ರಾಜ್ಯದಲಿ ದೊರೆಯಳಿದ ನಾತನ ಪೆಸರು ತ್ರಿಣೇತ್ರನೆಂಬುದು ಶೂರನವ ಪಣೆಗಣ್ಣನಂದದಲಿ ॥

ನಂದನಿಗೆ ಪಟ್ಟಾಭಿಷೇಕವು ಸಂಭ್ರಮದಿ ತಾನಾಯ್ತು ನಾಮವವನಿಗೆ ಮಯೂರವರ್ಮಕದಂಬನೆಂಬುವುದು । ವಿದ್ವಿಷರ ತಾ ಗೆಲಿದು ಪಾದಾಕ್ರಾಂತ ರಾಗುತ ಮೈತ್ರಿ ವೆರಸಿರ್ಪಂತೆ ಪಶ್ಚಿಮಭಾಗದವನಿಯು ಭರತಖಂಡವನೆಲ್ಲ ತಾ ಗೆಲಿದ ॥

ಕೇರಳವು ಕೊಂಕಣವು ಹಿರಿಯರ ನಾಡು ಘೂರ್ಜರ ದ್ವಾರವತಿ ಸಹಿತಾಗಿ ಸಿಂಧೂನದಿಯು ಪರ್ಯಂತರದ ನಾಡುಗಳ । ತಾ ಗೆಲಿದು ಪೇರೆತ್ತೊಂಟೆಗಜ ಹಯಭಂಡಿಗಳ ಸಾಲಿನಲಿ ತಂದನು ತನ್ನ ಪಟ್ಟಣಕೆ ॥

ಬಂದು ಸಂಭ್ರಮದಿಂದ ನಿಜಪತ್ತನದಿ, ಮನದೊಳಗಂದು ತಾನಾಲೋಚನೆಯ ಮಾಡುವರೆ ಕರೆಸಿದ ನಿಜಾಪ್ತರ ಕುಲಕ್ರಮದಿಂದ ಬಂದವರ । ಮೂರುಳಿದ ಅರವತ್ತುನಾಲಕು ಬಾಂಧವರ ವಿಪ್ರನಿಕಾಯವೆಲ್ಲವ ಬರಿಸಿ ಸಭೆಯಲಿ ಸಾರ್ವಭೌಮನು ನಿಂದು ಕರಜೋಡಿಸುತ ವಿಜ್ಞಾಪಿಸಿದ ಸಭಿಕರಿಗೆ ॥

ಯಾದವರ ವಂಶದ ಮಹೋದಧಿಚಂದ್ರಮನು ಶ್ರೀಕೃಷ್ಣ, ಭರತಾನ್ವಯದ ಕುಲದೀಪಕ ಯುಧೀಷ್ಟರದೇವನೀರ್ವರ ಕುಲದಿ ಜನಿಸಿರುವ । ಈ ಕದಂಬರು ಅಶ್ವಮೇಧವ ಗೈವ ತೆರನನುಗ್ರಹಿಸಿ ಯಾಗವನಾಗಮಾಡಿಸಬೇಕು ನೀವೆಂದ ॥

ಎಲ್ಲರದಕೊಪ್ಪಿದರು ವಿಪ್ರರು ಸಲ್ಲಲಿತಕೋವಿದರು ಅರವತ್ತೊಂದು ಬಾಂಧವಭಾಗವತಧರ್ಮಿಗಳದಕೊಡಂಬಡದೆ । ಕಲಿಯುಗದಿ ಸಾಕ್ಷಾತ್ ಪಶು ಮಾ ರ ಣ ತಿರಸ್ಕೃತವದರಪರಿಯಿಂಪಿಷ್ಟಪಶುಯಜ್ಞಕ್ಕೊಡಂಬಡುತಿಹೆವು ನಾವೆಂದೆನುತ ಪೇಳಿದರು ॥

ಸರಿ ಇವರ ನುಡಿಯೆಂದು ಸರ್ವರು ಸಭೆಪುರಸ್ಕಾರವನು ಕೊಟ್ಟರು ರಾಜನಾ ಸಭೆಗೆಂದಯಾಗದ ಫಲವು ಲಭಿಪಂತೆ । ನೀವನುಗ್ರಹಿಸುವುದು ಪಿಷ್ಟ ಮೇಧವನಾರು ಹಿಂದಿನ ನೃಪರು ಗೈದರು ಕೇಳಿದರಿಯೆವು ಶಾಸ್ತ್ರಸಮ್ಮತ ವಿಲ್ಲದುದ ನಾ ಮಾಡೆನೆಂದನು ಮುಗಿದುಕರಯುಗವ ॥

ನಾಲ್ಕುಪಾಯಗಳಿಂದ ರಾಜನ ಇಷ್ಟಸಾಧನೆಯಾಗಲಿಲ್ಲವು ಏಕಷಾಷ್ಟಿಕ ವೃಂದಬಾಂಧವಜನರುಸಹಿತಾಗಿ । ದೇವಗಿರಿ ಎಂತೆಂಬ ನಗರದ ರಾಜರೆನಿಸಿದ ಘನತರದ ಚಾಲುಕ್ಯರಾಜರೊಳಾಶ್ರಯುವ ವೊಂದುತ್ತ ನಿಂದರು ಮೊದಲಿ ನಂದದಲಿ ॥

ಸಾರ್ವಭೌಮ ಮಯೂರವರ್ಮನು ಕರೆಸಿದನು ಬ್ರಾಹ್ಮಣರ ಗುಂಪನು ಉತ್ತರದ ಬ್ರಹ್ಮಾವರ್ತದೊಳಗಿನ ಸರಯೂತೀರವಾಸಿಗಳ । ಅವರು ಷಾಷ್ಟಿಕ ಗೃಹವ ನಿರ್ಮಿಸಿಕೊಂಡು ರಾಜಾಶ್ರಯದಿ ಯಾಗವ ಪೂರೈಸಲನುವಾಗುತ್ತ ಲಿರ್ದರು ವೈಜಯಂತಿಯಲಿ ॥

ಬಾರದವರಿಗೆ ಮಂತ್ರತಂತ್ರವು ಶಿಷ್ಟರಾಚಾರಗಳನರಿಯರು ದೂರದೇಶದ ಸಂಪ್ರದಾಯವು ಮನಕೊಡಂಬಡದೆ । ಯಾಗದೀಕ್ಷೆಯ ಪೊಂದದಿರುತಿಹ ಕಾರಣವ ತಾವರಿತು ಕರ್ಣಾಟಕದ ಕೊಂಕಣದಲ್ಲಿ ನಿಂದರು ವೈಶ್ಯವೃತ್ತಿಯ ಪಿಡಿದು ಗೌಡ ಷಾಷ್ಟಿಕನಾಮಧೇಯದಿ ಸಾರಸ್ವತರು ತಾವಾಗಿ ॥

ಮತ್ತೆ ಕರೆಸಿದನಾಗಲತ್ಯುತ್ತಮದ ವಿಪ್ರನಿಕಾಯವನು ವೃಜ್ಜಯಿನಿಪುರದಿಂದ ಶಿಷ್ಟಾಚಾರವಂತರನು । ಬಂದರಾಶ್ರೀಮಂತಬ್ರಾಹ್ಮಣವೃಂದಋಕ್‌ಶಾಖಿಗಳು ಯಜುರ್ವೇದದಲಿ ಪೇಳ್ದಿಹ ಅಶ್ವಮೇಧದಮಂತ್ರತಂತ್ರಾಧ್ಯಯನ ಪರಿಚರ್ಯ ವಿಲ್ಲವೆಂದರು ಭೀತಿಯನುತೊರೆದು ॥

ಮೆಚ್ಚಿದನು ಮನದೊಳಗೆ ನಿಶ್ಚಯನುಡಿಗೆ ತಲೆದೂಗಿದನು ನೀವೆಮ್ಮ ರಾಜ್ಯವನುಳಿದು ಸ್ವೇಚ್ಛೆಯಲಿ ಪೋಗದೀನಾಡೊಳಗೆ ನೆಲೆಸಿಹುದೆಂದು ನೇಮಿಸುತ ತುಳುವನಾಡಿನ ಬೆಳ್ಳಿಬೆಟ್ಟದಪುರವ ಸ್ವಾಸ್ಥ್ಯವಗೈದುಕೊಟ್ಟನು ಕೋಟಕಂದಾವರವು ಕುಂಭಕಕಾಶಿ ನಾಲ್ಕೂರುಗಳು ಅವರ ಜಹಗೀರು ॥

ತುಳುವವೆಂದರೆ ರೇವುಪಟ್ಟಣ ಹಡಗು ವ್ಯಾಪಾರಗಳ ನಿಲ್ದಾಣ ಸಂಸ್ಕೃತ ದೊಳೀಪೆಸರು ನಮ್ಮಯ ಆರ್ಯರಿತ್ತಿಹರು । ತುಳುವನಾಡಿನ ಬೆಳ್ಳಿಬಂಗಾರಗಳ ವ್ಯಾಪಾರದಲಿ ದ್ವೀಪಾಂತರದ ವರ್ತಕತನವ ಗೈವ ಶಿವಳ್ಳಿ ಎಂಬುವನಾಮ ಧರಿಸಿಹ ವೈದಿಕೋತ್ತಮರಿರ್ದರಾಪುರದಿ ॥

ಧನದ ಸಂಪದದಲ್ಲಿ ದಿಃಕಾರವನು ಗೈವರು ಐಲಬಿಲನಿಗೆ ರೂಪದಲಿ ಮನುಮಥನ ಪಡಿಯಾಳಹರು ಬಲದಲಿ ಭೀಮಸೇನಕಣಾ । ವಿದ್ಯೆಯಲಿ ಬುದ್ಧಿಯಲಿ ಸರ್ವಜ್ಞರಿಗೆ ಪ್ರಪಿತಾಮಹರು ನಾಮವ ಧರಿಸಿ ಮೆರೆವರು ವಿಷ್ಣು ಭಟ್ಟರದೆಂಬ ಕೋವಿದರು ॥

ವಾಸುದೇವರ ನಾಮಧರಿಸಿದ ತನಯ ಮೃತಿಪೊಂದಿದನು ಇಪ್ಪತ್ತಾರು ವರುಷಕೆ ಸುತನಿರುತಿರ್ದ ಹರಿಭಟ್ಟಾಂಕಿತನು ಮಗುವಾಗಿ ಮಂದಿರದಿ । ಪುತ್ರ ಶೋಕವ ತಾಳಲಾರದೆ ವೃದ್ಧರಾಗ್ರಾಮವನು ತ್ಯಜಿಸುತ ಭಾರ್ಯೆಯಳ ಸಹಿತಾಗಿ ಬಂದರು ಮಲ್ಪಿಪಟ್ಟಣಕೆ ॥

ಆದರ ಶಾಖಾನಗರವೇ ಉಡುಪಿಯು ಮಹಾಕ್ಷೇತ್ರ ರೌಪ್ಯಪೀಠಘನಾಲ ಯವು ಆದರೊಳಗವರನಂತೇಶ್ವರನ ದೇವಾಲಯವ ನಿರ್ಮಿಸುತ । ಅನವರತ ತಾವಲ್ಲಿ ಭಾರತ ಭಾಗವತಶಾಸ್ತ್ರಗಳ ಪಾರಾಯಣವ ಗೈವರು ದೇವಮಂದಿರ ಮಧ್ಯದಲಿ ಅಧ್ಯಯನಕ್ಕೆ ಮನೆಮಾಡಿ ॥

ಪೌತ್ರ ಹರಿಭಟ್ಟರಗೆ ಮೌಂಜೀಧಾರಣಾದಿಗಳಾಯ್ತು ವರುಷ ಹದಿನಾರಾ ಗಲಿವರಿಗೆ ಮದುವೆಗೈವುತ ಮುದದೊಳಿರುತಿರಲು । ವಿಷ್ಣುನಾಮದ ವೃದ್ಧ ಭಟ್ಟರು ಸ್ಮರಸ್ಮರಸುತಸಖಿತನವ ಬಯಸುತ ಪೋದರಾಗಲು ದಕ್ಷಿಣಾಪಥಕೆ ॥

ಮಧ್ಯಗೇಹದಭಟ್ಟರುದರದಿ ಶ್ರೇಷ್ಠನಾಗಿಹ ವಾಯುದೇವರು ವಾಸುದೇವಾಖ್ಯದಲಿ ಸುತಜನಿಸಿ । ಶೂರ ಸುಗ್ರೀವನಿಗೆ ಸೋದರನಾಗಿ ಜನಿಸುವುದೆಂದು ನೇಮಿಸಿ ವಿಷ್ಣುತೀರ್ಥರ ನಾಮವಿಟ್ಟರು ಯತ್ಯಾಶ್ರಮವನುಗೊಳಿಸಿ ||

ಮೂರು ಲೋಕಕೆ ಪ್ರಾಣದಾತರು ಸಕಲ ಸುರರೊಳು ಶ್ರೇಷ್ಠದಾತರು ಮೂರು ಲೋಕದ ಗುರುವು ಮಧ್ವಾಚಾರ್ಯಗುರುವರ್ಯ । ಪೂರ್ಣಪ್ರಜ್ಞರು ನಿತ್ಯ ಆನಂದಾಖ್ಯನಾಮರು ಈಗ ಬದರಿಯೊಳಿರುತಿಹರು ಬಾದರಾಯಣರಲ್ಲಿ ವೇದಾರ್ಥಗಳನೋದುತಲಿ ||

ಹನುಮಭೀಮಾನಂದನಾಮರು ನಾಲ್ಮೊಗನ ಪದಧರರು ಶ್ರೀಹರಿಗಾವಗವು ಮಂತ್ರೀಶ್ವರರು ಪ್ರೇಮದಸುತರು ಭಾಗವತಧರ್ಮಪ್ರಚಾರಕರು । ಸಕಲಲೋಕದ ವೈದಿಕೋತ್ತಮ ರಾಜಸೂಯದಿ ಕೃಷ್ಣದೇವನಿಗಗ್ರಪೂಜೆಯ ಮಾಡಿ ರಾಕ್ಷಸಕುಲವ ಸವರಿದ ಭೀಮಸೇನರ ನಾಮಧಾರಕರು ||

ಮಧ್ವಮತವುದ್ಧರಿಸಿ ತಮ್ಮೈಶ್ವರ್ಯವೆಲ್ಲವ ತೃಣಕೆ ಕಡೆಮಾಡುತ್ತ ಕೃಷ್ಣನ ಪಾದ ಸನ್ನಿಧಿಯ ಸೇವೆಯನು ಮಾಡುತ್ತ ದೇವಾಲಯವ ನಿರ್ಮಿಸಿ ಕೊಟ್ಟು ಬದರಿಯ ಮೂರು ಬಾರಿ ಪ್ರದಕ್ಷಿಣೆಯ ಮಾಡಿದರು ಭಾಷ್ಯಾದಿಗಳ ನಿರ್ಮಿಸುತ ||

ವರವಸಿಷ್ಠರ ಗೋತ್ರದಲಿ ಸಂಜನಿಋಕ್‌ಶಾಖೆಯಲಿ ಆಶ್ವಲಾಯನ ಸೂತ್ರಮಾರ್ಗದಲಿ ಸಕಲ ಕರ್ಮವ ಮಾಡಿ ಮಾಡಿಸಿ ಸಕಲ ವೇದಾರ್ಥಗಳ ಸರ್ವಜ್ಞತ್ವ ಪೊಂದುತ ಪೂರ್ಣಪ್ರಜ್ಞರದೆಂಬ ನಾಮವ ಧರಿಸಿ ಮೆರದರು ಶಿವಬೆಳ್ಳಿಸಂಜಾತರಾಗುತಲಿ ||

ಸಾರ್ವಭೌಮ ಮಯೂರವರ್ಮನು ಯಜ್ಞಕಾರ್ಯಕೆ ವಿಘ್ನ ಬರುತಿರೆ ಉತ್ತರದ ಪಾಂಚಾಲದಹಿಚ್ಛತ್ರದಿಂ ಬ್ರಾಹ್ಮಣರ ತಾ ಕರಿಸಿ । ವೀತಿಮೇಧಾಧ್ವರವ ಪೂರೈಸಿದನು ಋತ್ವಿಕ್ಕರಿಗೆ ಹವ್ಯಕನಾಮ ಬಂದುದು ಪ್ರಾಣಿವಧಗವನೊಂದು ತರುವಾಯದಲಿ ಜಿನಧರ್ಮವನು ಕೈಗೊಂಡ ||

ಬಳಿಕಲಾ ಮಯೂರವರ್ಮನು ಸಕಲಬಾಂಧವಜನಸಹಿತ ಯಾದವಕುಲ ಕ್ರಮಾಗತರಾಗಿ ಮಿತ್ರತ್ವದಿಂದ ಹಿತಕೋರುವವರು ತಾವಾಗಿ । ಭಾಗವತ ಷಾಷ್ಟಿಕರು ಇರುತಿರ್ದೀಗ ನಮ್ಮನು ಬಿಟ್ಟುಪೋದರು ಮರಳಿ ಬರುವಂತವರ ಪ್ರಾರ್ಥಿಸಿ ಪತ್ರ ಬರೆಸಿದನು ॥

ಆದೊಡೆಯು ತಾ ಬಂದ ಷಾಷ್ಟಿಕವ್ಯಂದ ಸಂತೋಷದಲಿ ತಮ್ಮಯ ನಿಜನಿವಾಸಗಳಲ್ಲಿ ನೆಲಸಿಹೆವಾವು ನಿಮಗೊಳ್ಳಿತನು ಕೋರುವೆ । ನೀವು ಸುಖದಲಿ ರಾಜ್ಯವಾಳುವದೆಂದು ಹರಸುತ ಮರಳಿ ಪ್ರತ್ಯುತ್ತರವ ಬರೆದರು ಬಿನ್ನಪತ್ತಲೆಯ ॥

ಇಂತು ಪ್ರಖ್ಯಾತಿಯನು ಪೊಂದಿದ ಸಾರ್ವಭೌಮಮಯೂರವರ್ಮನ ತುರುಗಮೇಧಾಧ್ವರದ ಕಥನವನೆಲ್ಲ ವಿಸ್ತರಿಸಿ । ಕವಿವರೋತ್ತಮ ಕರ್ಣ ಪಾರ್ಯನು ಬರದಿಹನು ಕೃತಿಯೊಳಗೆ ಷೋಡಶದಆಶ್ವಾಸಚಂಪೂಕನ್ನಡವು ಕದಂಬರಾಜವಿಜಯವದೆಂದು ಪೆಸರದಕೆ ॥

ಭಾಗವತಧರ್ಮದಲಿ ಪ್ರಾಚೀನತೆಯ ಪೊಂದುತ ಭಗವತ್ಪಾದಗುರುಗಳ ಶಿಷ್ಯವರ್ಗದಿ ಮೊದಲು ತಾವಾಗಿ । ಸಕಲಲೌಕಿಕವೈದಿಕೋತ್ತಮವಿದ್ಯೆಕೋವಿ ದರಾಗಿ ಸಾಮ್ರಾಜ್ಯಗಳ ಕಟ್ಟಿದ ದೊರೆಗಳಿಗೆ ನೆರವಾಗಿ ಬಾಳಿದ ನಮ್ಮ ರವತ್ತೊಕ್ಕಲೆಂಬುವ ಬ್ರಾಹ್ಮಣೋತ್ತಮಗುರುವರೇಣ್ಯರ ಪೊಗಳದರಾರು ಜಗದೊಳಗೆ ॥

ಮೊದಲೊಳಾ ಅಕ್ಷೋಭ್ಯಗುರುಗಳು ಜ್ಞಾನಸಿಂಧುಗಳೆನಿಪ ಜಯ ತೀರ್ಥಾಖ್ಯ ಗುರುಗಳು ರಾಜೇಂದ್ರಜಯಧ್ವಜತೀರ್ಥಸಹಭವರು । ಧಾಂಡಿ ರಾಜರಿಗಳಿಯ ಸರ್ವೋತ್ತಮರ ಜಾಮಾತರಲಿ ಕಿರಿಯನು ಗುರುವ್ಯಾಸರಾಯರ ತಂದೆಯು ತಾತ ವಲ್ಲಭದೇವನೆಂಬುವರು ॥

ವಲ್ಲಭರ ಜಾಮಾತ ಶೇಷಗಿರಿಪ್ರವರ ಪ್ರಖ್ಯಾತರುದರದಿ ಜನಿಸಿದರು ಸತ್ಪುತ್ರರೈವರು ಪಾಂಡು ತನಯರ ತೆರದಿ ಹರಿಭಕ್ತಿಶೀಲರತಿಗುಣವಂತಸಾಹಸ

ಧೀರ ಯೋಗೀಶ್ವರರು ವಿಶ್ವಾಮಿತ್ರಗೋತ್ರೋದ್ಭವರು ಕ್ಷಾಥರವಾಷ್ಟಿ ಕೋತ್ತಮರು ॥

ವರಯುಧಿಷ್ಠಿರದೇವನವತಾರಿಗಳು ಪುರುಷೋತ್ತಮರು ನಕುಲನೇ ಸ್ವರ್ಣವರ್ಣರು ಭಾಸ್ಕರದೇವನೇ ಬ್ರಹ್ಮಣ್ಯಯತಿವರರು । ಧ್ರುವನು ಶ್ರೀಪಾದಾರ್ಯ ಲಕ್ಷ್ಮೀನಾರಾಯಣರು ಸಹದೇವ ತಾನವತರಿಸಿದನು ಸುರೇಂದ್ರರ ನಾಮಧರಿಸುತ ಯೋಗಿವರನಾಗಿ ॥

ತಿಮ್ಮಭಟ್ಟರದೆಂಬರೋರ್ವರು ಸತಿಸುತಸೋದರರುಸಹಿತಾಗಿ ತಿರುಪತಿ ಯಾತ್ರೆಗೆಂದೇ ಹೊರಟುಬರುವಾ ಮಧ್ಯಮಾರ್ಗದಲಿ । ಉಳಿದು ಬೀಡಾರ ವನು ಮಾಡುತಲೆಂದಿನಂದದಿ ಅರುಣನುದಯದ ಸಮಯದಲಿ ಪರ್ವತದ ತಪ್ಪಲನರಸಿ ಪೋದರು ಶೌಚವಿಧಿಗಾಗಿ ॥

ಬರುತ ಮಾರ್ಗದಿ ಕಂಡರಾಗಲು ವ್ಯಾಘ್ರಪೋತಗಳೆರಡು ನಲಿದಾಡುತ್ತ ಮಾತೆಯನರಸಿಕಾಣದೆ ಹಲವು ಹಂಬಲಿಸಿ । ಇರುವ ಮರಿಗಳ ಪಿಡಿದು ಕರದೊಳು ಧರಿಸಿ ರಾಜರನರಸಿ ಬಂದರು ಕಾಣಿಕೆಯನಾಶೀರ್ವದಿಸಿ ಕೊಟ್ಟರು ವ್ಯಾಘ್ರ ಪೋತಗಳ ॥

ಕಂಡನಾ ಪ್ರಖ್ಯಾತಸಾಲ್ವರರಾಜನರಹರಿವರ್ಮನೆಂಬನು ಪೂಜ್ಯಭಾವದಿ ತಿಮ್ಮಭಟ್ಟಾಚಾರ್ಯರಿಂಗರ್ಘ್ಯಪಾದ್ಯಾದಿಗಳನನುಗೊಳಿಸಿ । ನೀವೆಮಗೆ ಗುರು ವರರು ಪುರೋಹಿತರು ಶ್ರೀನಿವಾಸನ ಸೇವೆಮಾಳ್ಪರೆ ಧರ್ಮಕರ್ತರು ನೀವೆ ವೆಂಕಟಗಿರಿಯ ದೇವಾಲಯವು ನಿಮ್ಮಾಧೀನವಿಂದಿನಲಿ ॥

ಎನುತವರಪೂಜಿಸುತ ಮುದ್ರಿಕೆಯಿತ್ತು ದೇವಸ್ಥಾನದೊಡೆತನವವರ ಧೀನವು ಪೂಜೆಮಾಳ್ಪವರು । ಗುರುಗಳೊರೆದಾರೀತಿ ನಡೆಯುತಲಿರಬೇಕೆಂದೆ ನುತ ನೇಮಿಸಿ ಸಕಲ ಜನರರಿವಂತೆ ಡಂಗುರಹೊಯಿಸಿದನು ತಿರುಪತಿ ಚಂದ್ರ ನಗರಿಯಲಿ ॥

ಅದು ಮೊದಲು ತಿಮ್ಮಣ್ಣಭಟ್ಟರ ಮತೆತನಕೆ ಪೆಸರಾಯ್ತು ಬೆಟ್ಟಾಚಾರ್ಯ ರೆಂಬುದು ಅರವತ್ತೊಕ್ಕಲಲಿ ಬೆಟ್ಟದಮನೆತನವು ಶ್ರೇಷ್ಠತೆಯ ಪೊಂದಿತು

ವೈದಿಕ ವಿಧಾನದಲಿ । ಶೇಷಗಿರಿಸಹಭವರು ತೀರ್ಥಾಚಾರ್ಯರೆಂಬರು ಆಪ್ತ ಮಿತ್ರರು ನಮ್ಮ ಗುರುವರವ್ಯಾಸರಾಯರಿಗೆ ॥

ಈಗ ಕಾಲವನೆರಡುಹೋಳುಗಳಂತೆ ಭಾಗಿಸಿ ಪೇಳ್ವೆವೈಖಾವಂದಗುರು ಮಧ್ವಾಚಾರ್ಯರವತಾರಕ್ಕೆ ಹಿಂದಿನಲಿ । ನಮ್ಮ ಷಾಷ್ಟಿಕವೃಂದ ಭಾಗವತೋತ್ತಮರು ತಾವೆನಿಸಿ ಹರಿಭಕ್ತಿಯಲಿ ಶ್ರೇಷ್ಠತೆಯಿಂದಲಿರುತಿರಲು ॥

ಅವರೊಳಬ್ಬನು ಸೋಮಭಟ್ಟರ ಮಗನು ರುದ್ರಾಂಕನು ಮಹಾ ಮೂರ್ಖತೆಯನಳವಡಿಸಿರ್ದನನುದಿನದಿ । ಶಿವನ ಸರ್ವೋತ್ತಮನದೆಂದೇ ತಿಳಿದು ಪೂಜಿಸುತಿರ್ದನವನೊಳು ಬಂಧುಗಳು ನಿಸ್ಸಾರಬುದ್ಧಿಯನಂದು ಮಾಡಿದರು ॥

ಆದರಿನಿಂ ಮಾನನೊಂದು ರುದ್ರಾಂಕನು ಮಹಾಚಿಂತೆಯುಲಿ ಕಾಶಿಗೆ ಹೋಗಿ ವಿಶ್ವೇಶ್ವರನ ಸನ್ನಿಧಿಗೆ । ತನ್ನ ಶಿರವನು ತರಿದುಕೊಟ್ಟರ್ಪಿಸುವೆನೆಂದೇ ಶಪಥ ಗೈಯುತ ಬಂಧುಮಿತ್ರರ ತೊರೆದು ಹೊರಟನು ಕಾಶಿಕಾ ಪುರಕೆ ॥

ಬರುತಲಿರೆ ದಾರಿಯೊಳು ಭೀಮಾನದಿಯ ದಡದೊಳು ಮೆರೆಯುತಿಹ ಶ್ರೀಪಾಂಡುರಂಗನ ವಿಠಲಾಭಿಧನ । ದರ್ಶನವ ತಾಮಾಡಲಾರದೆ ಮುಂದೆ ಪೋಗುತ್ತಿರಲು ದಾರಿಯನಡ್ಡಗಟ್ಟಿದನೊಬ್ಬ ಸಾಧುಮಹಾತ್ಮನಂದದಲಿ ॥

ಮಾರ್ಗದಲಿ ನಡೆದಾಯಾಸಭರದಲಿ ರುದ್ರನಿದ್ರೆಯೊಳಿರಲು ನಿಶಿ ಕಳೆದಿತ್ತು ರಾತ್ರಿಯೊಳು । ಯಾಮಶೇಷವು ತಾನಿರುವ ಸಮಯದೊಳು ಕಣ್ದೆರೆದೆಚ್ಚರದಿ ನೋಡಿದೊಡೆ ತಾನಿರುತಿರ್ದನಾ ಪಾಂಡುರಂಗನ ದ್ವಾರ ಬಳಿಯೊಳಗೆ ॥

ಮೂರುದಿನವೀರೀತಿಯಾಗಲು ಕೇಳ್ದನಾ ಸಾಧುವನು ಸಂತರೆ ಏತಕೀಪರಿಯಾಯ್ತು ಮನಸಿಲಿ ಭೀತಿ ತೋರುವುದು । ಎನಲು ಭೀತಿಯು ಬೇಡ ವಿಲ್ಲಿಯು ಭೂತ ಮಹಿಮೆಯಿದೆಂದು ಬೋಧಿಸಿ ಸಾಧು ನಿಜರೂಪವನು ತೋರಿಸಿದ ॥

ಬಹುದಿನದಿ ನಾನಿಲ್ಲಿ ಇರುವೆನು ಭೂತಜನ್ಮವು ನನಗೆ ಬಂದಿದೆ ಪೂತ ನೀನಾಗಿರ್ಪೆ ಇಂದಿನಲಿ। ಪಾಂಡುರಂಗನ ವಿಠಲನ ಶ್ರೀಕೃಷ್ಣನಾಮದಿ ಮೆರವ ಹರಿಯನು ಸೇವೆಗೈದು ಕೃತಾರ್ಥನಾಗು ಎನ್ನಿಂ ನಿನಗೆ ಬೇಕಾಗುವ ಸಹಾಯವನೆಲ್ಲ ನೀಡುವೆನು ॥

ಆಗಲಾ ರುದ್ರಾಂಕಕೃಷ್ಣನನಾಮಧರಿಸಿಹ ಪಾಂಡುರಂಗನ ವಿಠಲನ ಕೊಂಡಾಡಿ ಸತಿಸುತರೊಡನೆ ಸೇವೆಯನು। ಗೈದನಲ್ಲಿಯೆ ವರುಷ ಪರಿಯಂತ ರವೃ ತರುವಾಯದಲಿ ಕಾಶಿಯಂಯಾತ್ರೆಗೈಯುತ ಚಂದ್ರಮೌಳಿಯ ನೇಮದಲಿ ವಿಷ್ಣುಪುರಾಣ ರಚಿಸಿದನು ॥

ಸಂತಸವ ತಾ ಪೊಂದಿ ಕೃಷ್ಣನ ಚರಿತೆಯೆಲ್ಲವ ಕನ್ನಡದಿ ತಾ ಪೇಳ್ದನದ ಜಗನ್ನಾಥವಿಜಯವದೆಂಬ ನಾಮದಲಿ। ಆಗಲವನಿಗೆ ರುದ್ರಭಟ್ಟನದೆಂಬ ನಾಮವು ಮನೆತನಕೆ ಆರಾಧ್ಯನೆಂದೇ ನಾಮ ಬಂದುದು ಹರಿಯನಾರಾಧಿಸಿದ ಕಾರಣದಿ ॥

ರುದ್ರಭಟ್ಟನು ಬಂದು ಸೇರಿದ ವೀರಬಳ್ಳಾಳನಲಿ ಹೊಯಿಸಳ ರಾಜನಲಿ ಅವ ಯದುವಂಶಸಂಭೂತ। ಖ್ಯಾತನವಸಿಂಧುವಿಗೆ ದ್ವಾರವದೆಂಬ ದ್ವಾರ ಸಮುದ್ರ ಪಟ್ಟಣದಲ್ಲಿ ಇರ್ದನು ಪ್ರಾಣಿಮಾತ್ರಕೆ ಹಿಂಸೆ ಇಲ್ಲದೆ ಹರಿಭಕುತ ತಾನಾಗಿ ॥

ರುದ್ರಭಟ್ಟನು ಇದ್ದ ಕಾಲವು ನಮ್ಮ ಗುರುವರಮಧ್ವರಾಯರ ಹಿಂದಿನಲಿ ಶತಮಾನಕ್ಕೆ ಹಿಂದಿತ್ತು। ಮುಂದಿವನ ವಂಶದಲಿ ಗಂಗಾಧರನು ತಾ ಜನಿಸಿ ದನು ವಿದ್ಯಾರಣ್ಯರಿಗೆ ಪ್ರಿಯಮಿತ್ರ ರಾಜ್ಯವ ಕಟ್ಟಿದರು ಇವರೀರ್ವರು ನಾರಾಯಣಮಹಾಭೂತದ ಸಹಾಯದಲಿ ॥

ಹಿಂದೆ ಅಕ್ಷೋಭ್ಯರಿಗೆ ಗುರುವರಮಧ್ವರಾಯರು ದರ್ಶನವ ತಾವಿತ್ತ ಕಾಲದಿ ಪೇಳ್ದರೆಲ್ಲವ ಮುಂದೆ ಬರಲಿರುವ। ಕಾಲಹೇಷ್ಯವನೆಲ್ಲ ವಿವರಿಸಿ ಆದರ ಕಾರಣದಿಂದಲಾ ಗೋವಿಂದಭಟ್ಟರು ರಾಜ್ಯದೊಡೆತನವನ್ನು ಕಿರಿಯಯ್ಯ ನಿಗೆ ವಹಿಸಿದರು ॥

ಜಂಬುಖಂಡಿಯು ಮಾನವಿಯು ಸಹಿತಾಗಿ ಭಾರಿಯ ಮಂಡಲವ್ವ ಮಾಂಡಲಿಕರಿವರಾಗಿ ಇರ್ದರು ದೇವಗಿರಿ ಯಾದವರ ಬಳಿಯೊಳಗೆ । ಯವನರುಪಟಳದಿಂದಲಾ ಮಂಡಲವು ಸಹಿತದಿ ಯಾದವರರಸರೆಲ್ಲರು ಸೂರೆ ಯಾದರು ಕಾಲವಶದಿಂದ ॥

ಆದರ ಪರಿವಿಡಿಯೊಳಗೆ ಸತ್ತನು ಧುಂಡಿರಾಜನು ಮಗನು ರಘುನಾಥಾರ ನೆಂಬ ಮಹಾನುಭಾವನು ತರುಣನಾಗಿರಲು । ಇವನ ಕೊಲ್ಲದೆ ಯವನ ಸೇನಾಧಿಪನು ಕೊಟ್ಟನು ಮಾಂಡಲಿಕತನವನ್ನು ಇವರದನೊಪ್ಪದಲೆ ಸಂನ್ಯಾಸಿ ಯಾದರು ಗುರುಅಕ್ಷೋಭ್ಯತೀರ್ಥರಲಿ ॥

ಇವರಿಗಾಸಂನ್ಯಾಸನಾಮವು ಜ್ಞಾನಸಿಂಧುಗಳೆಂದು ಪ್ರಖ್ಯಾತಿಯನು ಪೊಂದಿದ ಜಯತೀರ್ಥಾಖ್ಯವಭಿಧಾನ । ಇವರು ಗುರುವರಮಧ್ವರಾಯರ ಸರ್ವಮೂಲಕ್ಕೆಲ್ಲ ಟೀಕೆಯು ಬರೆದ ಕಾರಣದಿಂದ ಟೀಕಾಚಾರ್ಯರೆಂದೇ ಕರೆವುತಿರುತಿಹರು ॥

ರಾಯರಘುನಾಥಾರ್ಯನಾ ಜಯತೀರ್ಥನಾಮಾಭಿಧನು ಷಾಷ್ಟಿಕಕುಲ ತಿಲಕ ಚಿನ್ನಭಂಡಾರವಂಶಜನು । ಗೋತ್ರಭಾರದ್ವಾಜ ಕನ್ನಡನಾಡಿಗೊಡೆ ತನವಿರ್ದುದಾತಗೆ ತನ್ನೈಶ್ವರ್ಯವೆಲ್ಲವ ಸೂರೆಗೈದನು ವಿಪ್ರಸಂತತಿಗೆ ॥

ಆಶ್ರಮವಸ್ವೀಕರಿಪಸಮಯದಲಾತ ತನ್ನೈಶ್ವರ್ಯವೆಲ್ಲವ ನಾಲ್ಕು ಭಾಗವ ಮಾಡುತದರೊಳಗೊಂದು ಭಾಗವನು । ಮಾನವಿಯು ಸಹಿತಾಗಿ ನರಹರಿನಾಯಕನಿಗಿತ್ತರು ಹಿರಿಯ ಸೋದರನವನು ಇವನನ್ವಯದಿಪುಟ್ಟಿದ ನರಸಪ್ಪನೆಂಬರಿಗೆ ಬ್ಯಾಗವಟ್ಟದ ಗ್ರಾಮದಲಿ ತಾವ್ ಪುಟ್ಟಿದರು★ ಶ್ರೀನಿವಾಸನ ನಾಮಧರಿಸಿದ ನನ್ನ ಗುರು ಶ್ರೀಜಗನ್ನಾಥವಿರಲರು ॥

ಎರಡನೆಯ ಕೃಷ್ಣಪ್ಪನಾಯಕಗಾತನಿಗೆ ಬಂದುದು ಪುರಂದರಗಡವ ದೆಂತೆಂಬುದು ಭಾಗ್ಯದ ಶಿರಿಯ ತೌರೂರು । ಇವರು ರಾಜರಸಖಿತನವ

★ ಸಾರಸ್ವತ ಪರಿಣಯವನ್ನು ರಚಿಸಿದ ರಾಘವೇಂದ್ರಪ್ಪನು ಜಗನ್ನಾಥದಾಸರ ಶಿಷ್ಯನೆಂದು ಇಲ್ಲಿ ಹೇಳಿಕೊಂಡಿರುವನು

ಗಳಿಸುತ್ತ ದೇಶಾಂತರದ ಘನವ್ಯಾಪಾರಿಗಳು ತಾವಾಗಿ ಮೆರೆಯುತ ಮೂರು ಕೋಟಿಯ ಧನವ ಗಳಿಸಿದರು ||

ಇವರ ವಂಶದಲೆ ಮಹಾಮಹಿಮೋತ್ತಮರೆನಿಸಿದಲುಬ್ಧತನದಲಿ ಹಿರಿಯರಾದವರ ನುಡಿಗಳನು ಮೀರುತ್ತಲಿರ್ದಾನಾಯಕರ ಶೀನಪ್ಪನೆಂಬರು ಮುಂದೆ ಬಹು ಕೀರ್ತಿಗಳು ಗಳಿಸಿದ ವಿರಲನ ಪುರಂದರರು ||

ಮೂರನೆಯ ಭಾಗವನು ಯಾತ್ರೆಯಗೈವ ವಿಪ್ರನಿಕಾಯಿವನು ಕಾವುತ್ತ ಭಯವಿಲ್ಲದಲೆ ಪೋಷಿಸುತ । ಮರಳಿಯವರ ಸುರಕ್ಷಣದಿ ಸ್ವಸ್ಥಾನಗೈಸುವ ದೇಶಾಂತರದ ವ್ಯಾಪಾರದ ಪ್ರವೀಣರು ವರ್ತಕಮಂಡಲಿಗೆ ತಾವಿತ್ತರಾ ಜಯ ತೀರ್ಥ ಗುರುವರರು ||

ಮಧ್ವಮತಸಿದ್ಧಾಂತವೆಲ್ಲವ ಬಿಡದೆ ಗುರುಮುಖದಿಂದ ಸಾಧಿಸಿ ದೇಶ ದೇಶದೊಳದನು ವಿಸ್ತರಿಪ । ಪಂಡಿತೋತ್ತಮರಿಂಗೆ ತಚ್ಛಿಷ್ಯರಿಗೆ ಜೀವನ ವೃತ್ತಿಗಾಕರವೆನಿಸಿ ಸಲಹುವ ರಾಜರಿಗೆ ತಾವಿತ್ತರಾನಾಲ್ಕನೆಯ ಭಾಗವನು ||

ಆಗಲಾದಕ್ಷಿಣದಿ ಕನ್ನಡನಾಡು ಸಹಿತದಿ ಬಹಮನಿಯ ಸುಲ್ತಾನರಿದ್ದರು ಅವರನಾಮ ಫಿರೋಜರೆಂದಿತ್ತು । ಅಲ್ಲಿ ಷಾಷ್ಟಿಕರೆಲ್ಲ ಬಹು ಗೌರವದಿ ಬಾಳ್ದರು ಇದಕೆ ಕಾರಣವೆನಿಪ ಗಂಗಾಧರನು ತಾನಾರಾಧ್ಯವಂಶಜಷಾಷ್ಟಿಕನು ತನ್ನವರೆಲ್ಲರಿಗೆ ಅನುಕೂಲವಿತ್ತಿರ್ದ ||

ಇವನು ಹರಿತಸಗೋತ್ರಭವ ಯಜುಶ್ಶಾಖಿ ಪ್ರಖ್ಯಾತಜ್ಯೋತಿಷಶಾಸ್ತ್ರ ವೇತ್ತನು ವಿದ್ಯಾರಣ್ಯರಿಗೆ ಪ್ರಿಯಸಖನು । ಇವನ ಗುರುವಕ್ಷೋಭ್ಯತೀರ್ಥರು ಇದರ ಕಾರಣದಿಂದಾವಿದ್ಯಾರಣ್ಯರಿವನಂಡದಲೆ ವರ್ತಿಸುತಿರ್ದರಾ ಅಕ್ಷೋಭ್ಯ ತೀರ್ಥರಲಿ ||

ಸಕಲ ಮರ್ಯಾದೆಗಳ ಸಹಿತದಿ ಕಾಶಿಯಾತ್ರೆಯ ಗೈವುತಾ ಜಯತೀರ್ಥ ಗುರುಗಳು ಪೂರ್ವಾಶ್ರಮದ ಸೋದರಿಸುತರು ತಾವಾಗಿರ್ದ ಬಾಲಕರ। ಕಶ್ಯಪರ ಗೋತ್ರದಲಿ ಪುಟ್ಟಿದ ಭಾರತಾಹ್ವಯಮನೆತನದ ಸರ್ವೋತ್ತಮರ ನಾಮದ ಪೆಸರು ಪೊತ್ತನ ಸುತರ ಪೋಷಿಸುತ್ತಿದ್ದರನುದಿನದಿ ||

ಹಿರಿಯ ಬಾಲಗೆ ರಾಜನೆಂಬುವ ನಾಮ ತಮ್ಮಗೆ ಜಯನದೆಂತೆಂಬುವುದು ಪೆಸರಾಗಿತ್ತು ಈರ್ವರು ಬೆಳೆವುತಿರ್ದರು ಸೂರ್ಯಚಂದ್ರಮರಂತೆ ದಿನದಿನದಿ। ಮಿಕ್ಕ ಕಾರ್ಯಗಳೆಲ್ಲ ನೋಡುತಲಿದ್ದ ವೃದ್ಧರು ಭೀಮನೆಂಬುದು ನಾಮವವರಿಗೆ ಮೂರು ಜನಕಾಶ್ರಮವನಿತ್ತರು ಟೀಕಾಚಾರ್ಯಗುರುವರರು ॥

ವಿಂಧ್ಯಪರ್ವತದಿಂದ ದಕ್ಷಿಣ ಭೂಮಿಯಲಿ ರಾಜೇಂದ್ರತೀರ್ಥರು ಹಿರಿಯರಾಶ್ರಮಗೈದು ಸಿದ್ಧಾಂತವನು ಪೋಷಿಸುವುದು। ಮಿಕ್ಕ ಹಿಮಗಿರಿ ಸಹಿತ ಆರ್ಯಾವರ್ತವೆಲ್ಲವ ಸುತ್ತಿ ಜಯಧ್ವಜರೆಂಬ ಕಿರಿಯರು ಗುರುಮಧ್ವಾರ್ಯರಪ್ಪಣೆಯನ್ನು ಪಾಲಿಪುದು ॥

ವಿಜಯನಗರದ ಸಾರ್ವಭೌಮರು ಬರುವದಲ್ಲಿಗದೆಂದು ಎಮಗಾಶ್ರಮವ ಕೊಟ್ಟಿಹರಲ್ಲಿ ಕೂಡಲಿ ಎಂಬ ಕ್ಷೇತ್ರದಲಿ। ತುಂಗಭದ್ರೆಯ ಸಂಗಮಸ್ಥಳದಲ್ಲಿ ಶ್ರೇಷ್ಠತೆ ಇಹುದು ಗುರುಅಕ್ಷೋಭ್ಯತೀರ್ಥರಿಗಿತ್ತಿಹರು ವಿದ್ಯಾರಣ್ಯಯತಿವರರು ॥

ಅಲ್ಲಿ ಹರಿಪೂಜೆಯಲಿ ನೀವಿರಿ ಎಂದು ನೇಮಿಸಿ ಕಳುಹಿದರು ವಿದ್ಯಾಧಿರಾಜರದೆಂಬ ವೃದ್ಧರನು। ಇವರ ಪೂರ್ವದ ನಾಮ ಭೀಮನದೆಂದು ಪೇಳಿದೆ ಹಿಂದೆ ಭೀಮಾಚಾರ್ಯರೇ ವಿದ್ಯಾಧಿರಾಜರು ಮೂರನೆಯ ಯೋಗಿಗಳು ॥

ವ್ಯಾಸರಾಯರು ಗುರುವರೇಣ್ಯರು ವರುಷ ತೊಂಭತ್ತೆರಡು ಪರ್ಯಂತರವು ಭುವಿಯೊಳಗಿರ್ದು ತುಂಗಭದ್ರಾನದಿಯ ಮಧ್ಯದಲಿ। ಪದ್ಮನಾಭರ ಪುಣ್ಯವೃಂದಾವನದ ಬಳಿಯೊಳು ಯೋಗಾಸನದಿ ತೆರಳಿದರು ವೈಕುಂಠಕ್ಕೆ ಶಿಷ್ಯರ ದುಃಖವಿಮ್ಮಡಿಸೆ ॥

ವ್ಯಾಸರಾಯರ ಜ್ಞಾತಿಕುಲದೊಳು ಶ್ರೇಷ್ಠವಾಗಿಹ ತರಂಗಿಣಿಯ ರಚನೆಯೊಳು ಪ್ರಖ್ಯಾತಿಯನು ಪಡೆದಿಹ ರಾಮಾಚಾರ್ಯರೆಂಬುವರು। ಯತಿಗಳೊಳು ಪ್ರಖ್ಯಾತರಾಗಿಹ ವಿಜಯೀಂದ್ರನಾಮಕರಾದ ಯೋಗೀಶ್ವರರು ಶ್ರೀನಿವಾಸರ ಪೆಸರ ಧರಿಸಿದ ಶಿಷ್ಯರೂ ಮೂವರು ಸೇವೆಯನು ಸಲಿಸುತ್ತಲಿರ್ದರು–ಪುರಂದರ

ದಾಸಕನಕನುವಾದಿರಾಜರು ಬಳಿಯೊಳಿರ್ದರು ರಾಜರನುದಿನ ಬಂದು ಕಾಣುವರು ||

ವ್ಯಾಸಯೋಗಿಯಚರಿತೆ ಎಂಬಭಿಧಾನದಲಿ ಸೋಮನಾಥನು ಬರೆದಿಹನು ಚಂಪೂಕಾವ್ಯ ರಾಮಾಯಣದ ತೆರದೊಳು ರಚನೆ ಗೈದಿಹನು । "ವ್ಯಾಸರಾಜಾಭ್ಯುದಯ"ವೆಂಬುದು ಬರೆದಿಹರು ವಿಜಯೀಂದ್ರ ಗುರುಗಳು "ಗುರುಗುಣರತ್ನಮಾಲಿಕೆ" ಎಂದು ಸುಧೀಂದ್ರರು ಬರೆದಿಹರು ಇವು ಪ್ರಖ್ಯಾತವಾಗಿಹ ಗುರು ಚರಿತ್ರೆಗಳು ||

ಇವುಗಳಲ್ಲದೆ ಹಲವು ಪರದೇಶಿಯಿರು ಬರದಿಹರನ್ಯಭಾಷೆಯೊಳದರೊಳಗೆ ಮೀರ್ ಆಲಂರೆಂಬುವರೋರ್ವರು ಬಹಮನಿಯು ರಾಜ್ಯದ ರಾಯಭಾರಿಗಳು। ವುರ್ದು ಭಾಷೆಯೊಳದನು ಬರದಿಟ್ಟಿಹರು ವಿಜಯನಗರದ ರಾಜಾಸ್ಥಾನ ವರ್ಣನೆ ವ್ಯಾಸರಾಯರ ಮಹಿಮೆಯುದರೊಳಗಿದೆ "ಗರ್ದಂಕಹನೆ"ಯೆಂಬುದು ಪೆಸರದಕೆ ನಾಂ ತಂದಿರುವೆ ತೋರಿಸುವೆ ||

ಪೋರ್ಚುಗೀಸರ ಭಾಷೆಯೊಳು ತಾ ಬರೆದಿಹನು ಲಿಸ್ಬಾನಸ್ ಆದೆಂಬುವ ಪೆಸರಧರಿಸಿಹನವನು ದ್ವೀಪಾಂತರದ ದೊರೆಗಳ ರಾಯಭಾರಿಯುವ । ಇಟಲಿ ದೊರೆಗಳ ರಾಯಭಾರಿಯು ವೆನಿಸ್ ಎಂಬುವರು ರೋಮನ್ನರ ಭಾಷೆಯೊಳು । ಬರೆದಿಹರು ವಿಜಯನಗರದ ರಾಜವರ್ಣನೆಯು—ಗೋವೆ ಪಟ್ಟಣದೊಳಗೆ ಈ ಎರಡನ್ನು ಶೇಖರಿಸಿದೆನು ಗುರುವ್ಯಾಸರಾಯರ ಮಹಿಮೆಯನರಿಯುದವರಾರಿಹರು ಜಗದೊಳಗೆ ॥

ಗುರುವರರ ಘನಚರಿತೆಯನು ಓದುತ ತಿಳಿದುಕೊಳ್ಳುದು ಪೇಳ್ವೊಡಸದಳವಲ್ಲವೆಂಬುವ ನರನದಾವನು । ವ್ಯಾಸರಾಯರೆ ಬರೆದಿಹರು "ಷಾಷ್ಠಿಕವಂಶಮುಕ್ತಾ ಕಲಾಪ"ವೆಂಬುವ ಗ್ರಂಥವನು ಅದನೋದಿಕೊಂಡಡೆ ಸಂಶಯ ಪರಿಹರವಾಗುವುದು ||

ಗುರುವರರು ಶ್ರೀವ್ಯಾಸರಾಯರು ಪರಂಧಾಮಕ್ಕೆ ತೆರಳುವಮುನ್ನ ತಮ್ಮಯ ಘನತರದ ವಿದ್ಯಾಪೀಠದಧ್ಯಕ್ಷತೆಯ ಭಾರವನು । ಹಲವು ಶಿಷ್ಯರಿ

ಗೊಲಿದು ವಿಂಗಡಗೈದು ಕೊಟ್ಟರು ಮುಂದೆ ಬಹುಕಾಲದೊಳು ಈ ರೀತಿಯಲಿ ನಡೆಯಲದೆಂಬ ಭರವಸದಿ ॥

ವಿಜಯನಗರದ ವಿಶ್ವವಿದ್ಯಾಲಯದೊಳನುದಿನ ಓದುತಿರ್ಪರು ಹತ್ತು ಸಾಸಿರದೆಣಿಕೆಯುಳ್ಳ ದ್ವೀಪದ್ವೀಪಾಂತರದ ಭಾರತದ । ಹಲವು ವಿದ್ಯಾರ್ಥಿಗಳ ತಂಡವು ಅವರವರ ಪ್ರತ್ಯೇಕ ಸ್ಥಳದೊಳುಪಚರಿಸಿ ಅನುಕೂಲ ಗೈವುತಿರ್ದರು ವ್ಯಾಸರಾಯರು ತಾವೆ ಪ್ರತಿದಿನದಿ ॥

ಸತ್ಯನಾಥಗೆ ಆ ಹರಿದ್ವಾರದ ಸುವಿದ್ಯಾಪೀಠದಧ್ಯಕ್ಷತೆಯು ಗಯೆಗೆ ಹರಿಮಿಶ್ರ ಜಯದೇವಾಖ್ಯ ಕಾಶಿಕಾಪುರಕೆ ಈಶ್ವರಸೂರಿಯೆಂಬರು ವಂಗದೇಶಕೆ ನೀವಿಹುದು ಪೋಗೆಂದು ನಿರೂಪಕೊಟ್ಟರು ಬರೆದು ಕೈಯ್ಯೊಳಗೆ ॥

ಕುಂಭಕಾಪುರವರಕೆ ವಿಜಯೀಂದ್ರರು ವುಡುಪಿಗೆ ವಾದಿರಾಜರು ಮುಳಬಾಗಲಿಗೆ ಪ್ರಜ್ಞಾನಿಧಿಗಳೆಂಬುವರು । ಉಳಿದ ವಿದ್ಯಾನಗರದಧ್ಯಕ್ಷತೆಯು ತಿರುಪತಿಕ್ಷೇತ್ರ ದೇವಾಲಯದ ಅಧ್ಯಕ್ಷತೆಯು ಶಿಷ್ಯರಾಗಿಹ ಶ್ರೀನಿವಾಸರಿಗೆ ॥

ವ್ಯಾಸಮುಷ್ಟಿಕೆಯನ್ನು ಕೊಟ್ಟರು ಶಿಷ್ಯರಾಗಿಹ ವಾದಿರಾಜರಿಗೆ ವಿಠಲನ ತಾವ್ ಕೊಟ್ಟರೈ ಪುರಂದರದಾಸಶಿಷ್ಯರಿಗೆ । ದಾಸಕೂಟದ ಸಾಧುಸಂತರ ಪಂಢರಾಪುರದಾಡಳಿತವೆಲ್ಲ ದಯದಿಕೊಟ್ಟರು ಭಕ್ತಮಂಡಲಿಗೆ ॥

## (ರಾಘವೇಂದ್ರಕವಿಯ ಅನುತಾಪ)

ವ್ಯಾಸರಾಯರು ಗುರುವರೇಣ್ಯರು ಬರೆದ ಚಂದ್ರಿಕೆ ಎಂಬುದತ್ಯದ್ಭುತದ ಗ್ರಂಥವು ಪೀಠಿಕೆಯು ರಚನೆಯನು ಮಾಡದೆ ಬಿಟ್ಟರದನುಳಿದು । ಶೇಷ ಚಂದ್ರಿಕೆ ಎಂಬ ಪೆಸರಿಟ್ಟದಬರೆದು ಪ್ರಖ್ಯಾತರಾದರು ರಘುನಾಥಪೆಸರಿನ ತೀರ್ಥರೆಂಬುವರು ॥

ಇವರು ಗೌತಮಗೋತ್ರಭವರು ವೇದಾಂತಿಗಳ ಮನೆತನ ಗುಡಿಬಂಡೆಯು ನಿವಾಸಗ್ರಾಮ ಕಾಶಿಯೊಳು ವಿದ್ಯವನು ಕಲಿತಲ್ಲಿ ತಾ ಬರುತಾ । ರಾಮೇಶ್ವರದ

ಯಾತ್ರೆಗೆ ಪೋಪ ಸಮಯದೋಳ್ ಈರೋಡಿನಲಿ ಇವರಿಗೆ ಮದುವೆಯಾಯಿತು ಇವರು ವೃಂದಾವನ ಸೇರ್ದರು ತಿರುಮಕೂಡ್ಲಿನಲಿ ||

ಸೂತ್ರಭಾಷ್ಯಗಳೆರಡ ಶೋಧಿಸಿ ದೀಪಿಕೆಯ ಪೆಸರಿನಲಿ ವ್ಯಾಖ್ಯಾನವನು ರಚಿಸುತ ವ್ಯಾಸರಾಯರ ಪೀಠದಲಿ । ತಂಗಿಹಳ್ಳಿಯ ಮನೆತನದ ಕೌಂಡಿಣ್ಯ ಗೋತ್ರೋದ್ಭವರು ವರವಣಿಪಂಚಗ್ರಾಮದ ವೃತ್ತಿವಂತರು ಜಗನ್ನಾಥಾಖ್ಯ ತೀರ್ಥರು ವೃಂದಾವನವ ಸೇರ್ದರು ಎಂಟು ಮಾಸದಲಿ ||

ಶ್ರೀಜಗನ್ನಾಥತೀರ್ಥರ (ಭಾಷ್ಯದೀಪಿಕಾಚಾರ್ಯರು) ಜನ್ಮಸ್ಥಳ ಮತ್ತು ಸ್ವಗ್ರಾಮವಾದ ವರವಣಿಯು, ಕರ್ನಾಟಕ ಪ್ರದೇಶದ ಕೋಲಾರ ಜಿಲ್ಲೆಯ ಗೌರೀಬಿದನೂರು ತಾಲ್ಲೂಕು ಮಂಚೇನಹಳ್ಳಿ ಹೋಬಳಿಗೆ ಸೇರಿರುವ ಉತ್ತರ ಪಿನಾಕಿನೀ ನದೀತೀರದಲ್ಲಿರುವ ಗೌಡಗೆರೆಯಿಂದ ಪಶ್ಚಿಮಕ್ಕೆ ನಾಲ್ಕು ಮೈಲಿ ದೂರದಲ್ಲಿದೆ. ಈ ಗ್ರಾಮವೂ ಸಹ ಉತ್ತರ ಪಿನಾಕಿನೀ ತೀರದಲ್ಲಿಯೇ ಇದೆ. ಇವರ ಪೂರ್ವಜರೂ ಸಹ ಇಲ್ಲಿಯೇ ವಾಸವಾಗಿದ್ದರು. ಕೌಂಡಿಣ್ಯ ಗೋತ್ರೋದ್ಭವರು. ಪಾಷ್ಟಿಕರಲ್ಲಿ ತಂಗೆಹಳ್ಳಿ ಮನೆತನಕ್ಕೆ ಸೇರಿದವರು. ಇವರ ಪೂರ್ವಜರೆಲ್ಲರೂ ದಿಗ್ದಂತಿ ಪಂಡಿತರು. ಪ್ರತಿವಾದಿಗಳನ್ನು ವಾದದಲ್ಲಿ ಪರಾಭವಗೊಳಿಸಿ ಕಲ್ಲಿನ ಧ್ವಜಸ್ತಂಭವನ್ನು ಸ್ಥಾಪಿಸಿದ್ದಾರೆ. ದೇವರಾಯನ ದುರ್ಗದ ಮೇಲಿನ ಬೆಟ್ಟಕ್ಕೆ ಹೋಗುವ ಮೆಟ್ಟಿಲು ದಾರಿಯಲ್ಲಿ ಎಡ ಭಾಗದಲ್ಲಿ ಅಧ್ಯಾಪಿ ವಿರಾಜಮಾನವಾಗಿದೆ, ಇವರು ಗೌಡಗೆರೆ ಬೆಟ್ಟದಆಚಾರ್ಯರ ಸಮೀಪ ಸಂಬಂಧಿಗಳು ಇವರ ವಂಶದವರು ಈಗಲೂ ದೊಡ್ಡಬಳ್ಳಾಪುರದಲ್ಲಿದ್ದಾರೆ. ಇವರಿಗೆ ನದೀತೀರದವರು ಎಂದು ಉಪನಾಮವಿದೆ. ನದೀತೀರ ಅಂದರೆ ಉತ್ತರಪಿನಾಕಿನೀ ನದೀತೀರವೆಂದು ಗ್ರಹಿಸಬೇಕು. ಇವರು ಕಾಶಿಯಲ್ಲಿ ಬಹುಕಾಲ ವಿದ್ಯಾಭ್ಯಾಸ ಮಾಡಿ ಸಕಲ ವಿದ್ಯಾಪ್ರವೀಣರಾಗಿ ಹಿಂದಿರುಗಿದರು. ಈರೋಡಿನಲ್ಲಿ ಪಾಷ್ಟಿಕರು ವಿಶೇಷವಾಗಿದ್ದರು. ಇವರಿಗೆ ವಿವಾಹವಾದುದು ಈರೋಡಿನಲ್ಲಿ ವಿದ್ಯಾನಗರವೆಂದು ಪ್ರಸಿದ್ಧವಾಗಿದ್ದ ಕುಂಭಕೋಣದಲ್ಲಿ ವಾದಿನಿಗ್ರಹಕಾರ್ಯದಲ್ಲಿ ನಿರತರಾಗಿದ್ದರು. ಶೇಷಚಂದ್ರಿಕಾಚಾರ್ಯರ ಆಪ್ತಶಿಷ್ಯರು ಮತ್ತು ಉತ್ತರಾಧಿಕಾರಿಗಳು. ಗುರುಶಿಷ್ಯರು ಸುಮಾರು ಮುವ್ವತ್ತು ವರ್ಷಗಳ ಕಾಲ ಒಟ್ಟಿಗೇ ಇದ್ದವರು. ಇವರ ವೃಂದಾವನವು ಕುಂಭಕೋಣದಲ್ಲಿದೆ.

# ಸಾರಸ್ವತಪರಿಣಯದ ಕೆಲವು ಭಾಗಗಳು

ಸಾರಸ್ವತಪರಿಣಯುವನ್ನು ರಚಿಸಿದ ರಾಘವೇಂದ್ರಪ್ಪನ ಜನ್ಮಸ್ಥಳ ದೊಡ್ಡಬಳ್ಳಾಪುರ. ಪಾಷ್ಟಿಕರ ವಸಿಷ್ಠಗೋತ್ರದ ಹುಲ್ಲುಬಂಡೆಯ ಮನೆತನಕ್ಕೆ ಸೇರಿದವನು. ಮೈಸೂರುಸೀಮೆಯ ಪ್ರಥಮ ರೆಸಿಡೆಂಟರಾಗಿದ್ದ ಕ್ಲೋಸ್ ಸಾಹೇಬರ ಆಪ್ತಕಾರಕೂನನಾಗಿದ್ದನು. ಕ್ರಿ.ಶ. ೧೮೦೧ರಲ್ಲಿ ನಡೆದ ಇಂಡಿಯಾ ದೇಶದ ಪ್ರಥಮ ಜನಗಣತೆಯ ಸಂದರ್ಭದಲ್ಲಿ ಈತನು ಸೆನ್ಸಸ್ ಕಮೀಷನರಾಗಿ ನೇಮಕರಾದ ಕ್ಲೋಸ್‌ಸಾಹೇಬರಿಗೆ ಸಹಾಯಾಧಿಕಾರಿಯಾಗಿ ನೇಮಕನಾಗಿ ಕಲ್ಕತ್ತೆಯಲ್ಲಿ ವಾಸಮಾಡಿದನು. ಆ ಕಾರ್ಯನಿರ್ವಹಣೆಯ ಅವಸರದಲ್ಲಿ ಈತನು ಇಡೀ ಭರತಖಂಡವನ್ನು ಮೂರು ಬಾರಿ ಸಂಚಾರ ಮಾಡಿ ಅಲ್ಲಲ್ಲಿ ತನಗೆ ದೊರೆತ ಅಪೂರ್ವ ಗ್ರಂಥಗಳನ್ನು ಸಂಗ್ರಹಿಸಿ ಬ್ರಹ್ಮ ಮತ್ತು ಸರಸ್ವತಿ ಇವರ ವಿವಾಹ ವೃತ್ತಾಂತವನ್ನು ಕಥಾವಸ್ತುವನ್ನಾಗಿ ಆರಿಸಿಕೊಂಡು ತನ್ನ ಪೂರ್ವಜರ ಇತಿಹಾಸವನ್ನು ವಿಸ್ತಾರವಾಗಿ ಚಿತ್ರಿಸಿದ್ದಾನೆ. ಈ ಗ್ರಂಥದ ಕೆಲವು ಭಾಗಗಳು ಮಾತ್ರ ಉಪಲಬ್ಧವಾಗಿವೆ. ಅದರಿಂದ ಆರಿಸಿ ತೆಗೆದ ಕೆಲವು ಪದ್ಯಗಳು ಇಲ್ಲಿ ಸೂಚಿತವಾಗಿವೆ.

ಈ ಕಾವ್ಯದಲ್ಲಿ ಒಂದು ನವೀನತೆಯನ್ನು ನಾವು ಕಾಣಬಹುದು. ಯತಿ, ಗಣ, ಪ್ರಾಸಗಳೆಂಬುವ ಕಟ್ಟುಪಾಡಿಗೆ ಒಳಗಾಗಿ ಈತನು ಕಾವ್ಯ ರಚನೆ ಮಾಡಿರುವುದಿಲ್ಲ. ಕವಿಯು ಹೃದಯುವನ್ನು ನಿರಾತಂಕವಾಗಿ ತಿಳುಹಿಸುವುದಕ್ಕೆ ಸಹಕಾರಿಯಾಗಿ ಪಂಪಮಹಾಕವಿಯಿಂದ ಪ್ರಣೀತವಾದ "ಪದ" ಎನ್ನುವ ನೂತನ ಶೈಲಿಯಲ್ಲಿ ಇದನ್ನು ರಚಿಸಿರುವುದಾಗಿ ಹೇಳಿಕೊಂಡಿದ್ದಾನೆ. ಇದರ ಲಕ್ಷಣವನ್ನು ತಿಳಿಸುವ ಪದವನ್ನು ಇಲ್ಲಿ ಕೊಡಲಾಗಿದೆ.

ಪದ :—ಮೊದಲೆರಡು ಪಾದಗಳು ಮುಂದಿನ ನಾಲ್ಕೈದಾಗಲದು ಸಾರ್ಥಕವಾಗಲಿಬೇಕು ವಾಕ್ಯ ಲಕ್ಷಣ ಕೆಡದೆ ಇರಬೇಕು । ಅಕ್ಷರದ ಲಕ್ಷಣವು ಶಬ್ದದ ಲಕ್ಷಣವು ತಾನಿದರ ಜತೆಯುಲಿ ವಾಕ್ಯಲಕ್ಷಣ ಶ್ರಾವ್ಯ ಲಕ್ಷಣವಿರಲು ಪೇಳ್ವರು ಸಪ್ತಪದಿಯೆಂದು ॥

ಇದಕೆ ಛಂದಶ್ಶಾಸ್ತ್ರಕಾರರು ಪದವದೆಂದೇ ನಾಮ ಕೊಟ್ಟರು. ಪದವು ವೇದದೊಳಡಗಿಕೊಂಡಿದೆ ಕ್ರಮವು ಜಟೆಸಹಿತ । ಇದನು ಕನ್ನಡದೊಳಗೆ ಪಂಪನು ಪೇಳ್ದನಾನದನನುಸರಿಸಿ ಪೇಳ್ದಿಹೆನು ಕೇಣವ ತೊರೆದು ಸುಜನರು ಮೆಚ್ಚುವಂದದಲಿ ॥

## ಹರಿಕಥಾಮೃತಸಾರವನ್ನು ರಚಿಸಿದ ಶ್ರೀಜಗನ್ನಾಥದಾಸರು ರಾಘವೇಂದ್ರಪ್ಪನ ಗುರುಗಳು

ಪದ :—ಸಂಧಿ ಆರೇಳರಲಿ ವರ್ಣಿತವಾಯ್ತು–ಅವ್ಯಕ್ತನ ಮಹಾ ಮಹಿಮೆಗಳು ಸೃಷ್ಟಿಗೆ ಪೂರ್ವ ಸ್ಥಷ್ಟ್ಯೋತ್ತರವಿರುತಿರುವ ವೇದಸಮ್ಮತವಾದ ಮಹಾವಾಕ್ಯಗಳು ಆಪ್ತರು ಹಿರಿಯರೆನಿಪ ವಾಕ್ಯ ಪ್ರತ್ಯಕ್ಷದಲಿ ಕಾಣುವ ವಸ್ತು ಇವುಗಳೆಲ್ಲವು ಸೇರಿ ಪ್ರಮಾಣತ್ರಯವೆನಿಸಿ ವೇದಾಂತದ ವಿಚಾರವದಾಯ್ತು ಶ್ರೀಹರಿಯ ಮಹಿಮಾರ್ಣವಕೆ ತುಂತುರು ಹನಿಗಳಂದದಲಿ ॥

ಭಾರತದ ಜನಗಣತೆಯನು ಮಾಡುವರೆ ಈಸ್ಟ್‌ಇಂಡಿಯಾ ಕಂಪನಿಯ ಡೈರೆಕ್ಟರುಗಳೆಲ್ಲರು ಸಲಹೆಗೈವುತ ಗೌರ್ನರ್ ಜನರಲ್ ಇನ್‌ಕೌನ್ಸಿಲ್ ಆಫ್ ಇಂಡಿಯಾ ಎಂಬರಿಗೆ ಸರ್ವಾಧಿಕಾರವನಿತ್ತು ಕಳುಹಿದರು । ಅವರು ಈ ರೀತಿಯುಲಿ ಭಾಗವಗೈದಾ ಮೈತ್ರೀಭಾವದಿಂದ ಮರಾರಾಜನ ಪದವು ಸಹಿತಾಗಿ ಲೆಕ್ಕವಗೈದು ಕೊಂಡಿಹರು ॥

ಸಸಾವಿರದೆಂಟನೂರೊಂದನೆಯ ಮಾರ್ಚಿ ಮಾಹೆ ಎನಿಸುವ ರೌದ್ರಿ (ರವದ್ರಿ) ಸಂವತ್ಸರದ ಫಾಲ್ಗುಣದಿ । ಕಡೆಯ ಗಣನೆಯಗೈದು ಅಂಕಿಯ ನಳತೆಗೈದಿಟ್ಟಿಹರು ಮುವ್ವತ್ತೈದು ಕೋಟಿಗಳು ॥

ನಮ್ಮ ಪ್ರಭುವರರಾದ ಕ್ಲೋಸಾಖ್ಯರು ಎನ್ನೊಳತ್ಯಭಿಮಾನವಿಟ್ಟರು ಸುಲ್ತಾನರ ಜಯವು ತಮಗೆ ಕೈಸಾರ್ದಬಳಿಕಿನಲಿ । ಭಾರತದ ಜನಗಣನೆಯು ಮಾಡಲೋಸುಗೆ ಶಕ್ತರಾಗಿಹ ನಮ್ಮ ಪ್ರಭುಗಳನಾಯ್ದು–ನಿಯಮನಗೈದು ಕೊಂಡರು ಕಲ್ಕತ್ತೆಯು ನಿವಾಸ ಸ್ಥಾನವಾಯಿತು ನನ್ನನಲ್ಲಿಗೆ ಬರಲು ಪರವಾನಿಗಿಯನಿತ್ತರು ಸಕಲಾನುಕೂಲಗಳಿತ್ತು ಸಂತಸದಿ ॥

ಆಗ ಮುಂಬಯಿ ನಗರದಿಂ ಮದರಾಸ್ ಮಾರ್ಗಕೆ ಪೋಗಿ ಕಲ್ಕತ್ತೆಯನು ಸೇರಲು ಪೋಸ್ಟು ಟಪ್ಪಾಲ್ ಎಂಬುವ ಕುದುರೆಗಾಡಿಗಳ ಸಾಧನವು ತಾನಿತ್ತು ಅದನುಳಿದ ಬಳಿಕಿನ್ನು ಬೇರಾವುದು ಸಹಾಯಗಳಿಲ್ಲ ಪ್ರಯಾಣಕೆ ಸುಲಭ ಮಾರ್ಗದೊಳು ॥

ಮಧ್ಯದಲಿ ಕುದುರೆಗಳ ವಿಶ್ರಾಂತಿಯು ನಿವಾಸಸ್ಥಳದ ನಿಲ್ದಾಣವನು ಗೈದಿರ್ದರು ಗ್ರಾಮವು ಹಳ್ಳಿ ಗುಂತಕಲ್ಲೆಂದು ಪೆಸರದಕೆ । ಅಲ್ಲಿ ನಾನಿಳಿವುತ್ತ ಕಲೆಕ್ಟರ್‌ಸಾಹೇಬರು ಬಂದೆನ್ನ ಕಂಡರು ಏನು ಬೇಕಾದೊಡೆಯು ಪೇಳುವುದೆಂದು ನಾಲ್ವರು ಚಾಲಕರ ಕಾರಕೂನರೊಬ್ಬರ ಕೊಟ್ಟು ಕಳುಹಿದರು ॥

ಅನತಿದೂರದೊಳಲ್ಲಿ ಕನ್ನಡನಾಡಭಾಷೆಯ ಭಕ್ತಿಸೇವೆಯ ಮಾಡಿ ಹರಿದಾಸರಲಿ ಕೀರ್ತಿಯನು ಪೊಂದಿ ಹಲವು ಸುಳಾದಿಕೀರ್ತನದಿಂದ ಹರಿ ಪದಪಂಕಜವ ಪಾಡುತ್ತಲಪರೋಕ್ಷಿಗಳ ತಂಡದಿ ಸೇರ್ದ ಮಹಾನುಭಾವರು ವಿಜಯದಾಸರ ಕಟ್ಟೆಯೆಂಬುವ ಸ್ಥಳವ ನೋಡಿದೆನು ॥

ಅವರ ಶಿಷ್ಯಕುಮಾರರೆನಿಸಿದ ಮೋಹನ ವಿಠಲನೆಂದೆಂಬುವರು ಸಾಧುಶಿರೋಮಣಿಗಳಲ್ಲಿರ್ದು ಗುರುಗಳ ಕರದ ತಂಬೂರಿಯನು ಬಾರಿಸುತ । ತಮ್ಮ ಗುರುಗಳ ಕಥನವೆಲ್ಲವ ಪೇಳಿದರು ಅತಿಶಯದೊಳಿದು ಮನಸಿಂಗೆ ಸೊಗಸದು ಕಥೆಯ ಕಾರಣವಿಲ್ಲಿ ಪೇಳಲು ಸಮಯ ಸಾಲದು ಮುಂದೆ ನನಗಿಹ ಹಲವು ಪಯಣದ ಕಾರಣಾಂತರದಿ ॥

ನಮ್ಮ ಗುರುಮಧ್ವಾಭಿದಾನದ ಪೂರ್ಣಪ್ರಜ್ಞರ ಮೊದಲು ಶಿಷ್ಯರು ಪದ್ಮನಾಭರು ಇವರ ಕಥನವ ಹಿಂದೆ ಪೇಳಿದೆ । ಮಾಧವಾಖ್ಯರು ಪುಲಚು ಕಂಬಿಯ ವರ್ಗಶೋಭಿತರು ॥

ಅವರ ಬಂಧು ಪರಂಪರೆಗಳೆಲ್ಲರು ಸ್ಮಾರ್ತಾಚಾರನಿಷ್ಠರು ವೈಷ್ಣವರಾದವರು ಗುರುವರವ್ಯಾಸರಾಯರ ಶಿಷ್ಯಕೋಟಿಯಲಿ । ಸೇರ್ದು ಗುರುಗಳ ಪಾದ ಪೂಜಾದಿಗಳ ಗೈವೃತಲವರ ದೇವರು ಗುರುಗಳೆಂದೇ ತಿಳಿದು ಪೂಜಿಸುತಿಹರು ದಿನದಿನದಿ ||

ಉಲಚಕಂಬಿಯು ಕುಲದಿ ವೈಷ್ಣವರಾಗಿ ಗುರುವರವ್ಯಾಸರಾಯರ ಗುರು ಪರಂಪರೆಯೊಳಗೆ ಶಿಷ್ಯರದಾಗಿ ಶೋಭಿಸುತ । ಭಾಗವತ ಧರ್ಮದಲಿ ಭಕ್ತಿಯು ಭರದ ಕೋವಿದರಾಗಿ ಮಂತ್ರಾಲಯದ ರಾಯರ ಪರಮ ಭಕ್ತರದಾಗಿ ಮೆರದರು ದಾಸವರ್ಗದಿ ವಿಜಯವಿಠಲರು ||

ಇವರು ಸಂಗೀತದಲಿ ಗುರುವರರಾಘವೇಂದ್ರರ ತೆರದಿ ಪುರಂದರ ವಿಠಲಾಂಕಿತರಂತೆ ಕೋವಿದರು । ಹಲವು ಶಿಷ್ಯರು ಭಾಗವತ ಸದ್ಭಕ್ತಿಯು ಶಿರೋರತುನಗಳು ಇವರೊಳು ಬಂದು ಸೇರುತಿರ್ದರನುದಿನದಿ ||

ನಮ್ಮ ಗುರುಬಾಂಧವರ ಹಿರಿಯರು ಬೆಟ್ಟದಾಚಾರ್ಯರಲಿ ಗಣ್ಯರು ಚಿಕ್ಕಬಳ್ಳಾಪುರದ ವೆಂಕಟಕೃಷ್ಣನಾಮಕರ ಶಾಲಕರು ಋಷಿವರ ರಾಮಾ ಚಾರ್ಯರಳಿಯರು ವ್ಯಾಸರಾಯರ ರಾಘವೇಂದ್ರರನುಳಿದ ತರುವಾಯದಲಿ ತತ್ವಮ ಪಂಡಿತರು ಜಗನ್ನಾಥವಿಠಲಾಭಿಧರು ಗುರುಜಗನ್ನಾಥ ವಿಠಲನ ಪಾದಪೂಜಕರು ||

ವಿಜಯರಾಯರ ಮಾನ್ಯಮಿತ್ರರೊಳಿವರು ಸೇರ್ದರು ಆಪ್ತ ಸಖತನ ವಾಯ್ತು ಈರ್ವರಿಗೆ । ಗುರುವರ ಜಗನ್ನಾಥವಿಠಲರ ಮೂಲಕದಿ ಬಹಳ ಪ್ರಮೇಯಗಳರಿತುಕೊಂಡರು ವಿಜಯದಾಸರು ಶಾಸ್ತ್ರಸಂಗತಿಯು ||

ತಿಳಿಯುದದರಿವರುಗಳ–ಗುರುಶಿಷ್ಯರಲಿ ಸೇರಿಸಿ ಪೇಳುತಿರ್ಪರು ವಿಜಯ ದಾಸರು ಭಾಗವತಸದ್ಭಕ್ತಿಆಚಾರದಲಿ ನಿಷ್ಠರು ವಯೋವೃದ್ಧತ್ವದಿಂದಲಿ ಪೂಜ್ಯರಲ್ಲದೆ ವ್ಯಾಸರಾಯರ ಶಿಷ್ಯಮಂಡಲಿಯೊಳಗೆ ಗಣ್ಯರು ಪೂಜ್ಯರಾದವರು||

ಗೌರೀಬಿದನೂರಿಗೆ ಸಮೀಪದಿ ವ್ಯಾಸರಾಯರ ಶಿಷ್ಯವರ್ಗದ ವುಲಚು ಕಂಬಿಯು ವೈಷ್ಣವರು ವೀಣೆಯಲಿ ಘನವಿದ್ವಾಂಸರುಗಳಿಪ್ಪರು ನಾಮ ಚಿಂತಲ ಪಲ್ಲಿ ಎಂಬುವರು । ನಮ್ಮ ಗುರು ಶ್ರೀವ್ಯಾಸರಾಯರು ಬರೆದುಕೊಟ್ಟಿಹ ವುಂಬಳಿಯ ಶಾಸನವ ಕಂಡೆನು ಈಗಲದು ಶ್ರೋತ್ರಿಯದ ಮಾನ್ಯದಿ ನಡೆಯು ತಿರ್ಪುದು ಹೆಸರು ಹುಣಸೇನಹಳ್ಳಿ ಎಂಬುವರು ॥

ಇವರ ವಂಶದಿ ಜನಿಸಿ ಬಾಲ್ಯದಲಿ ಸಕಲವನು ಜ್ಞಾತಿಗಳಿಂಗೆ ತಾವ್ ಕಯ್ಯಾರ ದಾನವಗೈದು ಕಾಶಿಗೆ ಪೋಗಿ ವಿದ್ಯವ ಕಲಿತು ಮಂತ್ರಾಲಯದ ರಾಯರೊಳು । ಅತಿಶಯದ ಭಕ್ತಿಯನು ಮಾಡುತ ಶೇಷಚಂದ್ರಿಕೆ ಬರೆದ ರಘುನಾಥಾರ್ಯಗುರುಗಳ ಪ್ರಿಯದ ಶಿಷ್ಯರು ಎನಿಸಿ ಮೆರದರು ವಿಜಯ ವಿಠಲರು ॥

ಇವರಿಗೌರಸ ಪುತ್ರರಿಲ್ಲವು ಶಿಷ್ಯರಲ್ಲದೆ ಪ್ರೀತಿಪುತ್ರರು ಈಗ ಗುರುಗಳು ವಿಜಯದಾಸರ ಮರೆಯದಂದದಿ ಕರದ ತಂಬೂರಿಯನು ಪೂಜಿಸುತ । ಪ್ರತಿ ವರ್ಷ ಕಾರ್ತೀಕದೊಳಾರಾಧನೆಯ ಗೈವುತ ಸಾಧುಶಿರೋಮಣಿಗಳೆಂದೆನಿಸಿ— ಈಗಲು ಚಿಪ್ಪಗಿರಿಯೊಳಿಹರು ಮೋಹನದಾಸರೆಂಬುವರು ॥

ವಿಜಯರಾಯರ ಕಂಡ ಜನಗಳು ಈಗ ಇರುವರು ಶ್ಯಾಮವರ್ಣದ ಮಟ್ಟದಾಳುಗಳಾಗಿ ಶೋಭಿಸುತೆ । ವರ್ಷವೆಪ್ಪತ್ತಾರು ಪರ್ಯಂತರವು ವೀಣೆಯನನುದಿನವು ಬಾಜಿಸುತ ಹರಿಭಕ್ತಿಯಲಿ ಲೋಲುಪರಾಗಿ ನಮ್ಮ ತಂದೆಯ ಮನೆಗೆ ಸೋದರತ್ತೆಯ ಮಕ್ಕಳಾಗಿಹ ದೇಶಪಾಂಡೆಯ ಕೃಷ್ಣರಾಯರ ಮನೆಗೆ ಶಿಷ್ಯರ ಸಹಿತ ಪ್ರತಿ ವರ್ಷದೊಳು ಬರುತಿಹರು ॥

ಆನುಪೂರ್ವಿಯೊಳವರ ವಂಶಾವಳಿಗಳೆಲ್ಲವನರಿತುಕೊಂಡೆನು ಬಳಿಕ ಮಂತ್ರಾಲಯಕೆ ಪೋಗುತಲಿ । ನಮ್ಮ ಗುರುಗಳು ರಾಘವೇಂದ್ರರ ದರ್ಶನವ ಗೈಯುತ ಮುಂದಕೆ ಪೋಪ ಭರದೊಳು ಸೇರ್ದೆ ಕಾಚಾಪುರದ ಗ್ರಾಮವನು ॥

ಆದನು ಕರೆವರು ತುಂಗಭದ್ರೆಯದೆಂಬ ಪೆಸರಿಂ ಮತ್ತೆ ಪೆಸರುತಿರ್ಪರಣು ಮಂತ್ರಾಲಯಾಖ್ಯೆಯದಿ । ಅಲ್ಲಿ ನಾನಿಳಿವುತ್ತ ಸ್ನಾನಾದಿಗಳ ಗೈಯ್ಯುವ ಸಮಯಕೋರ್ವರುಬಂದರ ಲ್ಲಿಗುಪಾಧ್ಯನಾಮಕರು ॥

ಬಂದೆಸಗೆ ಕುಶಲವನು ಕೇಳ್ದರು ಪೂರ್ವಪರಿಚಿತರಂತೆ ತಮ್ಮಯ ಕುಶಲವನು ತಾವಾಗಿ ಪೇಳ್ದರು ಸಾಧು ಲಕ್ಷಣದಿ । ನಿಮಗೆ ಬೇಕಾಗುವ ಸಹಾಯವ ನೀಡಬಂದಿಹೆನಾವು ಬೇಕಾದುದನು ಕೇಳ್ವುದು ಶಾಕ್ಯತಿಯು ಬೇಕಿಲ್ಲ ಸಂಕೋಚದಲಿರುತಿಹಿರಿ ಸಡಗರ ಮಾಡದಿರಿ ಎಂದು ॥

ನಾನು ಪೇಳಿದೆನವರೊಡನೆ ಮಂತ್ರಾಲಯದ ಗುರುಕರುಣದಲಿ ದೊರೆತಿದೆ ಆಯಾಸವಾವುದು ಬಾಡ ನಮಗೆಂದು । ಕಲ್ಪವೃಕ್ಷವು ಅಮೃತ ರಸಧಾರೆಯನು ನಿತ್ಯವು ದೇವಜನರಿಗೆ ಕೊಡುತಲಿರ್ದರು ಬಡತನವು ತಾನುಂಟೆ ಗುರುವರರಾಘವೇಂದ್ರರ ಭಕ್ತಮಂಡಲಿಗುಂಟೆ ಆಯಾಸಗಳು ಸ್ವಪ್ನದಲಿ ॥

ಎಂದು ಲೋಕಭಿರಾಮವಾರ್ತೆಯ ಪೇಳುತಲೆ ಕರೆದೊಯ್ದರೆಮ್ಮನು ಬಂದು ಸೇರ್ದೆವು ಬಳಿಕ ಬೃಂದಾವನದ ಬಳಿಯೊಳಗೆ । ಯಾರೋ ಶ್ರೀಮಂತರು ಮಹಾಸತ್ಕಾರ ಯೋಗ್ಯರು ರಾಯರಿಗೆ ಗೈಸಿರ್ದರಾದಿನ ಪೂರ್ಣ ಮಹಾಭಿಷೇಕವನು ॥

ಕೊಟ್ಟಿರೆನಗಾತಿಥ್ಯವನು ಸತ್ಕಾರಪೂರ್ವಕದಿಂದಲಂಗೀಕರಿಪ ಸಮಯಕೆ ಬಂದು ಪೇಳ್ದರು ರಾತ್ರಿ ಮಂಗಳಾರತಿಗೈದ ತರುವಾಯದಲಿ ಸಕಲವನರಿತು ನಿಮ್ಮಿಂದ ಬಳಿಕ ನಾವು ಪೇಳುವೆವು ನಮ್ಮಯ ಸಕಲ ವೃತ್ತಗಳ ॥

ಎಂದು ಪೇಳುತ್ತಿರುವ ಸಮಯಕ್ಕೆ ಅಸ್ತಮಾನವು ಘಟನೆಯಾಯಿತು ಮಂಗಳಾರತಿಯಾಯ್ತು ಮೊದಲು ಕಾಚಾಪುರದಿ ಕಂಡ ವುಪಾಧ್ಯರೈತಂದು । ನಾಳೆ ಸೂರ್ಯೋದಯಕೆ ಮನ್ನಮೆ ನದಿಯ ಬಳಿಯೊಳು ಗುರುವರೇಣ್ಯರ ದರ್ಶನವು ನಿಮಗಹುದು ಧನ್ಯರು ನೀವು ಸುಕೃತಿಗಳೆಂದು ಪೇಳಿದರು ॥

ದೇವದೂತರು ನಾವು ರಾಯರ ಸೇವೆಗೋಸುಗ ಬಂದಿಹೆವು ನಮ್ಮಯ ದೇವಮಾನದ ವರ್ಷಹನ್ನೆರಡು ಕಳೆದ ತರುವಾಯದಲಿ ಬೇರೆಯ ದೂತರಿಪ್ಪರು ಮುಂದೆ ಹನ್ನೆರಡು ವರ್ಷಗಳು । ನಿಮ್ಮ ವರ್ಷವು ನಮಗೆ ದಿನ ಒಂದಪ್ಪುದೀರೀತಿಯಿಂ ಕಾಲವ ಕಳೆವುತಿರ್ಪೆವು ಹರಿಯನುಜ್ಞೆಯೊಳು ॥

ಮೌನವ್ರತಧಾರಣೆಯೊಗ್ಯೆದಿಹರೀಗ ಗುರುವರರಾಘವೇಂದ್ರರು ವರ್ಷ ವಂದಕೆ ಮೂರು ದಿವಸಗಳು ನಿಮ್ಮ ನತಮಾನದಲಿ ಶ್ರಾವಣದೊಳಗೆ ಮಾತಾಡುವರು ,ನಮ್ಮೊಳು ಭಕ್ತಮಂಡಲಿಗೀವಭೀಷ್ಟಗಳ । ಎಲ್ಲವನು ನಾವೀವೆ- ವನುದಿನ ಭಕ್ತಜನರಿಗೆ ಗುರುವರೇಣ್ಯರ ಘನಕರುಣಪಡೆದೆರ್ಪ ಹರಿಭಕ್ತರಿಗೆ ಸದ್ಧರ್ಮದಲಿ ನಡೆವರಿಗೆ ॥

ನೀನು ಕಣ್ಮುಚ್ಚುವುದು ನಿಷ್ಠೆಯೊಳೀಗ ಕೈಮುಗಿವುತ್ತ ನಿಂದಿರು ಗುರುವರಾಜ್ಞೆಯು ನಾವು ನಿನಗರುಹುವೆವು ಭಯ ಬೇಡ । ಎಂದು ಅಪ್ಪಣೆ ಇತ್ತರಾಗಲು ದಿವ್ಯತೇಜದ ಮಿಂಚು ಹೊಳೆಯಿತು ಕಣ್ಣು ಮುಚ್ಚಿದೆನೆನಗೆ ರೋಮಾಂಚಂಗಳಾಯಿತು ದೇಹ ನಡುಗಿದುದು ||

ಪೇಳ್ದರಾಗಲು ಗುರುವರೇಣ್ಯರ ದೂತರೊಬ್ಬರು ಯೋಗಿವರ್ಯರು ಕೊಡುವರಪ್ಪಣೆಯ ಕೇಳುವುದು । ನೀನು ಧನ್ಯನು ಬಹಳ ಸುಕೃತಿಯು ನಿನ್ನ ಸಮ ನರನಾವನಿಲ್ಲವು ಎನುತ ಹೊಗಳಿದರು ||

ನೀನಹಂಕಾರವನು ವರ್ಜಿಸು ನಿಮ್ಮ ಕುಲಬಾಂಧವರ ಪ್ರೀತಿಸು "ಷಾಷ್ಟಿಕ ವಂಶಮುಕ್ತಾವಳಿಯು" ಗುರುವರವ್ಯಾಸರಾಯರು ಬರೆದಿಹರು ಪಂಡಿತಮಾನ್ಯವಾಗಿದೆ ನೀನೀಗಲದ ಬರೆಯುವುದು ಸರ್ವರು ತಿಳಿಯುವಂದದಿ ಮಾತೃಭಾಷೆಯು ಕನ್ನಡದಿ ಬರದಿಡು ಸುಲಭ ಶೈಲಿಯಲಿ ||

ಖೇದಮೋದಜಯಾಪಜಯಗಳ ಸಮತೆಯನು ಪೇಳಿದರು ನಿನಗತಿ ಕಷ್ಟಗಳು ತಾನೊದಗಿ ತಾನೆ ನಿವಾರಣೆಯು ಹೊಂದಿದುದು ಹರಿಯಾಜ್ಞೆಯೊಳು ತಕ್ಷಣದಿ । ಮುಂದೆ ನಿನಗತಿಮಂಗಳವು ಗುರುಕೃಪೆಯೊಳಗೆ ದೊರೆಯುವುದು ಹರಿಗುರುಗಳನು ಮರೆಯದೆ ನಿತ್ಯ ಪೂಜಿಸು ಸಕಲ ಪುಣ್ಯಕ್ಷೇತ್ರ ಯಾತ್ರೆಯಂಗೈದು ಸಂತಸದಿ ॥

ಮುಂದೆ ಬಹುದುಷ್ಕಾಲಬಪ್ಪುದು ಬಳಿಕದು ನಿವಾರಿಪುದು ಗುರು ಕೃಪೆಯೊಳಗೆ ನಮ್ಮನುಕಾವ ಭಗವತ್ಪಾದ ಗುರುಗಳು ಬಾದರಾಯಣ ದೇವಸಹಿತಾಗಿ।

ಬದರಿಕಾಶ್ರಮದೊಳಗೆ ಗಂಗಾಮೂಲದಲಿ ಮನೆಮಾಡಿ ಬೋರೆಯಮರದ ನೆಳಲೊಳಗಿಹರು ಲೋಕೋದ್ಧಾರಗೈವ್ರತಲಿ ||

ನಾವು ಗೈದಿಹ ಪರಿಮಳಾದಿಗಳಿರುವನಕ ಸಶರೀರದೊಳು ನಾವಿರುವಂತೆ ಭಗವತ್ಪಾದಗುರುಗಳ ಭಾಷ್ಯ ಮೊದಲಾದಖಿಳಶಾಸ್ತ್ರಗಳ | ಕಾಯ್ದು ಕೊಂಡಿಹ ಭಾರವನು ನಮಗಿತ್ತು ಅಶ್ವತ್ಥಾಮರಿಂದದ ನಿರೂಪಣೆ ಮಾಡಿ ಕಳುಹಿದರು ||

ಹರಿಗುರುಗಳಪ್ಪಣೆಯ ಶಿರದಲಿ ಧರಿಸಿ ನಾವಿರುತಿಹೆವು ಭೂಲೋಕದಲಿ ನೀನಿದನರುಪದಿರು ಪರರಿಗೆ–ಅಶ್ವತ್ಥಾಮಮುನಿವರರು ನಮ್ಮ ಭಕ್ತರಭೀಷ್ಟ ವೆಲ್ಲವ ಸಲಿಸಿ ಕೊಟ್ಟುದ್ಧರಿಸುತಿಪ್ಪರು ನಮ್ಮ ಮಧ್ವಾಚಾರ್ಯರಪ್ಪಣೆಯಂತೆ ನಡೆಯುವರು ||

ಹಲವು ಮಾತಿಂದೇನು ಫಲ ಭಾರತದ ಭೂಪ್ರದಕ್ಷಿಣೆ ಸುಖದಿ ಪೂರೈ ಸುತ್ತ ಸುಖದೊಳಗೆ | ಮರಳಿ ನಮ್ಮನು ಕಾಂಬ ಸಮಯದೊಳೆಲ್ಲವನು ಪೇಳುವೆವು ಬ್ರಹ್ಮ ಸರಸ್ವತಿಯ ವೈವಾಹಕಥನವ ಬರೆವುದೆಂದಪ್ಪಣೆಯ ನೀಡಿದರು ||

ಇದು ಮಹಾದ್ಭುತ ಕಥೆಯು ಬ್ರಹ್ಮಾಂಡದ ಪುರಾಣದಿ ಬ್ರಹ್ಮ ನಾರದ ರಿಂಗೆ ಸಂವಾದದಲಿ ಶೋಭಿಸುತ ಇರುತಿಹುದು | ನೀನದನು ಬರೆದಿಡು ನಮ್ಮ ಹಿರಿಯರು ಷಾಷ್ಟಿಕೋತ್ತಮರಾಳಿ ಬಾಳಿದ ಸಕಲ ವಂಶಾವಳಿಯ ಸಹಿತಾಗಿ ||

ಎಂದು ಕೊಟ್ಟರು ತೀರ್ಥವನು ಶಿರದಲಿ ಧರಿಸಿ ಕುಡಿದೆನು ಬಳಿಕ ನನ್ನಯ ಹದನೆ ಬೇರಾಯ್ತು | ಅದನು ಪೇಳುವಡೆನಗೆ ತಿಳಿಯದು ದೇವ ದೂತರು ಕಣ್ಣುಗಳ ತೆರೆವಂತೆ ಪೇಳ್ದರು ಕಂಡೆನದ್ಭುತ ದಿವ್ಯ ತೇಜವನು ||

ನಾನು ಕಲಿಕತ್ತೆಯೊಳು ನಮ್ಮಯ ಬ್ರಾಹ್ಮಣೋತ್ತಮರಿಪ್ಪ ಸ್ಥಳದಿ ನಿವಾಸವನು ಗೈದೆನು ಗುರುದಾಸ್‌ಬಾನರ್ಜಿ ಎಂಬುವ ಪಂಡಿತೋತ್ತಮರು |

ಆವರು ಸುಪ್ರೀಂ ಕೋರ್ಟಿನಲಿ ಹಿಂದೂ ಧರ್ಮಶಾಸ್ತ್ರವ ನ್ಯಾಯಾಧೀಶರಿಗೆ ಬೋಧಿಸಿ ಪಾರ್ಶಿಯಲಿ ತರ್ಜುಮೆಗೈದು ಪೇಳುವರು ||

ನನ್ನನವರ ಸಹಾಯಕಿಟ್ಟರು ದಿನಕೊಂದು ಯಾವುವು ನ್ಯಾಯಾಸ್ಥಾನ ದಲಿ ಸೇವೆಯನು ಬಹಳ ಕಷ್ಟದೊಳಿಲ್ಲವನು ನಿರ್ವಹಿಸಿಕೊಳ್ಳುತಲಿರ್ದ ಗುರು ವರರಾಘವೇಂದ್ರರ ಘನಕೃಪಾಬಲದಿ ||

ಅಲ್ಲಿ ಮಧ್ವಾಚಾರ್ಯವರ್ಯರು ನಮ್ಮ ಗುರುವರವ್ಯಾಸರಾಯರು ಗೈದಿರುವ ಘನಕಾರ್ಯದದ್ಭುತಕಥಾಬೇಳಂಬ ವಿಸ್ತಾರವನು ವರ್ಣಿಸಲು। ಒಂದು ನಾಲಿಗೆ ಮಾನವನಿಂಗೆ ಸಾಧ್ಯವೆ ಸಾಸಿರ ನಾಲಿಗೆಯ ಶೇಷಂಗಸಾಧ್ಯವು ವೇದಮಂತ್ರಗಳವರಮುಖ್ಯಪ್ರಾಣರನ್ನುತ ಹೊಗಳಿ ಬಾಯಾರುವುದು ಸತ್ಯವು ಬಳಿತ್ಥಪವಮಾನಾದಿ ಸೂಕ್ತದ ವೇದ ಮಂತ್ರದಲಿ ||

ನಾನು ಕಲ್ಕತ್ತೆಯೊಳು ಇಂಗ್ಲೀಷ್ ಭಾಷೆಯನು ಕಲಿಯಲ್ಕೆ ಸಮಯವು ಬಂದಿತನಿವಾರ್ಯದಲಿ ರಾಜಕಾರ್ಯದ ಹಲವು ಕಾರಣದಿ। ಸಕಲಕಾರ್ಯ ವ್ಯವಹರಣೆಯಲ್ಲವು ಪಾರ್ಶಿಯಲಿ ತಾನಿರ್ದುದಾದರೆ ಹಲವು ಇಂಗ್ಲೀಷಿನಲಿ ತರ್ಜುಮೆ ಮಾಳ್ಪ ಕೆಲಸಗಳಿರುತಲಿರ್ದವು ಅದು ಪರಾಶ್ರಯದಿಂದ ನಡೆವುದು ಬಹಳ ಸಂಕೋಚದಲಿ ತೆಂಡಿತು ನನ್ನ ಮನಸಿಂಗೆ ||

ಎಂಟುಲಕ್ಷದ ಜನ ಸಮೂಹವನುಳ್ಳ ಭಾರಿಯ ನಗರ ಕಲ್ಕತ್ತಾ ಪಟ್ಟಣ ವದಕೆ ಹೌರಾ ಎಂಬುವದು ಶಾಖಾನಗರವಾಗಿಹುದು। ಅದರೊಳು ಚೌರಂಗಿ ಎಂಬುವ ಸ್ಥಳದೊಳಗೆ ಮನೆ ಮಾಡಿ ಇಂಗ್ಲೀಷ್ ಭಾಷೆ ಕಲಿಸುವ ಮುಖ್ಯೋ ಪಾಧ್ಯಾಯರಿದ್ದರು ಕಪಾರ್ ಸಾಹೇಬರೆಂಬುವರು ||

ಆವರ ಬಳಿಯಲಿ ಹೂಣ ಭಾಷೆಯ ಕಲಿತು ಸ್ಟಾಂಡರ್ಡ್ ಎಂಬ ಪರೀಕ್ಷೆ ಯಲಿ ಉತ್ತಮ ತರಗತಿಯ ತೇರ್ಗಡೆ ಹೊಂದಿದೆನು ವಾಚಾ ಪರೀಕ್ಷೆಯ ಕಾಲ ದಲಿ। ಮಾಸ್ಟರೆನಿಸಿದ ಕಪಾರೆಂಬುವರು ತಾವೇ ಬಂದು ಕೂತರು ನನ್ನ ನೋಡುತ ನಗುತ ಮಾತಾಡಿದರು ತಾವಾಗಿ ||

ನನ್ನ ಹೆಸರಿನ ನಾಮದುಚ್ಚಾರಣೆಯು ನೀಸರಿಯಾಗಿ ಮಾಡಿದೆಯಾದೊಡೆಯು ವಿದ್ವಾಂಸನೆನಿಸುವೆ ಹೂಣ ಭಾಷೆಯಲಿ । ಬಳಿಕಲೆಲ್ಲವ ಪೇಳುವೆನು ನೀಕೇಳೆಂದು ಕೇಳಿದರೆನ್ನನಾಗಲು ಅವರ ನಾಮಕೆ ಸೇರ್ದ ಅಕ್ಷರಗಳನು ಪೇಳುತಲಿ ॥

Cuparo ಎಂಬ ಅಕ್ಷರಗಳುಳ್ಳದು ನೆನ್ನ ಪೆಸರೆಂತೆಂದು ಪ್ರಶ್ನೆಯು ಮೊದಲದಾಗಿತ್ತು ಕೇಳ್ದ ತಕ್ಷಣ ಉತ್ತರವು ನಾನಿತ್ತೆ । ಕೂಪಾರವೆಂಬುದು ನಿಮ್ಮ ಪೆಸರಾಗಿಹುದು ಸಂಸ್ಕೃತದೊಳಗೆ ಇದು ಸಮುದ್ರ ಪರ್ಯಾಯದಲಿ ಶೋಭಿಪುದು ॥

ಪೇಳ್ದ ಉತ್ತರ ಕೇಳಿ ಸಂತೋಷಿಸಿದರಲ್ಲದೆ ಯೋಗ್ಯತಾಪತ್ರವನು ಕೊಟ್ಟರು ನಾನರಿಯದಂದದಿ ಬರದರಾಗಲು ಕುಂಪಣಿಯ ಸರ್ವಾಧಿಕಾರಿಗೆ ಗವರ್ನರ್ ಜನರಲ್ಲೆಂಬರಿಗೆ । ಅವರು ನಿನಗೆ ದಿವಾನ ಕೆಲಸನ ಕೊಡುವೆವೆಂದೆನ್ನುತ ದೇಶಗಳ ಪೆಸರುಳ್ಳ ಪಟ್ಟಿಯ ಕಳುಹಿದರು ಕ್ಲೋಸಾಖ್ಯಪ್ರಭುವರರಿಂಗೆ ತಕ್ಷಣದಿ ॥

ಅನತಿಕಾಲದಿ ನಮ್ಮ ಮೈಸೂರರಸರಿಗೆ ಸ್ವಾತಂತ್ರ್ಯ ವಹಿಸುತ ರಾಜ್ಯ ಕೊಡುವೆವು ನಮಗೆ ನಂಬುಗೆಯಾದವರು ಆಗೊಬ್ಬ ಮಂತ್ರಿ ಪದಾರ್ಹರಿರಬೇಕು । ನಿನ್ನನಾಕಾಲದಲಿ ನಾಮಾಂಕಿತವ ಗೈದಿಹೆನಲ್ಲದೆಯು ಮಾಸಾಶನವ ಹೆಚ್ಚಿಸಿ ಕೊಟಿಹೆನು ಪೋಗೆಂತೆಂದು ಪೇಳಿದರು ॥

ರುದ್ರಭಟ್ಟನು ಬರೆದಿರುವ "ಆರಾಧ್ಯವಂಶಾವಳಿ"ಯದೆಂಬುವ ನಾಲ್ಕು ಆಶ್ವಾಸಗಳ ಇನ್ನೂರ ಅರವತ್ತೈದು ಪದ್ಯಗಳ ವೃತ್ತ ಕಂದಗಳಿಂದ ಕೂಡಿದ ಘನತರದ ಚಂಪೂಕಾವ್ಯದ ರೂಪದಿ ವಿಮಲ ಚರಿತೆಯನು ॥

ಇವುಗಳಲ್ಲದೆ ನಮ್ಮ ಗುರುವರ ವ್ಯಾಸರಾಯರು ವಿಜಯೀಂದ್ರ ಗುರುಗಳು ಬರೆದಿರುವ ಪಾಶ್ಚಿಕರಿಂಗೆ ಸಂಬಂಧಿಸಿಹ ಚರಿತ್ರೆಯನು । ಬರೆದಿರುವೆ ನಲ್ಲದೆ ಬಹಮನಿಯ ಮಂತ್ರಿಪ್ರವರ ರಾಜ್ಯ ನಿಯಾಮಕನು ಗಂಗಾಧರನು

ಷಾಷ್ಟಿಕರ ಕುಲವಿಭೂಷಣ ತನ್ನ ವಂಶಾವಳಿಯು ಬರದಿಹನು ಅದು ಮರಾಠಾ ಭಾಷೆಯಲ್ಲಿಹುದು ||

"ಷಾಷ್ಟಿಕಾನ್ವಯಮಲ್ಲಿಕಾಸುಮನಿಚಯು"ವೆಂಬುದು ಪೆಸರು ಬರದವನು ಗೋದಾವರಿಯ ತೀರದ ಬ್ರಾಹ್ಮಣನು ಕೇಶವನೆಂದು ಪೆಸರಿದೆ ಗಣಿತ ಶಾಸ್ತ್ರ ವಿಶಾರದನು ಆಗಿನ ಹಲವು ಗ್ರಂಥಗಳವನು ಬರದಿಹನು ||

ಕೇಶವಿಯ ಪದ್ಧತಿಯುರೆಂಬುದು ಗಣಿತ ಶಾಸ್ತ್ರದೊಳೀಗ ದೈವಜ್ಞರಲಿ ಜ್ಯೋತಿಷ್ಕರಲಿ ದೊರೆವುದು । ಬಲ್ಲವರೆ ಬಲ್ಲರು ಬೆಲ್ಲದ ಸವಿಯನು ಸುರೆಯು ಸೇವಿಸುವಾತಗರಿವಹುದೆ ||

ಮೊದಲು ಗಂಗಾಧರನು ತನ್ನಯ ಬಂಧುವರ್ಗವ ಕಾಯ್ದುಕೊಂಡನು ಬಳಿಕ ಗುರುವರವ್ಯಾಸರಾಯರು ತಮ್ಮ ತನುಮನದಿವ್ಯಜ್ಞಾನಗಳು ಸಿದ್ಧಿಯನು ದಯಗೈದು ಇಹಪರವೆರಡರಲಿ ಸುಖದಿಂದ ಬಾಳುವತೆರನಗೈದರು ಘನಕೃಪಾ ಬಲದಿಂದ ಮಂತ್ರಾಲಯದಗುರುವರರು ಕಾಯುತ್ತಿಹರು ಮುಂದೇನಹುದೋ ಬಲ್ಲವರಾರು ಹರಿಕೃಪಾಬಲದಿ ||

ಮಧ್ವರಾಯರು ಗೈದ ಘನಸಿದ್ಧಾಂತವೆಲ್ಲವ ಮರಳಿ ಪುನರುದ್ಧಾರಗೈವರೆ ಅನುಪಮ ಸಮರ್ಥರ ಕಳುಹಬೇಕೆಂದನುತ ದೂರ್ವಾಸಾದಿ ಮುನಿವರರು । ಬದರಿಕಾಶ್ರಮಕ್ಕೈದಿ ವ್ಯಾಸರೂಪದ ಹರಿಯ ಬೇಡಲು ಮುಂದೆ ವಾಯುಪದಾರ್ಹರಾಗಿಹ ನಾಗರೂಪಿನ ಪೆಸರಧರಿಸಿಹ ಯೋಗಿವರ್ಯರ ಗುರುಗಳಾಗಿರಿಯೆಂದು ಕಳುಹಿದರು ||

ಚಂದ್ರಗಿರಿ ಶ್ರೀವಿಜಯನಗರದ ಚಕ್ರವರ್ತಿಗಳಾರುವಂದಿಗೆ ಪರಮ ಗುರುವೆಂದೆನಿಸಿ ತೊಂಭತ್ತೆರಡು ವರ್ಷಗಳು । ಜರೆಯಬಾಧೆಯನರಿಯ ದಂದದಿ ಬ್ರಹ್ಮಚರ್ಯದೊಳಿರ್ದು ಭೀಷ್ಮಾದಿಗಳಿಗಿಮ್ಮಡಿಯಾಗಿ ಕೀರ್ತಿಯ ಗಳಿಸಿ ಮೆರೆಯುವ ವ್ಯಾಸರಾಯರ ಬಿಡದೆ ನುತಿಸುವೆನು ||

ವ್ಯಾಸರಾಯರೆ ರಾಘವೇಂದ್ರರು ಮಧ್ವಶಾಸ್ತ್ರವ ಕಾಯುತಿಹರನವರತ ಮಂತ್ರಾಲಯದಿ ವೃಂದಾವನದಿ ಮನೆ ಮಾಡಿ । ತರಣಿಚಂದ್ರಮ ರಾಮ

ಚರಿತೆಗಳಿರುವತನಕ ನೀವಿದಕೆ ಕರ್ತರು ಕಾಯ್ದುಕೊಂಡಿಹುದೆಂದು ವೇದವ್ಯಾಸ ದೇವರು ಅಪ್ಪಣೆಯನಿತ್ತಿಹರು ||

ಪಶ್ಚಿಮದಿ ಗುರುವ್ಯಾಸರಾಯರ ಶಿಷ್ಯರಾಗಿಹ ಮರುದ್ಗಣಕೆ ಸೇರಿರುವ ಪ್ರವಾಹಮಾರುತದೇವರೆಂಬರು ಹಯವದನರೂಪದ ಹರಿಯ ಪೂಜಿಸುತ। ವಾದಿ ರಾಜರ ಪೆಸರಿನಿಂ ಮೆರೆಯುತ್ತ ಸೋದೆಯಲಿ ಘನತರಮಾದ ವಿದ್ಯಾಪೀಠ ರಚನೆಯ ಗೈದು ಬಹುವೃತ್ಪತ್ತಿ ಬರುತಿಹ ತೆರನ ಮಾಡ್ದರು ಬಹಳೈಶ್ವರ್ಯ ಸಂಪದದಿಂದಲಂಕಾರವನು ಮಾಡುತ ಇಷ್ಟ ದೇವರಿಗೆ ||

ಮಧ್ವರಾಯರು ಮೂಲಮುಖ್ಯಪ್ರಾಣರೆಂಬುದು ವೇದಸಮ್ಮತ ಗುರು ಶ್ರೀವ್ಯಾಸರಾಯರು ವಾಯುಪದಾರ್ಹರಾಗಿಹ ನಾಗನಾಮಕಪ್ರಾಣಯೋಗೀಶ್ವ ರರು ವಾದಿರಾಜರು ಪ್ರವಹಮಾರುತ ದೇವರೆಂಬುದನು । ವಾಯು ಪೌರಾ ಣೇಕ ಗ್ರಂಥದಿ ಪದ್ಮಪುರಾಣದಲಿ ಪೇಳಿಹುದು ಸಾವಿತ್ರಿಯ ಕಥೆಯನೋದಿ ದೊಡೆಗೊತ್ತಹುದು ಆಕೆಯ ಪತಿ ಸತ್ಯವಾಹನೆ ಶ್ರೀವಾದಿರಾಜರು ಪ್ರವಹ ಮಾರುತಪ್ರಾಣದೇವರದೆಂಬ ಕಥನವನು ||

ಕಾಲವಶದಲಿ ವಿಜಯನಗರವು ಸೂರೆಯಾಯಿತು ಗುರುಶಿರೋಮಣಿ ವ್ಯಾಸರಾಯರ ಶಿಷ್ಯರೆನಿಸಿದ ಶ್ರೀನಿವಾಸರು ನಿಜನಿವಾಸವನೊದೆದು ಹಾಯ್ದರು ಕುಂಭಕಾಪುರಕೆ । ಅಲ್ಲಿ ಶ್ರೀವಿಜಯೀಂದ್ರಗುರುಗಳು ಇವರೊಡನೆ ವೈಭವ ದಿಂದ ಹಿಂದಿನ ದುಃಖ ಮರೆವುತದಿನವ ನೂಕುತಲಿರ್ದರನುದಿನವು ||

ರಾಮರಾಜನ ಬಳಿಕ ತತ್ಸಂತತಿಯು ಕವಲೆರಡಾಗಿ ಪೆನಗೊಂಡೆಯಲಿ ಓರ್ವರು ಚಂದ್ರಗಿರಿಗೋರುವರು ಇಬ್ಬರು ಸೇರ್ದರಲ್ಲಲ್ಲಿ । ಒಂದು ಸಾವಿರ ದೊಂದುನೂರೈವತ್ತು ಆನೆಗಳಲ್ಲಿ ತಲೆಹೊರೆಯಾಗಿ ತಂದರು ಹಿರಿಯು ರಾರ್ಜನೆಗೈದ ಧನದಲಿ ಕೈಗೆ ಬಂದದನು ||

ಆಗ ಪ್ರತ್ಯಕ್ಷದಲಿ ನೋಡಿದ ಇಟಲಿದೇಶದ ವರ್ತಕಪ್ರತಿನಿಧಿಯು ವೆರ್ಸ್ ಎಂಬ ಲೇಖಕನು ರೋಮನರ ಭಾಷೆಯಲಿ ಬರದಿಟ್ಟಿಹನು । ಇಂಗ್ಲೀಷ್ ತರ್ಜುಮೆಯಾಗಿ ಬರೆದಿದೆ ಓದಿದೊಡೆ ಕಣ್ಣೀರು ತಾನೇ ಸುರೆದು ಪೋಪುದು

ಭಾರತದ ದುರ್ದೈವವಿಧಿಪಲಕೆ ॥

ಗುರುತ್ರಯದ ಪೆಸರಿನಲಿ★ ಮೂವರು ಗುರುವರೇಣ್ಯರ ಪಾದ ಪೂಜೆಯು ಗೈದು–ಮಾಧ್ವರು ಸರ್ವರೊಂದಾಗಿರುತ ಮೈತ್ರಿಯಲಿ ಶುಭ ಶುಭೇತರ ಕಾರ್ಯ ಸಮಯದಿ ಕಾಣಿಕೆಯನರ್ಪಿಸುತಿರ್ದರು ಗುರುಭಕ್ತಿ ಭಾವದಲಿ ॥

ಕೆಲರು ಉಡುಪಿಗೆ ಕೆಲರು ತಿರುಪತಿ ವೆಂಕಟೇಶಗೆ ಕಾಣಿಕೆಯನೀಡುವರು ಇದು ಬಹು ಪ್ರಾಚೀನ ಪದ್ಧತಿಯಿತ್ತು ಗುರು ಯೋಗಿಗಳ ವಿದ್ವದ್ರತ್ನ ಷಾಷ್ಟಿಕ ಕುಲಶಿಖಾಮಣಿಯು ನಮ್ಮ ಮಂತ್ರಾಲಯ★ ಸುಧೀಂದ್ರರು ಇದು ಬಹಳ ಶಾಶ್ವತದಿ ನಡೆವಂದದಲಿ ಗೈದರುಪಾಯವಂದನು ಸಕಲ ಜನಮೆಚ್ಚೆ ॥

ಬಹುಜನರು ವೈದಿಕರು ಪಂಡಿತರಿಹರು ಇವರನು ಗುರುತರದಿ ಕಾಣುವುದು ಮರ್ಯಾದೆಯಲಿ ಜೀವನ ನಡೆಸಿ ಕಾಯುವುದು । ಇದಕುಪಾಯವ ಮಾಳ್ಪೆವೆನ್ನುತ ತಿರುಪತಿಯ ಬ್ರಹ್ಮೋತ್ಸವದಿ ಪರ್ಯಾಯದಲಿ ಉಡುಪಿಯು ಕೃಷ್ಣ ಸನ್ನಿಧಿಯೊಳಗೆ ಮುಳುಬಾಗಲಲಿ ಗುರುಗಳ ಪ್ರತಿ ವರುಷದಾರಾಧನೆಯು ಕಾಲದಿ ಪರಿಷನ್ಮಂಡಲಿಯು ಸೇರಿಸುತ ಸಂಭಾವನೆಯು ಕೊಡುವಂತೆ ॥

ಚಂದ್ರಗಿರಿಯೊಳಗಿರ್ದ ರಾಯರ ಸಂತತಿಯು ದೊರೆಯಾಗ ಶಾಸನ ಗೈದು ಕೊಟ್ಟರು ತಿರುಪತಿಯು ಶ್ರೀವೆಂಕಟೇಶನ ದಿವ್ಯ ಸನ್ನಿಧಿಯು ಬ್ರಾಹ್ಮಣರ ಪರಿಷತ್ತು । ದೇವಾಲಯದ ಕಾಣಿಕೆಯಿಂದ ನಡೆಯಲಿ ಮತತ್ರಯದ ವಿದ್ಯಾರ್ಥಿ ಪಂಡಿತರೆಲ್ಲರಿಗೆ ಪ್ರತ್ಯೇಕ ಭಾವದಲಿ ॥

ಮೊದಲು ದೇವಾಲಯದ ಅಧ್ಯಕ್ಷತೆಯು★ ಬೆಟ್ಟಾಚಾರ್ಯರಿಗೆ ತಾನಿತ್ತು

---

★ಶ್ರೀಪಾದರಾಯರು, ವ್ಯಾಸರಾಯರು ಮತ್ತು ರಾಘವೇಂದ್ರಸ್ವಾಮಿಗಳು

★ಶ್ರೀಸುಧೀಂದ್ರತೀರ್ಥರು ಕ್ರಿ.ಶ ೧೫೮೪ ರಿಂದ ೧೬೧೪ರವರೆಗೆ ಆಳಿದ ವೆಂಕಟಪತಿರಾಯನಿಗೆ ಗುರುಗಳು.

★ಶ್ರೀಗಳಾದ ಪುರುಷೋತ್ತಮತೀರ್ಥರು ಬ್ರಹ್ಮಣ್ಯತೀರ್ಥರು ಸ್ವರ್ಣವರ್ಣ ತೀರ್ಥರು ಶ್ರೀಪಾದರಾಯರು ಸುರೇಂದ್ರತೀರ್ಥರು ಈ ಐವರೂ ಅಣ್ಣತಮ್ಮಂದಿರು ಅಲ್ಲದೆ ಬೆಟ್ಟಾಚಾರ್ಯಸಂತತಿಗೆ ಸೇರಿದವರು. ಶ್ರೀಪಾದರಾಯರ ತರುವಾಯ ಅವರ ಶಿಷ್ಯರಾದ ಶ್ರೀವ್ಯಾಸರಾಯರು ಚಂದ್ರಗಿರಿಯ ಸಾಳವನರಸಿಂಹನಿಗೆ ಗುರುಗಳಾದರು. ಆಗ ತಿರುಪತಿಯ ದೇವಾಲಯದ ಆಡಳಿತವು ಅವರಿಗೆ ಸೇರಿತು.

ತರುವಾಯದಲಿ ಗುರುಗಳು ವ್ಯಾಸರಾಯರಿಗೆ ಇದು ಸಮರ್ಪಿತವಾಯ್ತು ಭಾಷ್ಯಕೆ ದೀಪಿಕೆ ಬರೆದಿರುವ ಶ್ರೀಜಗನ್ನಾಥತೀರ್ಥರ ಕಾಲಪರ್ಯಂತ ||

ಕಾಳಹಸ್ತಿಯ ರಾಜರಿಗೆ ದೇವಾಲಯದ ಸರ್ವಾಧಿಕಾರವನೀಗಲಿತ್ತರು ಗತವರ್ಷ ಜಗನ್ನಾಥತೀರ್ಥರು ಕುಂಭಕೋಣೆಯಲಿ । ಪ್ರಾಕೃತ ದೇಹವನು ಬಿಸುಡುತ ಪರಮ ಪದವಿಯ ಸೇರ್ದ ಕಾರಣದಿಂದ ಮಹಾಮಾತೆಯಲಿ ನಿತ್ಯವು ದೂರುತಿಪ್ಪನು ವ್ಯಾಸರಾಯರ ಪೀಠವಿಂತಾಯ್ತೆನುತ ನಿತ್ಯದಲಿ ||

ತೊರವೆ ನರಹರಿದೇವಗಂಕಿತಮಾಡುತ್ತ ರಾಮಾಯಣವ ಬರೆದಾತನು ಪುರಂದರದಾಸರಳಿಯನು ಕಿರಿಯಮಗಳನು ಕೊಟ್ಟರಾತನಿಗೆ । ಭಾರತದ ಕಥನವನು ಬಹುಮಟ್ಟದಲಿ ಚಿತ್ರಿಸಿ ಗುರುವರೇಣ್ಯರು ವ್ಯಾಸರಾಯರಿಗಿತ್ತವನು★ ಕುಮಾರವ್ಯಾಸ ಗದುಗಿನ ವೀರ ನರಯಣನು ||

ಇವನು ಮೊದಲದ್ವೈತಿ ಬಬ್ಬೂರಿನ ಕಮ್ಮೆ ಕುಲದವನು ಅಶ್ವತ್ಥಾಮ ಗುರುಗಳ ದರ್ಶನಗೈದು ಭಾರತದ ರಚನೆಯನು ಪೂರೈಸಿ ಗುರು ವ್ಯಾಸರಾಯರಿಗಿತ್ತು ಮುದ್ರಾಧಾರಣಾದಿಗಳಿಂದ ಶಿಷ್ಯನದಾಗಿ ಶೋಭಿಸಿದ ||

---

★ಕನ್ನಡ ಮಹಾಭಾರತದ ಪ್ರತಿ ಪರ್ವದ ಪರಿಸಮಾಪ್ತಿಯಲ್ಲಿ ಗ್ರಂಥಕರ್ತನು "ಇತಿ ಶ್ರೀಮದಚಿಂತ್ಯಮಹಿಮ ಗದಗುವೀರನಾರಾಯಣಚರಣಾರವಿಂದಮಕರಂದ ಮಧುಪಾನಪುಷ್ಪವಚಃ ಷಟ್ಪದಿ ನಿಕಾಯ ಶ್ರೀಮತ್ಕುಮಾರವ್ಯಾಸ ಯೋಗೀಂದ್ರವಿರಚಿತಮಪ್ಪ ಕರ್ನಾಟಕಭಾರತಕಥಾಮಂಜರಿಯೊಳ್" ಎಂದು ತನ್ನ ಬಿರುದನ್ನು ಒಕ್ಕಣಿಸಿದ್ದಾನೆ. ನಾರಣಪ್ಪನು ಗೃಹಸ್ಥನಾಗಿದ್ದುದರಿಂದ ಅವನು ತನ್ನ ಗುರುಗಳಾದ ಶ್ರೀವ್ಯಾಸಯೋಗೀಂದ್ರರ ಪವಿತ್ರನಾಮವನ್ನು ಉಚ್ಚರಿಸಿದ್ದಾನೆ. "ಶ್ರೀಮತ್ಕುಮಾರ ವ್ಯಾಸ ಯೋಗೀಂದ್ರ" ಎಂಬುದಕ್ಕೆ "ಶ್ರೀವ್ಯಾಸಯೋಗೀಂದ್ರಕುಮಾರ" ಎಂದು ಕುಮಾರ ವಾಲ್ಮೀಕಿಯು ವ್ಯಾಖ್ಯಾನ ಮಾಡಿರುತ್ತಾನೆ. ನಾರಣಪ್ಪನು ಶ್ರೀವ್ಯಾಸರಾಯರ ಸಮಕಾಲೀನನಾಗಿದ್ದನಾಗಿ ಅವನು ಈ ಗ್ರಂಥವನ್ನು ತನ್ನ ಗುರುಗಳಾದ ಶ್ರೀವ್ಯಾಸರಾಯರಿಗೆ ಸಮರ್ಪಣೆ ಮಾಡಿದ್ದಾನೆ.

ಗಂಗರಾಜರು ಶುದ್ಧ ಕನ್ನಡದವರು ಇವರೊಳು ವ್ಯಾಸರಾಯರ ಹಿರಿಯ ರೆಲ್ಲರು ಮಂಡಲೀಕತೆಯುನಳವಡಿಸಿ ಸಾಮಂತ ಪದವೀಧರರೆನಿಸಿ ಬಾಳಿದರು ಬನ್ನೂರೊಳಗೆ ಮನೆ ಮಾಡಿ । ಬಳಿಕ ವಿದ್ಯಾನಗರ ಮುಳಬಾಗಲು ತಿರುಪತಿ ಚಂದ್ರಗಿರಿ ಮೊದಲಾದ ಸ್ಥಳಗಳನಾವರಿಸಿ ಬಾಂಧವ ವೃಂದ ಕರ್ನಾಟಕವನೆಲ್ಲವ ತುಂಬಿ ತುಳುಕುತಲಿ ॥

ಗಂಗರಾಜನು ಬರೆದ ಶಾಸನವೊಂದರೊಳಗೀ ರೀತಿ ವಕ್ಕಣಿಸುತ್ತ ಬರೆದಿಹ ವಲ್ಲಭದೇವನೆಂಬುವ ಊರಿಗೊಕ್ಕಲು ಇವರು ವಕ್ಕಲತನಕೆ ದೊರೆಗಳು ಅರಸರಿಗೆ ಗುರುತರದ ಮಂತ್ರೀಶ್ವರರು ಗುರುಗಳ ಗುರುಗಳಾಗಿಹರೀಗ ಆರವತ್ತೊಕ್ಕಲೆಂಬುವರು ॥

★ಇವರಿಗಾಬನ್ನೂರು ಮೊದಲಾಗಿರ್ದ ಜಹಗೀರುಗಳು ಬಹಳವ ರಾಜರಿತ್ತರು ಹಿಂದಿನ ರಾಜರು ಕೃತಜ್ಞತೆ ಬಹಳ ಹಿರಿದಾಗಿತ್ತು ಇದರ ಜೊತೆಯಲಿ ಮಾಂಡಲಿಕತನ ಸಹಿತ ಕೊಟ್ಟರು ಶ್ರೀಧರದೇವಸಂತತಿಗೆ । ಇವರ ವಂಶದಳೊಬ್ಬವತಿಪ್ರಖ್ಯಾತನಿದ್ದನು ಬಹಮನಿ ರಾಜ್ಯದಲಿ ಸರ್ವಾಧಿಕಾರದ ರಾಜಪ್ರತಿನಿಧಿ ಗೋವಿಂದದೇವನದೆಂದು ಪೆಸರವಗೆ ॥

---

★In page 466 of the Report of all India Oriental Conference held on 31-12-35. Professor : A.M. Siddigi M.A., L.L.B., of Usmania University says as follows.

Fharistee tells us that the Hindus never joined the Mohamedan service but they had rather Considered it as a national degradation. The liberal policy was advanced in subsequent reign. In the next reign of Mohamed Sharieff. We come across a hindu named Govindadev who was incharge of a province which was a higher office of the state.

ಹೆಮ್ಮೆಯಲಿ ಈ ಮಾತನಾಪೇಳ್ದವನಲ್ಲವು ಕಳಲೆ ಲಕ್ಷ್ಮಣ ಪಂಡಿತನ ನಾನರಿಯೆ ಬರಹದೊಳಾತನಿರ್ದುದನರಿದುಕೊಂಡಿಹೆನು । ಶಾಸನವ ತಲಕಾಡು ಬಳಿಯೊಳಗೀಗ ಕಾಣಲುಬಹುದು ಮಳಲಲಿ ಹೂತುಕೊಂಡಿದೆ ವಿಘ್ನೇಶ್ವರನ ದೇವಾಲಯದ ಮಂದಿರದಿ ||

ರಾಮದೇವನು ಮಂಡಲಾಧಿಪ ತುಂಡೀರಮಂಡಲದೊಳಗೆ ಆತನ ನಿಜ ನಿವಾಸಗ್ರಾಮ ಬಸ್ನೂರು। ಅವರ ಮಕ್ಕಳೊಳೋರ್ವವಲ್ಲಭ ಸುಮಂತ್ರ ಎಂಬ ರಿಗೆ ವರದಿಂದ ಘನಕುಮಾರರು ಪುಟ್ಟಿದರು ವ್ಯಾಸಯೋಗಿಗಳು ||

ವ್ಯಾಸಯೋಗಿಯಚರಿತೆ ಬರೆದಿಹ ಸೋಮನಾಥನು ಉಭಯಭಾಷಾ ಭಿಜ್ಞ ಕನ್ನಡ ಸಂಸ್ಕೃತೋಕ್ತಿಯಲಿ । ದೇಶ್ಯತದ್ಭವವೆರಡ ಸೇರಿಸಿ ವಲ್ಲಭ ಸುಮಂತ್ರಿಯ ಪೆಸರ ಬಳ್ಳಿಣಸುಮತಿಯೆಂಬುವ ನಾಮದಿಂ ಬರೆದಿಹನು ಪಂಡಿ ತರೋದಿಕೊಳ್ಳುವುದು ||

ಪಲ್ಲವರ ರಾಜಧಾನಿಯು ಘನತರದ ಪ್ರಖ್ಯಾತ ನಗರವು ಕಂಚಿಯು ಪಲ್ಲವ ರಾಜರನು ತಾಗೆಲಿದ ಸಾರ್ವಭೌಮರ ವೀರಕಂಠೀರವನು ಕೃಷ್ಣಾಖ್ಯ । ವ್ಯಾಸ ರಾಯರು ದೊರೆಯ ಗುರುಗಳು ತಮ್ಮ ಮರ್ಯಾದಿಸುವ ತೆರದಲೆ ಪಲ್ಲವರರಸ ರನು ಗೌರವಿಸಿ ಕಾಂಬುದೆನುತ್ತರಾಯಸ ಬರದು ಕಳುಹಿದರು ||

ಕೃಷ್ಣರಾಯನ ಗುರುಭಕುತಿ ವರ್ಣಿಸಲು ಸಾಧ್ಯವೆ ಮದುವೆಗೈತಂದಿರುವ ಬೀಗರ ಕಾಣುವಂದದಲಿ ವಿದ್ವಿಷರ ಸೆರೆಯಾಳ ಮನ್ನಣೆಗೈದು ಆಲಿಂಗನದಿ ಹೊಂಪುಳಿಯಾಗಿ ಗುರುಗಳ ಪಾದವೆರಡನು ಆನಂದಾಶ್ರುಜಲದಿಂ ಸೇಚನವಗೈ ವುತ್ತ ತನುವನು ಮರೆದು ನೆಲದಲಿ ಹೊರಳಿದನು ಕೃಷ್ಣನ ಕಂಡವಿದುರನು ಮರಳಿ ಬಂದಂತೆ ॥

ಪಲ್ಲವನು ರಾಜ್ಯವನು ಕೃಷ್ಣ ಸಾರ್ವಭೌಮನಿಗಿತ್ತು ಕೋಶಾಗಾರ ಭಂಡಾರಗಳು ಸಹಿತಾಗಿ । ವನವಸಾರುವ ರಾಮನಂದದಿ ಅರಮನೆಯ ಬಿಟ್ಟೈದಿ ಸತಿಯಳು ಸಹಿತ ಗುರುಗಳು ವಾಸಗೈವಾಶ್ರಮವ ಸೇರಿದನು ॥

ಆಗಲಾತಗೆ ಧರ್ಮಬೋಧೆಯಗೈದು ನೀನೇ ರಾಜ್ಯಭಾರವ ಹಸ್ತೀಶ್ವರನ ಮಿತ್ರನದಾಗಿ ಕಪ್ಪವನು । ಅಲ್ಪಕಾಣಿಕೆಯಿತ್ತು ರಾಜ್ಯವನಾಳಬೇಕೆಂದೆನುತ ಶಾಸನ ಪೊಯಿಸಿಕೊಟ್ಟರು ಸಕಲರಾಜ್ಯವನು ॥

★ಆಗಲಾತನು ತನ್ನ ಭಂಡಾರವನು ತನ್ನೊಳಗಿರ್ದ ರಾಜ್ಯದ ಸಕಲ ಧನ ಸಹಿತ । ಪರವನಿತ್ತು ಗುರುವರೇಣ್ಯರ ಪೆಸರನಿಕ್ಕುತ ವರದರಾಜನ ಘನತರದ ದೇವಾಲಯುವನಿರ್ಮಿಸಿದ ॥

ಆದರೊಳಗೆ ತಿರುಪತಿಯು ದೇವಾಲಯುದ ತೆರದಲೆ ಅಗ್ರಪೂಜೆಯು ಅಗ್ರತೀರ್ಥವು ಸಕಲ ದೇವಾಲಯುವು ಗುರುವರರ ಘನತರದ ಆಡಳಿತ ಗಾಂಭೀರ್ಯದಲಿ ನಡೆಯುಬೇಕೆನುತ ಶಾಸನ ಪೊಯಿಸಿ ಕಟ್ಟಲೆಗೈದು ಕೊಟ್ಟಿಹನು ॥

ವಂಗದೇಶಕೆ ವಳಿತವಾಗಿಹ ಪುರಾತನ ಮಗಧರಾಜ್ಯವ ಕರೆವರೀಗ ಬಿಹಾರವೆನುತಲಿ ಆದರೊಳು ವಾಸವಾಗಿರುವ ವುತ್ಕಲಕೆ ಒರಿಸ್ಸಾ ರಾಜ್ಯಕಧಿ

---

★The Madras Epigraphist says as follows in para 45 of his report for 1919–20 :—

"In no. 370 of 1919, we get the Information that the madhvateacher paramahamsaparivrajaka charya vyasathirtha, the disciple of Brahmanya Thirtha, secured from the King the village of pulambakkam, in padaividu Rajya for conducting the Avani Festival in his own name, of God varada Raja and also got the kings sanction for presenting a Seshavahana of gold which has to be used as a vehicle of the God on the fourth day of the festival."

ಪತಿಯಾದ ಈಶ್ವರಪೂರಿ ಎಂಬುವನು ಯವನರುಪಟಳ ತಾಳಲಾರದೆ ರಾಜ ಪ್ರತಿನಿಧಿಯೆನಿಪ ಪದವಿಯು ನೊದೆದನೆಡಗಾಲಿಂದ ರಾಜರ ಭಯುವ ತೊರೆವ್ರತ ಷಾಷ್ಟಿಕಕುಲಶಿರೋಮಣಿ ಜಯತೀರ್ಥಾಖ್ಯ ಗುರುವಂತೆ ||

★ಅದುವೆ ಸಮಯುಕೆ ಬಂದರಲ್ಲಿಗೆ ರಾಜೇಂದ್ರಾಖ್ಯಗುರುಗಳ ಸೋದರರು ಜಯಧ್ವಜತೀರ್ಥರೆಂಬುವ ಯೋಗಿಪಂಚಾನನರು ಶಿಷ್ಯರ ಸಹಿತ ಗಯಾ ಕ್ಷೇತ್ರವನು ನೋಡಲಿಕೆ । ಇವರ ಶಿಷ್ಯತ್ವವನು ವಹಿಸುತ ವಂಗದೇಶದೊಳೆಲ್ಲ ಮಧ್ವಾಚಾರ್ಯವರ್ಯರ ಮಧ್ವಸಿದ್ಧಾಂತವನವನು ಹರಡಿದ ವೃತ್ಕಲ, ವಂಗ, ಮಗಧ ಕೋಸಲ ರಾಜ್ಯದೊಳು ಹರಡಿತು ಪ್ರಯಾಗ, ಕಾಶೀನಗರ, ಗಯಸಹಿತ ||

ಸೂರಿ ಎಂಬುದು ವೇದದೊಳು ಪಂಡಿತರಿಗಿಹ ಪೆಸರು ಇದೇ ಶಬ್ದವನು

---

★Rai Saheb Dinesh chandrasen, on his chaitanya and his companions "Throws a great deal of Vaishnavisim of madhavaschool in Bengal."

He says at poge 297 "it was to the madhva sect that Bengal owes her great vaishnava faith culminating point of which was reached in the life of chaitanya. We find in the Bhakti Ratnakara that vishnupuri a disciple of Jayadharma of the tenth leader of this sect, popularised the Bhagavata amongst the Bengalis about the middle of the 13th century by his celebrated sanskrit work called the Bhakti Ratnavali. This seems to be the first impetus to vaishnavisim that came from madhi order in Bengal.

ಪಾಳಿಯೆಂಬ ಭಾಷೆಯೊಳು ಪೂರಿ ಎಂಬ ಅಪಭ್ರಂಶ ತದ್ಭವವಾಯ್ತು ಈಶ್ವರ ಪೂರಿ ಎಂಬುವನು ಪರಾಣರ ರಾಜಪ್ರತಿನಿಧಿಯುವನರ ಲೂಟಿ ಕೊಲೆಗಳಿಗಿವನು ಮನದೊಳು ನೊಂದು ತನ್ನಯ ಪದವಿಯನು ತ್ಯಜಿಸಿದನು ಸಂನ್ಯಾಸವನು ಸ್ವೀಕರಿಸಿ ||

★ಗುರುಜಯಧ್ವಜರ ನಾನಾ ಪೆಸರಿನಿಂ ಕರೆಯುವರು ಶಿಷ್ಯರು ಭಕ್ತಿಭಾವದಿ ಇವರ ಆಶ್ರಮನಾಮ ಜಯಧ್ವಜತೀರ್ಥರೆಂಬುವುದು । ಇವರು ಭಾಗವತಕೆ ವ್ಯಾಖ್ಯಾನವನು ಬರೆದರು ಕೃಷ್ಣಭಕ್ತಿಗೆ ಇದೇ ಉತ್ತರದೇಶ ಆರ್ಯಾವರ್ತ ದೇಶ ದೊಳೆಲ್ಲ ಮೆರೆವುದು ಈಗ ವಿಜಯಧ್ವಜೀಯವೆಂಬುವರು ||

---

* ಮಾಧ್ವಗುರುಪೀಳಿಗೆಯಲ್ಲಿ ಟೀಕಾಚಾರ್ಯರೆಂಬ ಅನ್ವರ್ಥನಾಮದಿಂದ ಪ್ರಖ್ಯಾತ ರಾದ ಶ್ರೀ ಜಯತೀರ್ಥರಿಗೆ ಮೂವರು ಶಿಷ್ಯರು· ಶ್ರೀ ರಾಜೇಂದ್ರತೀರ್ಥರು, ಶ್ರೀ ಜಯಧ್ವಜತೀರ್ಥರು ಮತ್ತು ಶ್ರೀ ವಿದ್ಯಾಧಿರಾಜತೀರ್ಥರು. ಆದರೆ ಈ ಗುರುಪೀಳಿಗೆ ಯನ್ನು ಯಾವುದೋ ಕಾರಣಗಳಿಗಾಗಿ ವ್ಯತ್ಯಾಸ ಮಾಡಿರುತ್ತಾರೆ. ಅದು ಈ ರೀತಿ ಇದೆ: "ಜಯತೀರ್ಥರಿಗೆ ವಿದ್ಯಾಧಿರಾಜರೆಂಬ ಶಿಷ್ಯರಿದ್ದರು. ಇವರು ಮೊದಲು ರಾಜೇಂದ್ರ ರಿಗೂ ಅನಂತರ ಕವೀಂದ್ರರಿಗೂ ಸನ್ಯಾಸಾಶ್ರಮವನ್ನಿತ್ತರು" ಶ್ರೀ ರಾಜೇಂದ್ರತೀರ್ಥರ ಹಾಗೂ ಶ್ರೀ ಜಯಧ್ವಜತೀರ್ಥರ ಗುರುಗಳು ಶ್ರೀ ಜಯತೀರ್ಥರೆಂಬುದನ್ನು ಈ ಮೊದಲೆ ಸ್ಥಿರಪಡಿಸಿದ್ದೇವೆ. ಇನ್ನು ಈ ಕವೀಂದ್ರತೀರ್ಥರ ವಿಚಾರವನ್ನು ವಿವೇಚನಮಾಡತಕ್ಕದು ಉಳಿದಿದೆ ಈ ಕವೀಂದ್ರತೀರ್ಥರೆಂಬುವರು ರಾಜೇಂದ್ರತೀರ್ಥರ ಸಮಕಾಲೀನರಲ್ಲ. ಇವರು ವಿದ್ಯಾಧಿರಾಜರ ಶಿಷ್ಯರೆಂದು ಒಪ್ಪುವುದಕ್ಕೆ ಆಗಲಾರದು. ಏಕೆಂದರೆ ನವ-ವೃಂದಾವನಗಳಲ್ಲಿ ಒಂದರಲ್ಲಿ ದೇಹವಿಟ್ಟಿರುವ ಈ ಕವೀಂದ್ರರು ಶ್ರೀ ವ್ಯಾಸರಾಯ-ಸ್ವಾಮಿಗಳ ನೆಚ್ಚಿನ ಶಿಷ್ಯರು. ಸೋಮನಾಥಕವಿಯಿಂದ ವಿರಚಿತವಾದ "ಶ್ರೀ ವ್ಯಾಸ-ಯೋಗಿ ಚರಿತಮ್" ಎನ್ನುವ ಚಂಪೂಕಾವ್ಯದ ೭೨ನೇ ಪುಟದಲ್ಲಿ "ಸ್ವಾಮಿನ್, ಭಗವ-ದನುಕಂಪನೀಯ ಶಿಷ್ಯಕುಲಾವತಂಸಶ್ಚತುರಶೀತಿಲೇಖನಿನಿರಂತರವಿಲೇಖನಕ್ರಿಯಾ-ಕ್ಷಮಮುಜ್ಜೃಂಭಣವಾಗುಗ್ಗುಂಭನವೈಭವಸ್ಯತಾದೃಶಸೋಮನಾಥಕವಿರ್ಭವದೀಯ-ಚರಣಸರಸೀರುಹಸಿಷೇವಿಷಯಾ ಸಮಾತತ್ಯಾಂತೇವಸತಃ ನ್ಯಯುಂಜಂತಸ್ಸೇವಾಯ್ಯೈ ಭಗವತ್ಪಾದೋಡವಸದೋ ವಿದ್ವನ್ ಕವೀಂದ್ರಯತಿನಾಮಾಂತೇವಸತಾ ನಿವೇದಿತವತಾ ಸ್ನೇಹಾತ್ಪುರಸ್ಕೃತ್ಯ ಆನೀತಃ" ಎಂದಿದೆ. ಹದಿನಾಲ್ಕನೆಯ ಶತಮಾನದ ಮಧ್ಯಭಾಗ ದಲ್ಲಿದ್ದರೆಂಬ ಕವೀಂದ್ರತೀರ್ಥರು ಪಂಪಾಕ್ಷೇತ್ರದಲ್ಲಿರುವ ನವವೃಂದಾವನದಲ್ಲಿ ತಮ್ಮ ಪ್ರಾಕೃತದೇಹವನ್ನು ಬಿಟ್ಟರೆಂಬುದನ್ನು ಐತಿಹಾಸಿಕದೃಷ್ಟಿಯಿಂದ ನಂಬಲಾಗುವುದಿಲ್ಲ.

ಇವರಿಗೆ ಪೆಸರುಗಳು ಜಯಧ್ವಜತೀರ್ಥ ವಿಜಯಧ್ವಜರು ಜಯ ಧರ್ಮಾಭಿಸಂಜ್ಞರು ಗುರುದೇವ ಜಯದೇವ ಭಟ್ಟಾಚಾರ್ಯರಿಂತೆಂದು. ಒಬ್ಬರೊಬ್ಬರು ಗುರುವರರ ಕೊಂಡಾಡುತಿರ್ಪರು ಭಕ್ತಿ ಪ್ರಧಾನವೆನಿಸಿದ ಮಧ್ವಾಚಾರ್ಯವರ್ಯರ ಮಧ್ವ ಸಿದ್ಧಾಂತವನು ಸಂಬಿಹರು ॥

ನಾನು ಚರಿಸಿದ ದೇಶದೇಶದಿ ದಿನಚರಿ ವರ್ತಮಾನವ ಬರೆದಿಹೆನು ಆಂಗ್ಲೇಯ ಭಾಷೆಯೊಳಿದನು ಡೈರಿಯೆಂದು ಕರೆಯುವರು । ಕಾವ್ಯ ಬರೆಯಲು ಹೊತ್ತು ಸಾಲದು ದೊರೆತ ಕಾಲದೊಳಾವ ವಿಷಯವ ಬರೆಯುವೆನೊ ಅದನು ಹರಿಗುರುಗಳಪ್ಪಣೆಯಂತೆ ಬರೆದಿಹೆ ಅನ್ಯತ ವಾಕ್ಯದ ಕಟ್ಟು ಕಂತೆಗಳಲ್ಲ, ಗುರುವರ ರಾಘವೇಂದ್ರರು ದೇವದೂತರ ಮೂಲಕದಿ ಪ್ರತ್ಯಕ್ಷದಲ್ಲಿ ಕೊಟ್ಟ ಅಪ್ಪಣೆಯು ॥

---

ಏಕೆಂದರೆ, ಆ ಕಾಲದಲ್ಲಿ ವಿಜಯನಗರದಲ್ಲಿ ಸಂಗಮವಂಶದ ರಾಜರು ಆಳುತಲಿದ್ದರು. ಅವರಿಗೆ ವಿದ್ಯಾರಣ್ಯರೂ ಅವರ ತರುವಾಯ ಶೃಂಗೇರಿಯ ಶಂಕರಾಚಾರ್ಯರ ಮಠದ ಅಧಿಪತಿಗಳೂ ಗುರುಗಳಾಗಿದ್ದರು. ಶ್ರೀ ಅಕ್ಷೋಭ್ಯತೀರ್ಥರು ಈ ಕಾರಣಕ್ಕಾಗಿಯೇ ಆ ಸ್ಥಳವನ್ನು ಬಿಟ್ಟು ತಮ್ಮ ಕಾರ್ಯಕ್ಷೇತ್ರ ವಿಸ್ತರಣಕ್ಕೆ ಅನುಕೂಲವಾತಾವರಣದಿಂದ ಕೂಡಿದ್ದ ಮಲಖೇಡಕ್ಕೆ ಹೋಗಿ ನೆಲಸಿದರು ಇವರ ತರುವಾಯ ಮಾಧ್ವಯತಿಗಳಲ್ಲಿ ಯಾರೊಬ್ಬರೂ ೧೩೦ ವರ್ಷಗಳಷ್ಟು ದೀರ್ಘಕಾಲ ವಿಜಯನಗರಕ್ಕೆ ಪ್ರವೇಶಿಸಲಿಲ್ಲ. ಚಂದ್ರಗಿರಿಯ ಸಾಳುವ ನರಸಿಂಹನು ಶ್ರೀಪಾದರಾಯರ ನಮ್ರ ಶಿಷ್ಯರಲ್ಲಿ ಮೊದಲನೆಯವನು. ಅವನು ಕ್ರಿ ಶ. ೧೪೮೫ರಲ್ಲಿ ಸಂಗಮವಂಶದ ವಿರೂಪಾಕ್ಷನನ್ನು ಪದಚ್ಯುತನನ್ನಾಗಿ ಮಾಡಿ ಒಡನೆಯೇ ಆ ಸಾಮ್ರಾಜ್ಯದ ಸಿಂಹಪೀಠವನ್ನು ಆರೋಹಣಮಾಡಿದನು. ಆಗ ಚಂದ್ರಿಕಾಚಾರ್ಯರು ತಮ್ಮ ಗುರುಗಳ ಆಣತಿಯಂತೆ ಸಾಮ್ರಾಟರ ಕುಲಗುರುಗಳಾಗಿ ವಿಜಯನಗರದಲ್ಲಿ ತಮಗಾಗಿ ನಿರ್ಮಿತವಾಗಿದ್ದ ಲೋಕಪಾವನಮಠದಲ್ಲಿ ನೆಲಸಿದರು. ಇವರು ಅರ್ಧಶತಮಾನದಷ್ಟು ದೀರ್ಘಕಾಲ ಇಂದ್ರನಿಗೆ ಬೃಹಸ್ಪತಿಯು ಹೇಗೋ ಹಾಗೆ ಆರು ಮಂದಿ ಚಕ್ರವರ್ತಿಗಳಿಗೆ ಮಂತ್ರಾಲೋಚಕರೂ ಕುಲಗುರುಗಳೂ ಆಗಿ ಸಾಮ್ರಾಜ್ಯದ ಏಳಿಗೆಗೆ ಸಹಾಯಮಾಡಿದರು. ಈ ದೀರ್ಘಕಾಲಾವಧಿಯಲ್ಲಿ ಅನೇಕ ಮಾಧ್ವಯತಿಗಳು ವಿಜಯನಗರಕ್ಕೆ ಬಂದು ಅಲ್ಲಿ ತಮ್ಮ ಜೀವಿತವನ್ನು ಕಳೆದರು. ಅಲ್ಲದೆ ಅಲ್ಲಿನ ನವವೃಂದಾವನಾಖ್ಯಕ್ಷೇತ್ರದಲ್ಲಿ ಶ್ರೀ ವ್ಯಾಸರಾಯರೂ ಅವರ ಶಿಷ್ಯರಾದ ಗೋವಿಂದ ಒಡೆಯರೂ ಶ್ರೀನಿವಾಸತೀರ್ಥರೂ ಕವೀಂದ್ರತೀರ್ಥರೂ ಹದಿನಾರನೆಯ ಶತಮಾನದಲ್ಲಿ ವೃಂದಾವನ ಪ್ರವೇಶಮಾಡಿದರು. ಇದರಿಂದ ಹದಿನಾಲ್ಕನೆಯ ಶತಮಾನದಲ್ಲಿ ಕವೀಂದ್ರತೀರ್ಥರ ಹೆಸರಿನ ಬೇರೊಬ್ಬ ಯತಿಗಳಿರಲಿಲ್ಲವೆಂಬುದು ನಿರ್ವಿವಾದ ವಿಷಯವಾಗಿದೆ.

ವಂಗಮಾಗಧಿಪ್ರಾಕೃತಿಭಾಷೆಯು ಪಾಳೀಭಾಷೆಯಲಿ ಬರೆದಿಹ ಹಲವು ಗ್ರಂಥಗಳೀಗ ದೊರೆತಿವೆ, ವಿಶ್ವಂಭರನೆಂಬ ಬ್ರಾಹ್ಮಣಬ್ರಹ್ಮಚಾರಿಯು ಈಶ್ವರ ಪೂರಿಯೆಂಬುವರ ಶಿಷ್ಯನಾದನು ಇವನು ಮಾಧ್ವನು ಚೈತನ್ಯದೇವನೆಂಬುವ ಪೆಸರ ಧರಿಸಿದ ಗೌರಾಂಗನೆಂಬುದು ಇವನಿಗಿಹ ಪೆಸರೊಂದು ಇವನು ತಾರ್ಕಿಕ ವ್ಯಾಸರಾಯರ ಬಳಿಗೈದಿ ವಿಜಯನಗರದಿ ಮಾಧ್ವವೇದಾಂತವನು ಓದುತ ಶಿಷ್ಯನಾಗಿಹನು ||

---

ಇನ್ನು ಭಾಗವತಕ್ಕೆ ವ್ಯಾಖ್ಯಾನವನ್ನು ರಚಿಸಿರುವ ಶ್ರೀ ವಿಜಯಧ್ವಜತೀರ್ಥರು ಯಾರೆಂಬುದನ್ನು ಕೂಲಂಕಷವಾಗಿ ವಿಚಾರಮಾಡೋಣ. ಇವರು ಪ್ರತಿ ಸ್ಕಂಧದ ಪರಿ-ಸಮಾಪ್ತಿಯಲ್ಲಿ "ಇತಿ ಶ್ರೀಮದ್ಭಾಗವತೋತ್ತಮ ಮಹೇಂದ್ರತೀರ್ಥಶ್ರೀಪಾದಶಿಷ್ಯ-ವಿಜಯಧ್ವಜತೀರ್ಥಭಟ್ಟಾರಕವಿರಚಿತಾಯಾಂ" ಎಂದು ಮುಂತಾಗಿ ತಮ್ಮ ಪರಿಚಯವನ್ನು ಮಾಡಿಕೊಟ್ಟಿದ್ದಾರೆ. ಇವರು ಹದಿನಾಲ್ಕನೆಯ ಶತಮಾನದ ಮಧ್ಯಕಾ: ದಲ್ಲಿದ್ದವರು. ಶ್ರೀ ಜಯತೀರ್ಥರು ಅದೇ ಕಾಲದಲ್ಲಿ ವಿರಾಜಮಾನರಾಗಿದ್ದರು. ಇವರಿಗೆ ರಾಜೇಂದ್ರತೀರ್ಥರು ಮತ್ತು ಜಯಧ್ವಜತೀರ್ಥರು ಎನ್ನುವ ಹೆಸರಿನ ಇಬ್ಬರು ಶಿಷ್ಯರಿದ್ದರು. ಇವರಲ್ಲಿ ಒಬ್ಬರಾದ ಶ್ರೀ ರಾಜೇಂದ್ರತೀರ್ಥರ ವೃಂದಾವನವು ಕುಂಭಕೋಣೆಯಲ್ಲಿದೆ. ಮತ್ತೊಬ್ಬರಾದ ಜಯಧ್ವಜತೀರ್ಥರು ಉತ್ತರ ಹಿಂದೂಸ್ಥಾನಕ್ಕೆ ಹೋಗಿ ಅಲ್ಲಿ ಇಳಿಮುಖದಲ್ಲಿದ್ದ ದ್ವೈತಮತವನ್ನು ವೃದ್ಧಿಗೊಳಿಸಿದರು. ಇವರು ಉತ್ತರ ಹಿಂದೂಸ್ಥಾನದಲ್ಲಿ ಚಿರಕಾಲ ಪ್ರವಾಸಮಾಡಿ ಆ ದೇಶದ ಆಚಾರ ವಿಚಾರಗಳನ್ನು ಚನ್ನಾಗಿ ಅರಿತವರಾಗಿದ್ದರೆಂಬುವ ಬಗ್ಗೆ ಅವರಿಂದ ರಚಿತವಾದ ಶ್ರೀಮದ್ಭಾಗವತವ್ಯಾಖ್ಯಾನದಲ್ಲಿ ಸಾಕಷ್ಟು ನಿದರ್ಶನಗಳಿವೆ. ಭಾಗವತ ದಶಮಸ್ಕಂಧದ ೨೧ನೆಯ ಅಧ್ಯಾಯದ ೧೧ನೆಯ ಶ್ಲೋಕಕ್ಕೆ "ಅನ್ಯೇಮಾಂಸ ವಿಶೇಷಾಃ ಸೋಮಾದಿ ದ್ರವ್ಯವಿಶೇಷಾಶ್ಚ ದೇಶಾವಸ್ಥಾನುಸಾರತಃ ಶುಧ್ಯಂತ ಶುಧ್ಯಂತಿಹಿತಥಾಹಿ-ಮಾಂಸವಿಶೇಷಾವಿಂಧ್ಯಾದುತ್ತರದೇಶೇ ಶುದ್ಧಾಃ ದಕ್ಷಿಣ-ದೇಶೇತ್ವಶುದ್ಧಾಃ||" ಎಂದು ವ್ಯಾಖ್ಯಾನಮಾಡಿದ್ದಾರೆ. ಇದರಿಂದ ಇವರು ಕನ್ಯಾಕುಮಾರಿಯಿಂದ ಹಿಮಾಲಯ ಪರ್ವತದವರೆವಿಗೂ ಸಂಚಾರಮಾಡಿ ಈ ಉಭಯದೇಶಗಳ ಶ್ರೌತ-ಸ್ಮಾರ್ತ ಸದಾಚಾರಗಳನ್ನು ತಿಳಿದವರಾಗಿದ್ದು ಆ ತಮ್ಮ ಅನುಭವವನ್ನು ಭಾಗವತ-ವ್ಯಾಖ್ಯಾನದಲ್ಲಿ ಯುಕ್ತ ಸಂದರ್ಭಗಳಲ್ಲಿ ಉಪಯೋಗಿಸಿ ಭಗವದ್ಭಕ್ತರಿಗೆ ಚಿರಸ್ಮರಣೀಯವಾದ ಉಪಕಾರವನ್ನು ಮಾಡಿದ್ದಾರೆ. ಇವರನ್ನು ಉತ್ತರ ಹಿಂದೂಸ್ಥಾನದಲ್ಲಿ ಜಯಧ್ವಜ-ತೀರ್ಥರು, ಜಯಧರ್ಮತೀರ್ಥರು, ವಿಜಯಧ್ವಜತೀರ್ಥರು, ಗುರುದೇವ, ಜಯದೇವ ಭಟ್ಟಾಚಾರ್ಯ ಈ ಮುಂತಾದ ನಾಮಗಳಿಂದ ಸ್ತುತಿಸಿದ್ದಾರೆ. ಅಪರೋಕ್ಷಜ್ಞಾನಿಗಳೂ ಶಾಪಾನುಗ್ರಹಶಕ್ತರೂ ತಪಸ್ವಿಗಳೂ ಆಗಿದ್ದರಾಗಿ ಇವರಿಗೆ ಭಟ್ಟಾಚಾರ್ಯರೆಂಬ ನಾಮವು

ಆಗ ಗುರು ಪೂಜೆಯನು ಮಾಧ್ವರು ಮಾಡಿ ಶ್ರೀಪಾದಾರ್ಯಗುರು ಶ್ರೀವ್ಯಾಸರಾಯರು ರಾಘವೇಂದ್ರರನು । ಪೂಜಿಸುತ ಕಾಣಿಕೆಯ ಕೊಡುತಿ ಹರದನು ಪರಿಷನ್ಮಂಡಲಿಗೆ ಕಳುಹಲು ಕೆಲವರ ನಿಯಮಿಸಲಾಯ್ತು ಪ್ರತಿ ಸ್ಥಳದಿ ॥

ಕಳಲೆ ಲಕ್ಷ್ಮಣಸೂರಿ ಬರೆದಿಹ ಮುಂದೆ ಹೇಳುವ ಶ್ಲೋಕವೆರಡನು ನಾನದ ಚಿತ್ರಿಸುತ ಪುನರಪಿಯು ಪೇಳುವೆನು । "ನಮಃ ಶ್ರೀಪಾದರಾಜಾಯ ನಮಸ್ತೇ ವ್ಯಾಸಯೋಗಿನೇ । ನಮಃ ಪುರಂದರಾರ್ಯಾಯ ರಾಘವೇಂದ್ರಾಯ ತೇ ನಮಃ ॥"

---

ಬಂದಿತು. ಶ್ರೀ ಜಯತೀರ್ಥರು ಇಂದ್ರಾಂಶಸಂಭೂತರೆಂಬುದು ಮಾಧ್ವಮತಾನುಯಾಯಿಗಳ ನಂಬಿಕೆ ಇದನ್ನು ಗಮನಕ್ಕೆ ತಂದುಕೊಂಡು ಇವರು ತಮ್ಮ ಗುರುಗಳನ್ನು ಪಾರಿಭಾಷಿಕವಾಗಿ ಮಹೇಂದ್ರತೀರ್ಥರೆಂದು ಉಚ್ಚರಿಸಿದ್ದಾರೆ ಇನ್ನು ಮಾಧ್ವ ಗುರುಪೀಳಿಗೆಯ ಪರಿಪಿಡಿಯಲ್ಲಿ ಜಯ ಎನ್ನುವ ಪೂರ್ವ ಪದಕ್ಕೆ ಪ್ರತಿಯಾಗಿ ವಿಜಯ ಎನ್ನುವ ಪದಪ್ರಯೋಗ ಮಾಡಿರುವುದಕ್ಕೂ ಪ್ರತ್ಯೇಕ ನಿದರ್ಶನಗಳಿವೆ ಈ ಅಭಿಪ್ರಾಯವನ್ನು ಸ್ಥಿರಪಡಿಸತಕ್ಕ ಶ್ಲೋಕವನ್ನು ಇಲ್ಲಿ ಪಾಠಕರ ಅವಗಾಹನೆಗಾಗಿ ಉಲ್ಲೇಖಿಸಲಾಗಿದೆ ಗುರುಗುಣಸ್ತವದಲ್ಲಿ

"ಶ್ಲೋ॥ ವ್ಯಾಸೇನವ್ಯುಪ್ತಬೀಜಃ ಶ್ರುತಿಭುವಿ ಭಗವತ್ಪಾದಲಬ್ಧಾಂಕುರಶ್ರೀಃ ಪ್ರತ್ರೈರೀಷತ್ಪ್ರಭಿನ್ನೋಽಜನಿ ಜಯಮುನಿನಾ ಸಮ್ಯಗುದ್ಭಿನ್ನಶಾಖಃ । ಮೌನೀಶವ್ಯಾಸರಾಜಾದುದಿತಕಿಸಲಯಃ ಪುಷ್ಪಿತೋಽಯಂ ಜಯೀಂದ್ರಾದದ್ಯ ಶ್ರೀರಾಘವೇಂದ್ರಾದ್ವಿಲಸತಿ ಫಲಿತೋ ಮಧ್ವಸಿದ್ಧಾಂತಶಾಖೀ ॥'' ಎಂದಿದೆ

ಈ ಶ್ಲೋಕದಲ್ಲಿ ಮಾಧ್ವಗುರುಪೀಳಿಗೆಯ ಮುಕುಟಪ್ರಾಯರಾದ—ಶ್ರೀವಿಜಯೀಂದ್ರತೀರ್ಥರನ್ನು "ಜಯೀಂದ್ರ''ರೆಂದು ಕರೆದಿರುವುದು ಗಮನಾರ್ಹವಾಗಿದೆ. ಅಮರಕೋಶಕಾರರು "ವಿಜಯೋ ಜಯಃ'' ಎಂದು ಅರ್ಥ ಬರೆದಿದ್ದಾರೆ. ಇದರಿಂದ ವಿಜಯ ಮತ್ತು ಜಯ ಎಂಬ ಎರಡು ಪದಗಳೂ ಒಂದೇ ಅರ್ಥವನ್ನು ಕೊಡತಕ್ಕವುಗಳಾಗಿವೆ. ಆದುದರಿಂದ ಶ್ರೀಮದ್ಭಾಗವತಕ್ಕೆ ಅತ್ಯುತ್ತಮವಾದ ವ್ಯಾಖ್ಯಾನವನ್ನು ರಚಿಸಿದ ಮಹಾನುಭಾವರು ಶ್ರೀಜಯಧ್ವಜತೀರ್ಥರೆಂಬುದು ಪ್ರಬಲ ನಿದರ್ಶನಗಳಿಂದ ಸ್ಥಿರಪಟ್ಟಿದೆ. ಈ ವಿಚಾರದಲ್ಲಿ ಸ್ವಾರ್ಥಪರರಾದ ಕೆಲವರು ಹರಡಿರುವ ದಂತಕಥೆಯು ನಂಬಲನರ್ಹವಾಗಿದೆ.

★ಗುರುಶ್ರೀಪಾದರಾಜಾಯ ವ್ಯಾಸಯೋಗಿಮಹಾತ್ಮನೇ। ಪ್ರತ್ಯಕ್ಷಕೀರ್ತಿ ಮಾಪನ್ನ ರಾಘವೇಂದ್ರ ಮಹಾಮುನೇ ॥ ಸೂರಿಗ್ರಂಥದ ಮಂಗಳಾಚರಣೆಯ ಮೊದಲಲಿ ಐದನೆಯ ಶ್ಲೋಕವು ಪರಿಸಮಾಪ್ತಿಯ ಕೊನೆಗೆ ಈ ಶ್ಲೋಕ ॥

ಕುಂಭಕಾಪ್ರುರವರದಿ ನೆಲಸಿರುವ ಗುರುಗಳಿಬ್ಬರು ವ್ಯಾಸರಾಯರ ರಾಘವೇಂದ್ರರ ಹೆಸರನಿಟ್ಟಹ ವಿದ್ಯಾಪೀಠ ರಚನೆಯಲಿ। ಹಲವು ಶಿಷ್ಯರ ಸಕಲ ವಿದ್ಯಾಪರಿಣತರ ಗೈವೃತ್ತಿ ಜೀವನವಿತ್ತು ಕಾಪಾಡುವರು ನಮ್ಮನು ಅವರು ಲಕ್ಷಿಸರು॥

---

★ಕ್ರಿ. ಶ ೧೭೩೪–೧೭೬೬ರ ವರೆವಿಗೆ ಮೈಸೂರು ದೇಶವನ್ನು ಆಳಿ ಕೀರ್ತಿ ಶೇಷರಾದ ಇಮ್ಮಡಿ ಕೃಷ್ಣರಾಜಒಡೆಯರ ಆಸ್ಥಾನಪಂಡಿತನಾಗಿದ್ದ ಕಳಲೆ ಲಕ್ಷ್ಮಣಸೂರಿ ಎಂಬಾತನು ವಿದ್ಯಾರಣ್ಯರಿಂದ ರಚಿತವಾದ "ಕುಲದೀಪಿಕೆ" ಎನ್ನುವ ಗ್ರಂಥವನ್ನು ಸಮರ್ಥನೆಮಾಡಿ "ಋಷಿವಂಶ ಚೂಡಾಮಣಿ" ಎನ್ನುವ ಒಂದು ಕಾವ್ಯವನ್ನು ರಚಿಸಿದ್ದಾನೆ. ಇದು ಸಂಸ್ಕೃತಭಾಷೆಯಲ್ಲಿದೆ. ಒಟ್ಟು ಶ್ಲೋಕಗಳ ಸಂಖ್ಯೆ ೩೪೫. ೧೯ನೆಯ ಶತಮಾನದ ಆರಂಭದಲ್ಲಿದ್ದ–ರಾಘುವೇಂದ್ರಕವಿಯು ಈ ಗ್ರಂಥವಿದ್ದ ಸ್ಥಳಗಳನ್ನು ಈ ರೀತಿ ಗುರ್ತಿಸಿದ್ದಾನೆ. ೧. ಅರಮನೆಯ ಪುಸ್ತಕ ಭಂಡಾರ. ೨. ಪರಕಾಲಮಠ ೩. ಕುಂಭಕೋಣೆಯ ಶ್ರೀವಿಜಯೀಂದ್ರಸ್ವಾಮಿಗಳ ಮಠ ೪ ಶೃಂಗೇರಿಯ ಮಠ. ೫. ಉಡುಪಿಯ ಮಠ. ಈ ಲಕ್ಷ್ಮಣಸೂರಿಯ ಪುತ್ರ ವೆಂಕಟಭಟ್ಟನು ಆ ಕಾಲದಲ್ಲಿ ಮೇಲುಕೋಟೆಯಲ್ಲಿ ಪುರಾಣ ಹೇಳುತಲಿದ್ದನೆಂತಲೂ ಅತನ ಬಳಿ ಮೂಲಪ್ರತಿ ಇದ್ದಂತೆಯೂ ಸಾರಸ್ವತಪರಿಣಯವೆಂಬ ಕಾವ್ಯದಲ್ಲಿ ಬರೆದಿದ್ದಾನೆ ಈ ಲಕ್ಷ್ಮಣ ಸೂರಿಯ ಕಾಲದಲ್ಲಿ ಮಾಧ್ವರು ಶ್ರೀಪಾದರಾಯರು ಶ್ರೀವ್ಯಾಸರಾಯರು ಮತ್ತು ಶ್ರೀರಾಘವೇಂದ್ರಸ್ವಾಮಿಗಳು ಇವರಿಗೆ ಗುರುತ್ರಯರೆಂಬ ಹೆಸರಿನಿಂದ ವಿಶೇಷ ಉತ್ಸವ ಕಾಲಗಳಲ್ಲಿ ಪೂಜೆ ಮಾಡುತಲಿದ್ದರೆಂದು ಆತನ ಗ್ರಂಥದಲ್ಲಿ ಉಕ್ತವಾಗಿದೆ.

ಶ್ರೀಮುಷ್ಣಮಹಾತ್ಮ್ಯೆಯೆನ್ನುವ ಬೇರೊಂದು ಪ್ರಾಚೀನ ಗ್ರಂಥದಲ್ಲಿ ಶ್ಲೋ ॥ ಶ್ರೀಮಧ್ವಃ ಕಲ್ಪವೃಕ್ಷಶ್ಚ ಜಯಾಚಾರ್ಯಸ್ತು ಧೇನವಃ। ಚಿಂತಾಮಣಿಸ್ತುವ್ಯಾಸಾರ್ಯೋ ಮುನಿತ್ರಯಮುದಾಹೃತಂ ॥ ಎಂಬ ಉಕ್ತಿ ಇದೆ ಉತ್ತರ ಭಾರತ ನಿವಾಸಿಯೂ ನ್ಯಾಯಾಮೃತಸೌರಭ, ನ್ಯಾಯರತ್ನಾಕರ, ಅದ್ವೈತಸಿದ್ಧಿಖಂಡನ ಇತ್ಯಾದಿ ಉದ್ಗ್ರಂಥ ನಿರ್ಮಾತೃವೂ ಆದ ವನಮಾಲಿಮಿಶ್ರಮಹಾಶಯನು ತನ್ನಿಂದ ರಚಿತವಾದ ಮಧ್ವಮುಖಾಲಂಕಾರ ಎನ್ನುವ ಗ್ರಂಥರಾಜಿಯಲ್ಲಿ ಶ್ಲೋ॥ ಶ್ರೀಮನ್ಮಾರುತಮಾಚಾರ್ಯಂ ಮಾಯಿಮರ್ದನತತ್ಪರಂ। ಮುನೀಂದ್ರೋಪಾಸ್ಯಪಾದಾಬ್ಜಂ ಜ್ಞಾನಸಿಂಧುಂ ನಮಾಮ್ಯಹಂ ॥

ದೇಶದೇಶಾಂತರದ ಹಲವರು ಪಂಡಿತರು ತಚ್ಛಿಷ್ಯಕೋಟಿಯು ಗುರು ಗಳೀರ್ವರ ಸಾರುವುದು ಸರಿಯೋಗಲರಿಯದು ಎನುತ ಯೋಚಿಸಿ ಪೂರ್ಣ ಪ್ರಭುಗಳು ಬರದರುತ್ತರವಾಗ ಮಠತ್ರಯವೆಂಬ ನಾಮವು ಬಂದಿಹುದು ಗುರುಗಳಿಗೆಂದು ವಾಚಿಸುತ ||

ಆರಣಿಯ ಶ್ರೀಮಂತರಾಯರು ಪೂರ್ಣಯ್ಯನಮತವೆ ನಮ್ಮದೆನುತ್ತ ಬರೆದರು ಆಗ ಮಠತ್ರಯವೆಂಬ ನಾಮಕರಣವಗೈದ ಹೆಸರುಗಳ । ರಚನೆ ಯನು ಗೈವುತ್ತ ಸಮತಾ ಪಾದಪೂಜಾದಿಗಳು ಪ್ರಭುಗಳು ಮಾಧ್ವಮಠತ್ರಯಕೆ ನಡೆವಂತೆ ನಿರ್ಣಯಿಸಿದರು ದೊರಗಳಲಿ ||

ಇದೆ ವಿಚಾರವ ಸೂರಿ ಲಕ್ಷ್ಮಣಭಟ್ಟ ಬರೆದಿಹನದರೊಳಗೆ ತಂಜಾವೂರು ಮೊದಲಾಗಿರ್ದ ದ್ರಾವಿಡ ನಾಡ ಗೆಲಿದರು ಘನ ಮರಾಠರು ವಸತಿ ಗೈವುತ್ತ ರಾಜ್ಯವಾಳಿದರು । ರಾಜ್ಯಶಾಸನವೆಲ್ಲ ಮಹರಾಷ್ಟ್ರದಲಿ ಭಾಷಾ ಲೇಖನವು ತಾನಾಯ್ತು ಅಲ್ಲಿರುತಿರ್ದ ಬ್ರಾಹ್ಮಣರೆಲ್ಲ ಲೇಖನಿಯಿಂದ ಜೀವನ ಗೈವು ತಿರ್ದರು ಮಾಧ್ವರಾದರು ಶಕ್ತಿ ಪೂಜಿಸುತ ||

ಇವರು ವಿಜಯೀಂದ್ರರ ಮತ್ತು ಸುಧೀಂದ್ರರ ಶಿಷ್ಯರಾದರು ಮೊದಲು-ಗುರು ವರರು ಶಿಷ್ಯರ ಜೀವನಕೆ ಬೇಕಾಗಿರುವ ಸಹಾಯಗಳ ತಾವು ಮಾಡುತ ರಾಜರಿಂ ಕೊಡಿಸುತ್ತಲಿರ್ದರು ಕುಂಭಕಾಪುರವರವು ಗುರುಗಳ ಶಿರೋರತುನ ಶ್ರೀವ್ಯಾಸ ರಾಯರ ಸೋದರದಳಿಯ ಶಿಷ್ಯನು. ಶ್ರೀನಿವಾಸನು ಅಣ್ಣನ ಮಗನು ವಿಜಯೀಂದ್ರನು ಇವರೀರ್ವರಿಗೆ ಸ್ಥಳವಗೈವುತ್ತ ಕೊಟ್ಟರಚ್ಯುತಚಕ್ರವರ್ತಿಯ ಘನಸಮಕ್ಷಮದಿ ||

ಇದಕ್ಕೆ ಕಾರಣ ಅಲ್ಲಿ ರಾಜೇಂದ್ರರು ಮೊದಲೇ ಪ್ರಾಕೃತ ಕಳೇಬರವ ಬಿಟ್ಟು ವೈಕುಂಠಕ್ಕೆ ತೆರಳಿದರು ಇದುವೆ ವಸತಿಯಗೈದು ವಿದ್ಯಾಶಾಲೆ ಗುರುಗಳ ಪೀಠಗಳ ಆಶ್ರಮಗೈದುಕೊಂಡರು ಶ್ರೀನಿವಾಸರು ಆಪರಿಂಪಿಡಿದು ಎಂಟು ಮಾಸದ ಮೊದಲೇ ದೇಹವನುಳಿದ ಭಾಷ್ಯದೀಪಿಕೆ ರಚನೆಗೈದ ಜಗನ್ನಾಥ ತೀರ್ಥರ ತನಕ ನಡೆಯಿತು ವಿಪುಲಸಂಪದದಿ ||

★ಕಾಶಿಗುತ್ತರದೊಳಗೆ ಮಾಧ್ವರ ಪೆಸರು ಪೇಳಲು ನಮ್ಮ ಗುರುವರ ವ್ಯಾಸರಾಯರನಲ್ಲದರಿಯರು ಇದುವೆ ಪರ್ಯಂತ । ವ್ಯಾಸರಾಯರ ನಾಮ ವೆಂದರೆ ಅಭಿನವ ಶ್ರೀವ್ಯಾಸರಾದರು ಸತ್ಯದಲ್ಲಿ ನಾಕಂಡು ಕೇಳಿದ ಪರರು ಬರೆದಿಹ ಲೇಖನವ ನೋಡುತ್ತ ನಿರ್ಭೀತಿಯಲಿ ಪೇಳುವೆನು ॥

ವಿಜಯನಗರದ ಸಾರ್ವಭೌಮರ ರಾಜಗುರುವೆಂದೆನಿಸಿ–ಜಗವಿಖ್ಯಾತ ಸಾಹಸಿ ಕೃಷ್ಣದೇವನ ನಾಮ ಧರಿಸಿದ ಕೃಷ್ಣರಾಯಗೆ ಪ್ರಾಣವೆಂದೆನಿಸಿ । ವರ್ಷ ತೊಂಭತ್ತೆರಡು ಪರಿಯಂತರವು ಭುವಿಯೊಳಗಿರ್ದು ಕೀರ್ತಿಯ ದೇಹ ದಿಂಚಿರಜೀವಿಯಾಗಿಹ ವಿನ್ನ ಗುರು ವ್ಯಾಸರಾಯರ ಬಿಡದೆ ಕೊಂಡಾಡು ವೆನು ಪ್ರತಿದಿನದಿ ॥

---

★ಇದು ಅಕ್ಷರಶಃ ಸತ್ಯವಾದುದು. ಶ್ರೀವ್ಯಾಸರಾಯಸ್ವಾಮಿಗಳ ನ್ಯಾಯಾ ಮೃತಗ್ರಂಥವು ಅದ್ವೈತ ವಾದವನ್ನು ಆಮೂಲಾಗ್ರವಾಗಿ ಖಂಡಿಸಿದೆ. ಇದು ಹೊರ ಬಿದ್ದ ಕೂಡಲೇ–ಕಾಶೀವಾಸಿ ಮಧುಸೂದನಸರಸ್ವತಿ ಎಂಬುವರು–ಅದ್ವೈತಸಿದ್ಧಿಯೆ ನ್ನುವ ಗ್ರಂಥವನ್ನು ರಚಿಸಿದರು. ಶ್ರೀವ್ಯಾಸರಾಯರ ಜ್ಞಾತಿ ವರ್ಗಕ್ಕೆ ಸೇರಿದ ರಾಮಾಚಾರ್ಯರು–ಅದ್ವೈತಸಿದ್ಧಿಗ್ರಂಥವನ್ನು ದೂಷಿಸಿ–"ತರಂಗಿಣಿ" ಎನ್ನುವ ಶ್ರೇಷ್ಠವಾದ ಗ್ರಂಥವನ್ನು ಹೊರಗೆಡಹಿ ಸಂಸ್ಕೃತಭಾಷಾಸೇವೆಯನ್ನು ಮಾಡಿದರು. ಆಗ್ರಾ ಸಮೀಪದ ಮಧುರಾಪಟ್ಟಣಕ್ಕೆ ಪೂರ್ವ ದಿಕ್ಕಿನಲ್ಲಿ ತ್ರಿಯುಗಪುರವೆಂಬ ಗ್ರಾಮದಲ್ಲಿ ವಾಸವಾಗಿದ್ದ–ವನಮಾಲಿಮಿಶ್ರನೆಂಬ ಪಂಡಿತೋತ್ತಮನು ನ್ಯಾಯಾಮೃತ ತರಂಗಿಣೀ ಗ್ರಂಥದನ್ನು ರಚಿಸಿ ಅವುಗಳಲ್ಲಿ ಶ್ರೀವ್ಯಾಸರಾಯರ ಅಸದೃಶ ಪಾಂಡಿತ್ಯ ವನ್ನು ಮುಕ್ತಕಂಠದಿಂದ ಕೊಂಡಾಡಿದ್ದಾನೆ.

•

ಮಿಥಿಲಾದೇಶದ ಪಕ್ಷಧರನೆಂಬ ನ್ಯಾಯಶಾಸ್ತ್ರ ಪಾರಂಗತನು–ವ್ಯಾಸರಾಜರಿಂದ ಪರಾ ಜಿತನಾಗಿ ಹೀಗೆ ಹೇಳಿದ್ದಾನೆ. "ಶ್ಲೋ॥ ಯದಧೀತಂ ತದಧೀತಂ। ಯದಪ್ಯನಧೀತಂ ತದಪ್ಯ ಧೀತಮ್ । ಪಕ್ಷಧರವಿಪಕ್ಷಃ ನಾವೇಕ್ಷಿ ವಿನಾ ನವೀನವ್ಯಾಸೇನ" । ಪರಮ ಪೂಜ್ಯರಾದ ಶ್ರೀರಾಘವೇಂದ್ರಸ್ವಾಮಿಗಳು ಶ್ರೀಮನ್ನ್ಯಾಯಸುಧಾ ವ್ಯಾಖ್ಯಾನ ಪರಿಮಳ ದಲ್ಲಿ ಹೀಗೆ ಹೇಳಿದ್ದಾರೆ–ಶ್ಲೋಕ "ಪದವಾಕ್ಯ ಪ್ರಮಾಣಜ್ಞಾನ್ ಸಂಪ್ರದಾಯಾರ್ಥ ಕೋವಿದಾನ್ । ವ್ಯಾಸತೀರ್ಥಮುನೀನ್ ಸೇವೇ ದುರ್ವಾದಿಫಣಿಪಕ್ಷಿಪಾನ್ ।" ಅನೆಪ್ಪಾಜಾರ್ಯರು ವ್ಯಾಸರಾಜರ ತಾತ್ಪರ್ಯ ಚಂದ್ರಿಕಾ ಗ್ರಂಥವನ್ನು ಕುರಿತು

ಸತ್ತವರ ಕಥೆಯಲ್ಲ ಹೊತ್ತು ಹೋಗದೆ ಪುಂಡರಾಡುವ ಚಾಟು ವಾಕ್ಯವಿದಲ್ಲವೆಂದು ಚಾಮರಸಕವಿ ಪ್ರಭುಲಿಂಗಲೀಲೆಯೊಳ್ಪೇಳಿಹನು ನಾನದ ಮಗುಳೆ ಪೇಳುವೆ ಸಾರಸ್ವತದ ಪರಿಣಯು ಮಂತ್ರಾಲಯದ ಗುರುಗಳ ವಾಕ್ಯ ಷಾಷ್ಟಿಕಕುಲಕ್ರಮಾಗತ ಬಾಂಧವ ಪರಂಪರೆ ವರ್ಣಿಸುವ ವಂಶದ ವೃಕ್ಷವಲ್ಲದೆ–ಮಧ್ವ ಸಿದ್ಧಾಂತಕ್ಕೆ ಕಲ್ಪತರು ||

ಪಂಪ ಕವಿಕುಲದೀಪ–ಕುಮಾರವ್ಯಾಸ–ವ್ಯಾಸಯೋಗೀಂದ್ರ ಕುಮಾರನೆಂದೇ ಪೇಳಿಕೊಂಡಿಹ ಪ್ರತಿಪರ್ವದಂತ್ಯದಲಿ, ಈ ಕಾವ್ಯ ಬರೆವ ಮೊದಲೊಳು ವೀರ ಅಶ್ವತ್ಥಾಮಗುರುಗಳು ವರವನ್ನಿತ್ತರು – ಸುಜ್ಞಾನಲತೆ ಹಬ್ಬಿದುದು ಬರೆದಾಬಳಿಕ ಗುರುವರ ವ್ಯಾಸರಾಯರ ಸನ್ನಿಧಿಗದ ಸಮರ್ಪಿಸಿದ ||

ಪರಿಸಮಾಪ್ತಿಯ ಸಂಧಿಯೊಳು ನಾಲ್ಕು ಪರಿಸ್ತರಣ–ಕಲಶಗಳೈದು ಸೇರಿ ನವಕುಸುಮ ಮಾಲಿಕೆಯಂತೆ ಪೇಳಿಹನು । ವ್ಯಾಸರಾಯರ ಜನ್ಮಕಥೆಯಾದ

---

ಹೀಗೆ ಹೇಳಿದ್ದಾರೆ "ಅಮೂಲಾಗ್ರನಿಬದ್ಧ ತರ್ಕ ಜಟಿಲಂ ಶಬ್ದೈಕ ಜೀವಾತುಕಂ ಮೀಮಾಂಸಾನುನಯಂಚ ಶಂಕರವಚೋ ಹುಂಕಾರಭಂಗಪ್ರದಂ । ಶಾಸ್ತ್ರಂತಂತ್ರ ಚತುಷ್ಟಯಾತ್ಮಕಮಿದಂ ಸಿಃಸ್ವಪ್ನತಂತ್ರಾಂತರಾಃ ವ್ಯಾಖ್ಯಾಸ್ಯಂತಿ ಪಂತತಿಚ ಜನಾಕಿಂ ನಾಕಲೌ ದುಷ್ಕರವರ್ |"

ಶ್ರೀವಾದೀಂದ್ರರು ಶ್ರೀವ್ಯಾಸರಾಜರನ್ನು ಶ್ಲೋ|| ಮಾ ಯಾ ತ ಂ ತ್ರಾ ಮುರಾರಿಸ್ಮಯಮುಪನಯತೋ ಮಧ್ವಸಿದ್ಧಾಂತನಾವ್ನೋನೇತ್ರಾಣೀವತ್ರಯೋಪಿ ತ್ರಿಜಗತಿ ನೃಹರೇರಿಂಧತೇ ಯತ್ರಬಂಧಾಃ || ಯದ್ವಾಗದ್ವೈತವಿದ್ಯಾಚಲಕುಲಕುಲಿಶ ಪ್ರೌಢಿಮಾಢೌಕತೇ ಸಃ ಶ್ರೇಯೋ ಭೂಯೋ ವಿದಧ್ಯಾತ್ಸ್ವಮಹಿತಮಹಿಮಾ ಸಂಪ್ರತಿ ವ್ಯಾಸರಾಜಃ || ಎಂದು ಸ್ತುತಿಸಿದ್ದಾರೆ ಯಾವ ಜನರು–ಶ್ರೀವ್ಯಾಸರಾಯರ ವೈಭವವನ್ನೂ ವಿದಗ್ಧತೆಯನ್ನೂ ಉಚ್ಚರಿಸಲೂ ಶ್ರವಣಮಾಡಲೂ ಇಷ್ಟ ಪಡುತ್ತಿಲ್ಲವೋ ಅಂತಹವರನ್ನುದ್ದೇಶಿಸಿ ಸೋಮನಾಥ ಕವಿಯು–ತನ್ನ ಕಾವ್ಯರಾಜಿಯಲ್ಲಿ ಶ್ಲೋ|| ಭೋಭೋ ಮತ್ಸರ ಕುತ್ಸಿತಾಃ ಸುಮತಯೋ ದುರ್ವ್ಯದುಷೀ ಗರ್ವಿತಾ ನಾಕಾಶಾದವತಾರಭಾಗಿನ ಇವಾಹಂಯೂನ್ಸ ಮಾಢೌಕ್ಯಕಿಂ । ಶ್ಲಾಘಾಕಂಪನ ಮೇಕಮೇವ ಶಿರಸಃ ಶ್ರೀವ್ಯಾಸಯೋಗೀಶಿತುಃ ಮೇರೂಣಾಂಶತಮರ್ಹತಿ ಕ್ಷಿತಿತಲೇ ವಿದ್ಯಾಸು ವಿದ್ಯಾವತಾಂ || ಎಂದು ಮೂದಲಿಸಿದ್ದಾನೆ.

ರೊಳಗೆ ಬರೆದಿದೆ ಮೂಲ ಗ್ರಂಥಗಳೈದು ಶೋಧಿಸಿ ವರ್ತಮಾನಕೆ ಸರಿ ಹೋಗುವ ಪುರಾತನ ನಿದರ್ಶನ ಲಿಖಿತ ಶಿಲಾಲೇಖನವು ಪರದೇಶಿಯರು ಅನ್ಯ ಭಾಷೆಯೊಳ್ ಬರೆದಿರುವ ಲೇಖನ ಸಮ್ಮವರ ಅತಿ ಪ್ರಾಚೀನ ಗ್ರಂಥಗಳು ||

## ಹರ್‌ಬರ್ಟ್ ಲಿಂಕನ್ನನ ಗ್ರಂಥದಲ್ಲಿ ಈ ರೀತಿ ಇದೆ

ನೇಪಲ್ ಎಂಬುವುದು ಸುಂದರ ಪುರಾತನ ನಗರ ಇದನೋಡಿ ಸಾಯಲಿ ಬೇಕು ಎಂಬುವ ಇಟಲಿಯ ಗಾದೆ ಇದೆ। ಈ ನಗರಕ್ಕಿಂತಲೂ ಸುಂದರವಾದ ಪಟ್ಟಣ ವಿಜಯನಗರವು ಇಪ್ಪತ್ತೇಳು ಮೈಲಿಯು ಉತ್ತರಕೆ ಹಬ್ಬಿದೆ-ಹದಿನೈದು ಮೈಲಿಯು ಅಗಲವಿರುತಿಹುದು ||

ಅರಸನಿಗೆ ಗುರುವೆನಿಸಿ ಅಪ್ತಪ್ರಧಾನನೊಬ್ಬನು ವೃದ್ಧನಿರುತಿಹನಾತ ಸಂನ್ಯಾಸಿ । ಇವನ ಅಪ್ಪಣೆಯಂತೆ ರಾಜನು ಅನುದಿನವು ನಡೆಯುವನು ಚಕ್ರಾಧಿಪತ್ಯದ ಪ್ರೌಢವಿದ್ಯಾಶಾಲೆಯಲ್ಲಿಹುದು ॥

ಇದರೊಳಗೆ ಸಂಸ್ಕೃತದ ವಿದ್ಯಾಭ್ಯಾಸ ನಡೆವುದು ತರ್ಕ ವ್ಯಾಕರಣ ಸಾಹಿತ್ಯ ವೇದಾಂತಗಳು ಬಹು ಮುಖ್ಯ-ಉಳಿದ ಜ್ಯೋತಿಷ ವೈದ್ಯ ಅಧ್ಯಯನ ಯಾಜ್ಞಿಕ ಎಂಬಿವು ಐಚ್ಛಿಕವು ಆಗಮ ಧರ್ಮಶಾಸ್ತ್ರಗಳು ಸಹಿತಾಗಿ ||

★ವಸ್ತುಶಾಸ್ತ್ರವು ಶಿಲ್ಪಿಶಾಸ್ತ್ರವು ಕೃಷಿ ವಾಣಿಜ್ಯವಲ್ಲದೆ ಪ್ರಾಣಿಶಾಸ್ತ್ರವು ಮಾನಸಿಕ ಶಾಸ್ತ್ರಗಳು ನೀರೊಳು ಬೆಂಕಿ ಬರಿಸುವುದು ಉಗ್ರಾಣದಲಿ ತುಂಬುತ ಸುಟ್ಟ ಬಿದರಲಿ ತಂತಿಗಳನನುಗೊಳಿಸಿ ಗಾಜಿನ ಚಂಡಿನಲಿ ಬಚ್ಚಿಟ್ಟು ತಾಮ್ರದ ತಂತಿಗಳ ಮೂಲಕದಿಂದ ದೀಪವ ಹಚ್ಚಿ ಬೆಳಗುವುದು ||

---

★ ವಿಜಯನಗರದ ಕೃಷ್ಣದೇವರಾಯನ ಆಳ್ವಿಕೆಯಲ್ಲಿ ವಿದ್ಯುಚ್ಛಕ್ತಿಯನ್ನು ಉತ್ಪತ್ತಿಮಾಡಿ — ಅದರ ಸಹಾಯದಿಂದ – ದೀಪಗಳನ್ನು ಹಚ್ಚುತ್ತಲಿದ್ದರೆಂದು ಸ್ಪಷ್ಟಪಟ್ಟಿದೆ.

ಮಟ್ಟತೈಲವದೆಂಬ ಯಣ್ಣೆಯ ಯಂತ್ರಗಳಿಗೊದಗಿಸುತ ತಿರುಗಿಸಿ ಮಿಂಚಿನಂದದಿ ಬರುವ ಶಕ್ತಿಗೆ ಯಂತ್ರ ಸಾಮಗ್ರಿಗಳನೊದಗಿಸುತ । ಮರವ ಕತ್ತರಿಸುವರು ಬಟ್ಟೆಯ ನೇಯುವರು ಬೀದಿಬೀದಿಲಿ ಬೆಳಕ ಬೆಳಗುವರು ॥

★ಈ ಪರಿಯ ವಿದ್ಯವನು ಭೌತಿಕಶಾಸ್ತ್ರವೆಂಬರು ಹಿಂದಿನ ರಾಜರಾಜ್ಯಾಧೀಶರೆಲ್ಲರು ಆಂಗ್ಲಭಾಷೆಯೊಳಿದನು ಸೈನ್ಸ್ ಎಂತೆಂದು ಕರೆಯುವರು ಈಗ ಪಶ್ಚಿಮ ರಾಜ್ಯವೆನಿಸಿಹ ಯೂರೋಪಿನ ಜನರೊಳು ಜರ್ಮನಿಯ ಯಹೂದಿಯ ಜನರು ಜರ್ಮನ್ಸ್‌ಯೆಂಬ ಆರ್ಯರು ಇಲ್ಲಿ ಈ ಸಂಸ್ಕೃತದೊಳಗೆ ಈ ವಿದ್ಯವನು ಕಲಿಯುತ ಹೈಜರ್ಮನ್ ಎಂಬ ಅವರ ಭಾಷೆಗೆ ಪರಿವರ್ತನವ ಮಾಡುವರು ಇದನೆ ಟ್ರಾನ್ಸ್‌ಲೇಷನ್ ಎಂದು ಕರೆಯುವರು ॥

## ರಾಘವೇಂದ್ರಕವಿ ಮತ್ತು ಶ್ರೀಜಗನ್ನಾಥದಾಸರು

ಮೂಢರೊಳಗಗ್ಗಳಿಯ ನೆನ್ನೆಯ ವಿದ್ಯ ನೈವೇದ್ಯವೆ ಪ್ರಧಾನವು ಹಿಂದು ಮುಂದಿನ ವಿವರ ತಿಳಿಯದೆ ಗುರುಹಿರಿಯರಲಿ ಮಾಡಿದ ಭಕ್ತಿ ಮೊದಲಿಲ್ಲ । ನಮ್ಮ ತಂದೆಯ ಮನೆಗೆ ಬರುತಿಹ ಬಹಳ ತತ್ತ್ವಜ್ಞಾನಿಗಳು ಭಗವದ್ಭಕ್ತರೆನಿಸಿದ ಜಗನ್ನಾಥವಿಠಲರೆನಗೆ ಪರಿಚಿತರಾದವರಲಿ ಓದು ಕಲಿತೆನು ಬಳಿಕ ಮಂತ್ರಾಲಯಕೆ ಜೊತೆಯೊಳಗೆನ್ನ ಕರೆದೊಯ್ಯುತ್ತ ಕೆಲದಿನವಲ್ಲಿ ವಾಸವಗೈದು ಮಾನವಿ ಎಂಬ ತಮ್ಮೂರಿಂಗೆ ಸ್ವಗ್ರಾಮಕ್ಕೆ ತೆರಳಿದರು ॥

ರಾಯಚೂರಿಂದಾಚೆ ಎರಡು ಗಾವುದದೊಳಗೆ ಮಾನವಿ ಎಂಬ ಊರಿದೆ ಅದನು ಮಾನವಿ ತಾಲ್ಲೂಕು ಎಂದು ಉರ್ದುವಿನಲ್ಲಿ ಕರೆವರು ಸಾಮಾನ್ಯದಲಿ ಇರುತಿಹ ಜನರು ಆಪೆಸರನ್ನೆ ಕರೆಯುವರು । ಅಲ್ಲಿ ಅನತಿ ದೂರದಲಿ ಗುರುವರ ಜಹಗೀರೆನಿಪ ಬ್ಯಾಗವಟ್ಟದ ಗ್ರಾಮವಿದೆ ಅಲ್ಲಿ ಅವರು ವಾಸಿಸುವ ಬಹು

★ಜರ್ಮನಿಯ ಯಹೋದಿಯರು ವಿಜಯನಗರದ ವಿಶ್ವವಿದ್ಯಾನಿಲಯದಲ್ಲಿ ಭೌತಿಕ ಶಾಸ್ತ್ರ (science)ವನ್ನು ಅಧ್ಯಯನ ಮಾಡುತ್ತಲಿದ್ದರೆಂತಲೂ ಅದನ್ನು ಅವರ ಭಾಷೆಗೆ ಪರಿವರ್ತನ ಮಾಡುತ್ತಲಿದ್ದರೆಂತಲೂ ಹರ್‌ಬರ್ಟ್‌ಲಿಂಕನ್‌ನ ಲೇಖನದಿಂದ ದೃಢಪಟ್ಟಿದೆ

ವಿಸ್ತಾರವಾಗಿಹ ಗೃಹವಿಹುದು ಬಹುಜನ ಶಿಷ್ಯಮಂಡಲಿ ವೈದಿಕರು ಲೌಕಿಕರು ಶ್ರೀಮಂತರುಗಳಲ್ಲದೆ ನನ್ನಂದದ ಮಹಾಮೂಢರುಗಳಲ್ಲಿರ್ದು ಸೇವೆಯಗೈದು ಸನ್ಮತಿಯುಕ್ತರಾಗುವರು ||

ಅಲ್ಲಿ ನಮ್ಮಯ ಬಂಧುವರ್ಯರು ಹಿರಿಯರೆನಿಸಿದ ದೇಶಪಾಂಡೆಯು ಕೃಷ್ಣರಾಯರು ಇರುತಲಿರ್ದರು ಇವರೊಳು ದಾಸರಿಗೆ ಬಹು ವಿಶ್ವಾಸವಾವ ಗಲೂ–ಪ್ರೌಢಜ್ಞಾನ ಸುಭಕ್ತಿ ವಿಷಯಗಳ ವಾರ್ತೆಯಲ್ಲದೆ ಬೇರೆ ಶ್ರೋತವ್ಯ ದಲಿ ಕಾಣದು ಶಿಷ್ಯರನುದಿನ ಕೇಳಿ ಜ್ಞಾನೋದಯದಿ ಶಾಂತಿಯ ಪೊಂದಿ ಕೊಳುತಿಹರು ||

ಕೃಷ್ಣರಾಯರ ದಂಪತಿಗಳಲ್ಲಿರ್ದ ವಿಷಯವು ನನಗೆ ತಿಳಿಯದು ದಾಸ ರಾಯರ ಧರ್ಮಪತ್ನಿಯು ಕೃಷ್ಣರಾಯರ ಮಹಿಷಿಯರು ಸಹಿತಾಗಿ ಕೃಷ್ಣಾ ಸ್ನಾನ ಕಾರಣದಿ ಎತ್ತುಗಳು ಹೂಡಿರ್ದ ಗಾಡಿಯೊಳೈದಿ ಬಂದರು ನನ್ನ ಕಾಣುತ ಕೃಷ್ಣರಾಯರ ಧರ್ಮಪತ್ನಿಯರು ರುಕ್ಮಿಣಿಯಮ್ಮನೆಂಬರು ಕುಶಲರೇ ಶೀನಣ್ಣ ಮೊದಲಾಗಿರ್ದ ಬಂಧುಗಳೆಂದು ಕೇಳಿದರು ||

ಕುಶಲವಾರ್ತೆಗಳೆಲ್ಲ ಕೇಳಿದಾ ಬಳಿಕ ಭೋಜನವಾಯ್ತು ದಾಸರಪತ್ನಿಗೆ ತಾಮರಸಮ್ಮನೆಂಬುದು–ವಾಡಿಕೆಯೊಳವರನ್ನು ಅರಸಮ್ಮನೆಂದೇ ಕರೆಯುತಿರು ತಿಹರು । ಶಿಷ್ಯವರ್ಗದ ಜನರು ದೊಡ್ಡಮ್ಮನವರು ಎಂಬುವರು ರುಕ್ಮಿಣಿ ಯಮ್ಮನನು ಅಮ್ಮನವರೆಂದೆನುತ ಕರೆಯುವರು ||

ಕೃಷ್ಣರಾಯರ ದರ್ಶನವು ಕುಶಲ ಪ್ರಶ್ನೆಯೆಲ್ಲವು ಕಳೆದ ಬಳಿಕಲು ದಾಸರ ಹರಿಕಥಾಮೃತಸಾರವನು ಶ್ರೀದದಾಸರು ಓದಿದರು ಅವರಿಂದ ವಿರಚಿತವಾದ ನಾಮಗಳ ಪೇಳಿದರು ಕಿವಿಗಿಂಪಾಯಮಾನವದಾಯ್ತು ತರುವಾಯ ||

ಶ್ರೀದವಿಠಲದಾಸರಾಯರ ಜನ್ಮಸ್ಥಳ ಶಿರಹಟ್ಟಿ–ನಮ್ಮರವತ್ತೊಕ್ಕಲು ಆತ್ರೇಯಸದ ಗೋತ್ರೋದ್ಭವರು ಈಸರು ಎಂಬ ಮನೆತನದವರು ಶರಾವತಿ

ನದಿಯು ಈಸರದವರು ಆಸರದವರು ಎಂಬ ವಾಡಿಕೆಯು ಬಂದಿಹುದು ಗ್ರಾಮ್ಯದೊಳವರ ಕರೆವರು ಈಚಲೆಂತೆಂದು ॥

ಬ್ಯಾಗವಟ್ಟಿದೊಳಿಪ್ಪ ನಮ್ಮ ಜಗನ್ನಾಥದಾಸರಿಗೀಗ ಮೂರು ಸಾಸಿರ ವರಹ ವರುಷಕೆ ಬರುವ ಜಹಗೀರುಗಳು ಗ್ರಾಮಗಳೇಳು ಈಗಿರುತಿಹದು । ಉಳಿದಿಹ ಹಲವು ಮಾನ್ಯಗಳ ಧರ್ಮಕಾರ್ಯಕ್ಕೆ ಶ್ರೋತ್ರಿಯ ಬ್ರಾಹ್ಮಣರ ಜೀವನವೃತ್ತಿಗಲ್ಲದೆ–ದೇವತಾಲಯಕೆಂದು ಕೆಲವನು ಕೊಟ್ಟಿಹರು ಗ್ರಾಮ ಗಳೇಳು ಜಹಗೀರುಗಳು ಗುರು ಶ್ರೀರಾಘವೇಂದ್ರರ ಸನ್ನಿಧಿಗೆ ದಾನ ಧಾರಾ ಪೂರ್ವಕದಿ ಕೊಟ್ಟರು. ಈಗವರೆ ಅನುಭವಸುತ್ತಲಿರ್ಪರು ನೈಜಾಮಕರ್ನಾಟಕದ ಪ್ರಾಂತ್ಯದಲ್ಲಿ ॥

ದಿವಸ ದಿವಸಕೆ ಯಾಚಕರ ದಕ್ಷಿಣೆಯೊಳಗೆ ತೃಪ್ತಿಯಪಡಿಸಿ ಭೋಜನ ವಿತ್ತು ಕಳುಹುತ್ತಿಹರು ಬೆಳ್ಳಿ ಬಂಗಾರಗಳ ಒಡವೆಗಳ ಪಂಢರಾಪುರ, ಉಡುಪಿ ತಿರುಪತಿ ಮಂತ್ರಾಲಯದ ಗುರುಸನ್ನಿಧಿಗೆ ಬಹು ಸಂತೋಷ ಚಿತ್ತದೊಳಿತ್ತು ದಂಪತಿಗಳು ವಿನೋದದಲಿರುತಲಿರುವರು ಬಹಳ ಮಾತುಗಳೇನು ಗುರುವ್ಯಾಸ ರಾಯರು ರಾಘವೇಂದ್ರ ಪುರಂದರನಾಯಕರು ಜಯತೀರ್ಥಾಖ್ಯ ಗುರುಗಳು ಹಿಂದೆ ಷಾಷ್ಟಿಕರೊಳಗೆ ಪಡೆದಿಹ ಕೀರ್ತಿಯನು★ ಈಗಿವರು ಪಡೆಯುತ್ತಿಹರು ನಿತ್ಯದಲಿ ॥

ಇದರೊಳಗೆ ಇರುತಿಹದು ವೈವಾಹವಿಷಯದ ಗರ್ಭವು ಮಧ್ಯದಯೆರಡೇ ಸಂಧಿಯಲ್ಲಿ ಗುರುರಾಘವೇಂದ್ರರ ಕುಲಕ್ರಮಾಗತವಾದ ಷಾಷ್ಟಿಕವಂಶವಿಸ್ತಾರ ವನು ಕೂಲಂಕಷದಿ ಆಮೂಲಾಗ್ರ ವಿಂಗಡಿಸಿ ದೊರೆತಿರುವ ದೊರೆಯುತ್ತಿರುವ ಅರಸಿ ಹುಡುಕುತ್ತಿರುವ ಶಾಸನ–ಪುರಾತನ ಗ್ರಂಥ–ಪರದೇಶಿಯರ ಲೇಖನ

★"ಈಗಿವರು ಪಡೆಯುತ್ತಿಹರು ನಿತ್ಯದಲಿ" ಎಂಬ ವಾಕ್ಯದಿಂದ ಈ ಕಾವ್ಯದ ರಚನೆಯ ಕಾಲದಲ್ಲಿ–ಶ್ರೀಜಗನ್ನಾಥದಾಸರು ಜೀವಂತರಾಗಿದ್ದರೆಂದು ವ್ಯಕ್ತಪಡುತ್ತದೆ. ಪ್ರತ್ಯಕ್ಷದರ್ಶಿಯಾದ ಈ ಕವಿಯ ಹೇಳಿಕೆಯಂತೆ ಶ್ರೀಜಗನ್ನಾಥದಾಸರು ಆಗಿನ ಶ್ರೀಮಂತರ ಪಂಙ್ತಿಯಲ್ಲಿ ಅಗ್ರಸ್ಥಾನವನ್ನು ಪಡೆದಿದ್ದರೆಂಬುದನ್ನು ವಾಚಕರು ನೆನಪಿನಲ್ಲಿಡತಕ್ಕದು.

ಪ್ರಾಚೀನ ಶಿಲಾಶಾಸನಗಳಿಂದಲಿ ನಿರ್ಧರಿಸಿ ಬಹಳ ವಿದ್ವಜ್ಜನರ ರಾಜಪ್ರತಿನಿಧಿಗಳ ಸಮಾಹಿತ ಸಾಂತ್ವ ವಚನಗಳಿಂದ ಬರೆದಿರುವೆ ||

ಗುರುವರರ ವಂಶವನು ವಿಸ್ತಾರಮಾಡದಲೆ ಕೃತಕ ಕೃತಿಯನು ಬರೆದು ಕೆಲವರು ಮುಂದೆ ಬರೆಯುವ ಘನ ಪ್ರಯತ್ನದಿ ಕೆಲವರು ಷಾಷ್ಟಿಕರೆಂದು ಪೇಳಲು ಸಂಕೋಚದಲಿ ಕೆಲವರು ಮೂಕಭಾವದಿ ನಿತ್ಯ ಕೆಲಕೆಲರು ।

ಸೇವೆಯನು ಮಾಡುವರು ಪೂಜೆಯ ಮಾಡುವರು ಸಹಿತಾಗಿ ಯಾತ್ರಿಕ ಜನರ ಮೆಚ್ಚಿಸುವಂತೆ ಅನೃತದ ನುಡಿಯನಮೃತವ ಮಾಡಿ ಜೀವನಗೈದು ಕೊಳ್ಳುತ್ತಿಹರು ಭಕ್ತರು ದೂರವೆನ್ನದೆ ಗುರುವರರ ಸಾಕ್ಷಾತ್ ಸನ್ನಿಧಿಗೈದಿ ಸೇವೆಯಮಾಡಿ ಮಂತ್ರಾಲಯದಿ· ನಿಮ್ಮಯ ಕಾರ್ಯಸಿದ್ಧಿಯು–ಕರ್ಮ ಮುಗಿದರೆ ಹರಿಯ ಅಪ್ಪಣೆ ದೊರೆತು ಗುರುಮೂಲಕದಿ ಸಿದ್ಧಿಪುದು ||

ಗುರುವರರು ಪ್ರತ್ಯಕ್ಷದಲಿ ಇರುತಿಹ ಸಮಯದಲಿ ಸ್ವಪ್ನದ ಮಾತು ಸಲ್ಲದು ದೇವದೂತರ ವಾಕ್ಯ ಸ್ವಪ್ನದ ತೆರದೆ ತೋರುವುದು ನಿಜಭಕ್ತಸೇವಾ ಸಂತತಿಗೆ ಸರ್ವದಲಿ । ಅದನುಳಿದು ಗುರುವರರ ಚರಿತೆಯ ಬರೆದು ಕೊಡುವರ ಸ್ವಪ್ನ ಪೇಳ್ವರ ಮಾತಕೇಳ್ದೊಡೆ–ಭಕ್ತರಿಗೆ ಫಲವಿಲ್ಲ ಗುರುಗಳು ದೃಷ್ಟಿಯೊಳು ನೋಡರು ಗುರುದ್ರೋಹವಿದು–ಸತ್ಯವದು ||

## ಭಾಷ್ಯದೀಪಕಾಚಾರ್ಯರ ವೃಂದಾವನ ಪ್ರವೇಶ

ಭಾಷ್ಯದೀಪಿಕಾಚಾರ್ಯರು ವಿಶ್ವಕೋಶಸದೃಶವಾದ "ಶ್ರೀಮದ್ಬ್ರಹ್ಮ ಸೂತ್ರಭಾಷ್ಯದೀಪಿಕೆಯನ್ನೂ ಮತ್ತು ಸೂತ್ರದೀಪಿಕೆಯನ್ನೂ ರಚಿಸಿ, ವಿದ್ಯಾ ನಗರವೆಂದು ವಿಖ್ಯಾತವಾದ ಕುಂಭಕೋಣದಲ್ಲಿ ಊರಿನ ರಾಜ ಬೀದಿಯ ಮಧ್ಯದಲ್ಲಿ ವಿಸ್ತಾರವೂ, ಪ್ರಶಸ್ತವೂ ಆದ ಕಲ್ಪವೃಕ್ಷಾರಾಮದಲ್ಲಿ ಬೃಂದಾವನಸ್ಥರಾಗಿದ್ದಾರೆ. ಕಾವೇರಿ ನದಿಯೂ ಸಮೀಪದಲ್ಲಿಯೇ ಇದೆ.

## ಸುಮತೀಂದ್ರರು ಮತ್ತು ಆರಣಿಯ ಜಹಗೀರದಾರ ಸುಭಾನುರಾಯರು

ಆರಣಿಯ ಜಹಗೀರುದಾರ ಸುಭಾನುರಾಯನು ಗೌಡಬ್ರಾಹ್ಮಣಪುತ್ರಿಯನು ವೈವಾಹದಿಂದನುಗ್ರಹಿಸಿಕೊಂಡನು ಈತ ಮಂತ್ರಾಲಯದ ಸುಮತೀಂದ್ರರಿಗೆ ಪ್ರಿಯಶಿಷ್ಯ । ಗುರುಗಳಪ್ಪಣೆ ಇದಕೆ ಕೊಡದಿರೆ ಬಂದುದೈ ಗುರುಗಳಲಿ ದ್ವೇಷವು ಬೇರೆ ಗುರುಗಳಗೈದುಕೊಂಡನು ಹಿಂದೆ ಬರೆದಿಹ ಪದವು ಇಪ್ಪತ್ತೆರಡರಲಿ ಶೋಭಿಸುವ ಬ್ರಾಹ್ಮಣರಾಗಸಂನ್ಯಾಸವನು ಹೊಂದುತ್ತ ಬಿಡಿ ಸಂನ್ಯಾಸಿಯಾಗುತೆ ಜೀವನ ಪ್ರಾಣಧಾರಣೆ ಮಾಡುತಿರ್ದರು ಊರುಗಳಲ್ಲಿ ನಿಲ್ಲದೆ ದೇಶ ಸಂಚಾರವನುಗೈವುತ್ತ ॥

★ಕೂಡಲಿಯ ಅಕ್ಷೋಭ್ಯತೀರ್ಥಾಶ್ರಮದಿ ಗುರುಸುಧೀಂದ್ರರು ಪಾಠಶಾಲೆಯಗೈದು ವಿದ್ಯಾಪೀಠವನು ರಚಿಸಿ । ಆದರ ಆಡಳಿತಗಳ ನಿರ್ವಹಿಸುವರೇ ಸಂನ್ಯಾಸಿಗಳನೋರ್ವರಗೈದುಕೊಟ್ಟರು ಅವರ ಬಳಿಯೊಳಗಿಬ್ಬರಾದರು ಶಿಷ್ಯಭಾವದಲಿ ॥

---

★ಕೂಡಲಿಯ ಆರ್ಯಮಠವು ಹೆಸರಾಂತ ವಿದ್ಯಾಪೀಠಗಳಲ್ಲಿ ಒಂದು. ಈ ಅಭಿಪ್ರಾಯವನ್ನು ಪುಷ್ಟೀಕರಿಸಲು ಒಂದೆರಡು ಶಾಸನ ಮತ್ತು ಗ್ರಂಥಾಧಾರಗಳನ್ನು ಇವರಡಿ ಉಲ್ಲೇಖಿಸಿದ್ದೇವೆ. ಶಿವಮೊಗ್ಗಾ ತಾಲ್ಲೂಕಿನ ಶಾಸನ ಕಡತದ ಮೂರನೇ ಸಂಪುಟದ ೯೧ ರಿಂದ ೯೫ನೇ ಪುಟದವರೆಗಿನ ಶ್ರೀನಾರಾಯಣಯತಿಗಳ ಹೆಸರಿನ ಶಾಸನ ಒಂಭರಲ್ಲಿ "ಸರ್ವಜಿನ್ನಾಮವರ್ಷೇ ಮಾಸಿ ಕಾರ್ತಿಕನಾಮಿನಿ । ಶುಕ್ಲಪಕ್ಷೇ ಚ ಪುಣ್ಯಾಯಾಂ ಉತ್ಥಾನದ್ವಾದಶೀತಿಥೌ । ತುಂಗಭದ್ರಾನದೀತೀರೆ ತುಂಗತ್ಕಲ್ಲೋಲಶೀತಳೇ । ಸನ್ನಿಧೌ ವಿರಲೇಶಸ್ಯ ಸರ್ವಸಂಪದ್ವಿಧಾಯಿನಿ। ಶ್ರೀಮತ್ಪರಮಹಂಸಾಖ್ಯ ಪರಿವ್ರಾಜೀಮಹಾತ್ಮನೇ। ಪದವಾಕ್ಯ ಪ್ರಮಾಣಾಖ್ಯಸರ್ವಸ್ವಾಪಾರದೃಶ್ವನೇ। ವೈಷ್ಣವಾಗಮಸಿದ್ಧಾಂತಪ್ರತಿಷ್ಠಾಚಾರ್ಯಮೌಳಿಯೇ । ನಿಗಮಾಗಮಸಿರ್ಣೀತ ನಿರ್ಜರಾಧೀಶಮಂತ್ರಿಣೇ । ನೃಪೇಂದ್ರಮುಕುಟೀರತ್ನನೀರಾಜಿತನಿಜಾಂಘ್ರಯೇ । ನಿರಹಂಕಾರಚಿತ್ತಾಯ ನೀತಿಮಾರ್ಗೋಪದೇಶಿನೇ । ಕೂಡಲ್ಯಾರ್ಯಮಠೀಯಾಯ ಕಲುಷಾಸ್ಪೃಷ್ಟಮೂರ್ತಯೇ । ಶಿಷ್ಯಾಯ ರಘುಪತಿಯತೀಂದ್ರಸ್ಯ ಮಹಾತ್ಮನಃ। ಶ್ರೀನಾರಾಯಣಯತೀಂದ್ರಾಯ ಶ್ರಿತಕಾಮಿತದಾಯಿನೇ" ಎಂದು ಮುಂತಾಗಿ ಉಕ್ತವಾಗಿದೆ. ವಿಜಯನಗರದ ಸಾರ್ವಭೌಮ ಕೃಷ್ಣದೇವರಾಯನು ಶ್ರೀನಾರಾಯಣಯತಿಗಳಿಗೆ–

ನಿಮ್ಮ ತರುವಾಯದಲಿ ಗುರುಗಳು ನಾವು ಉತ್ತರವಾದಿಗಳು ಬೇರೊಬ್ಬ ಶಿಷ್ಯರ ಮಾಡಿಕೊಂಡಿಹಿರಿ । ಅವರಿಗಾಶ್ರಮದಾಡಳಿತ ಪೂಜಾದಿಗಳು ಸಲ್ಲದ ತೆರದೆರಾಯಸ ನಿರೂಪ ಬರೆದುಕೊಡಿ ನೀವೆಂದು ನಿತ್ಯವು ಬಿಡದೆ ನೋಯಿಸುತ ||

ಇವರ ಬಾಧೆಯು ತಾಳಲಾರದೆ ಗುರುಗಳತಿಸಾಧುಗಳು ಕೋಪಿಸಿ ನಾವು ಮಂತ್ರಾಲಯದ ಗುರುಗಳಪ್ಪಣೆಯಂತೆ ನಡೆವವರು || ನೀವು ಬಿಡಿ ಸಂನ್ಯಾಸವ ಮಾತ್ರವೇ ನಮಗೆ ಕೊಡಿರೆಂದೆನುತ ಪೇಳುತಲೀಗ ನಮ್ಮೊಳು ಕಲಹಗೈವರೆ ಸ್ಥಳವಿದಲ್ಲವು ಪೋಗಿನೀವೆಂದು ||

ಇವರಿಗಾಗಲು . _ ನಾಮವಾಯಿತು ಸುಭಾನುರಾಯಗೆ ಮೋಹದ ರಾಣಿ ಮಹಾಪತಿವ್ರತೆಯಾಕೆ ಶ್ರೀಸುಮತೀಂದ್ರಗುರುಗಳ ಬೇಡಿ ಗುರುಗಳರ್ಚನೆ

---

ಗ್ರಾಮಭೂಮಿಗಳ ದಾನಮಾಡಿ ಆ ಬಗ್ಗೆ ಬರೆಸಿಕೊಟ್ಟ ಶಾಸನವಿದು. ಶ್ರೀನಾರಾಯಣ ಯತಿಗಳು ಶ್ರೀವ್ಯಾಸರಾಯ ಸ್ವಾಮಿಗಳ ಗಣ್ಯ ವಿದ್ಯಾರ್ಥಿಗಳಲ್ಲಿ ಒಬ್ಬರು. ಕವಿ ಕಂಠೀರವನಾದ ಸೋಮನಾಥ ಕವಿಯು ತನ್ನಿಂದ ರಚಿತವಾದ ಶ್ರೀವ್ಯಾಸಯೋಗಿ ಚರಿತೆಯ ೭೯ನೆಯ ಪುಟದಲ್ಲಿ "ಅಹೋವಾಚಾಮಗೋಚರ ಶಿಷ್ಯಪರಮಾಣೌಮಯಿ ನಾರಾಯಣ ತಪೋನಿಧೇರ್ಮಹಾನಯಂ ವಾತ್ಸಲ್ಯಭಾರಃ ಇದಂಖಲು ಮಹಾಪುರುಷ ತಾಯರೂಪಂ| ಯದಸನ್ನಿಧಾನೋಽಪಿ ಮಹತಾಂಸಭಾಸಮು ಕ್ಷಮುಪರಜನಕೌಶಲೇಯ ಸ್ಯಮಹಿತಂಯಾನ ಮುದ್ಘಟನಂ|| ನೈಸರ್ಗಿಕೀಖಲ್ವೇತಾದೃಶೀಪ್ರಕ್ರಿಯಾ ಮಹಾ ಪ್ರಕಾಶಸ್ಯ ಪುರುಷಸ್ಯಾಪ್ಯನಿಮಿತ್ತಾಪ್ಯ ವಿಸ್ಮಯನೀಯಾ ಖಲು ಜಗದಾಹ್ಲಾದಾನ ಕಾರ್ಯರೀ ಸುಧಾಂಶೋಃ । ನಿಸ್ಪೃಹಾಅಪಿ ಮಹಾಂತಃಮಾಧೇರಪಿ ಪರೋಪಕಾರ ಮೇವಖಲು ಪರಮಾಚಾರಂ ವಿದಂತೀತಿ" ಇತ್ಯಾದಿಯಾಗಿ ಮುಕ್ತಕಂಠದಿಂದ ಗಾನ ಮಾಡಿದ್ದಾನೆ ನಾರಾಯಣಯತಿಗಳ ಆಶ್ರಮಗುರುಗಳಾದ ಶ್ರೀರಘುನಾಥತೀರ್ಥ ವೃಂದಾವನವು ಪಂಪಾಕ್ಷೇತ್ರದ ನವವೃಂದಾವನಗಳಲ್ಲಿ ಒಂದಾಗಿದೆ ಆಧುನಿಕ ಬರಹ ಗಾರರೊಬ್ಬರು ಇವರನ್ನು ರಘುವರ್ಯತೀರ್ಥರೆಂದು ಸಂಬೋಧಿಸಿರುವುದರ ಔಚಿ ತ್ಯವು ವಿಚಾರಾರ್ಹವಾಹುದು ಇವರು ತಮ್ಮಿಂದ ರಚಿತವಾದ ಶ್ಲೋಕ ಒಂದರ ಸೌಂದರ್ಯದ ಸೌಲಭ್ಯದ ಸಲುವಾಗಿ ಪತಿ ಎಂಬ ಪದದ ಸಮಾನಾರ್ಥಬೋಧಕ ವಾದ ವರ್ಯ ಎನ್ನುವ ಪದವನ್ನು ಪ್ರಯೋಗಮಾಡಿ "ರಘುವರ್ಯಂ" ಎಂದು ಉಲ್ಲೇಖಿಸಿರುವರು

ಗೈದ ಸೀತಾಪ್ರತಿಮೆ ಮಹಾಲಕ್ಷ್ಮಿಯನು ಪಡೆವುತ ಪೂಜೆಗೈವಳು ನಿತ್ಯ ಭೃಗುವಾಸರದ ಪೂಜೆಯಲಿ ||

ರಾಯರಿಗೆ ದೊರೆಗಳಲಿ ಪೂಳಿಗಬಂದುದವರ್ಗೈದಿದರು ಪರವಾನಿಗೆಯು ಶಿರದಲಿ ಧರಿಸಿ ಗುರುಗಳಿತ್ತಲು ಸಮಯದೊರೆತಾಬಳಿಕ ಸೀತಾಕೃತಿಯ ... । ತೆರಳಿದರು ... ರಾಯರಿಗರಿವಿದಾಯಿತು ಬಹುದೂರದೇಶಕ್ಕೆ ಗಮಿಸಿ ವಥಿಕರತೆರದಳೋಡಿದರು ||

ಕಡೆಗೆ ಕೃಷ್ಣಾ ತೀರದಲಿ ದೇಹವನು ನೀಗಿದರಿವರು ಅಲ್ಲಿರುತಿರ್ದ ಕನ್ನಡ ನಾಡ ಯಾತ್ರಿಕರು । ತನ್ನೊಳಗೆ ಸಂನ್ಯಾಸವೊಬ್ಬರಿಗಿತ್ತು ದೇವರ ಪೂಜೆಗವರ ನಿಯಮಿಸುತ ಎಲ್ಲರು ಸೇರಿ ಮಧ್ವಮತಪ್ರಚಾರಕ ಸಂತ ಮಂಡಲಿಯೆಂದು ಸಾರಿದರು,

ಇವರ ಹೆಸರುಗಳೆಲ್ಲ ಬರೆವುತಕಾಲ ದೇಶ ನಿರೂಪಣೆಯಗೈಯ್ಯುವರೆ ಗ್ರಂಥಕೆ ಸಮಯ ಸಾಲದು ಹರಿಸ್ಮರಣೆ ಮತ್ತಲ್ಲ । ಲೋಕಕೆಲ್ಲ ಪಿತಾಮಹಿಯು ತಾನಾದ ವಿದ್ಯಾಬುದ್ಧಿಗಧಿದೇವತೆಯ ಕಲ್ಯಾಣದಲಿ ಮಂಗಳ ಕಥೆಯನುಸರದೆ ಹೇಯಕಥನವನುಸುರಬೇಕಾದುದು ಲೇಖಕನ ದೌರ್ಭಾಗ್ಯವಲ್ಲದೆ ಬೇರೆ ತಾನಿಲ್ಲ ||

ಜಂಗಮರ ಪೂಜಿಸುವ ಜನಗಳ ಹಿಂದೆ ಹೇಳಿದೆ ಇವರ ಕುಲದಲಿ ಪುಟ್ಟಿದಾತನು ವಿಜಯನಗರದ ಮಂತ್ರಿ ಅಪ್ಪಾಜಿ । ಬಹಳ ಕಾಲದ ಮೇಲೆ ಗುರುವರ ವ್ಯಾಸರಾಯರು ರಾಯರ ಬೇಡಿಕೆಗೆ ಮನವಿತ್ತು ಮಂತ್ರಿಗೆ ಮುದ್ರಾಧಾರಣೆಗೈದು-ಶಿಷ್ಯನ ಮಾಡಿಕೊಂಡರು ಸಕಲ ಜನರರಿಯೆ ||

ಲೋಕವನು ಉದ್ಧಾರಗೈದವರು ಮೊದಲು ಪವನಾತ್ಮಜರು ಭುವನ ಪ್ರಾಣನೆಂಬುವ ನಾಮಧಾರಕರು । ಲೋಕಕಸುದೇವರನು ಕರೆದರು ವಾಸುದೆ ವರದೆಂಬ ಘನ ನಾಮದಲಿ ವೇದಗಳು ಮಧ್ವಾಖ್ಯದಲಿ ಸ್ತುತಿಸುವವು ಸಕಲ ಕಲ್ಯಾಣವನು ಶಿಷ್ಯರಿಗಿತ್ತು ಆನಂದಿಸುತ ಮೋಕ್ಷಕೆ ಸಾರ್ವ ಮಾರ್ಗವ ಪೇಳ್ದರದರಿಂದೀಗ ಆನಂದಾಖ್ಯಮುನಿವರ ನಾಮ ಬಂದಿಹುದು ||

ಇವರು ಗುರುಗಳು ಮೂರುಲೋಕಕೆ ನಮ್ಮ ಭಾರತಭುವಿಗೆ ಋಷಿ ಲೋಕಕ್ಕೆ ಪರಮ ಗುರು ಇವರ ತರುವಾಯದಲಿ ಗುರುಗಳ ವರರತುನಾಖ್ಯ ಯೋಗೀಶ್ವರರು ವಾಯುಪದಾರ್ಹರಾಗಿಹ ವ್ಯಾಸಗುರುರಾಯ । ಘನತರದ ಮಂತ್ರಾಲಯದಿ ಮನೆಮಾಡಿ ಭಕುತರ ಪೊರೆವ ಗುರು ಶ್ರೀರಾಘವೇಂದ್ರರು ಇವರ ನಾಮವ ಧರಿಸಿಕೊಂಡಿಹನೆನಗೆ ಇವರೇ ಗುರುವರೋತ್ತಮರು.

ಅಖಿಲಕರ್ನಾಟಕದ ಮಧ್ಯದಿ ಮೆರೆವ ಅರ್ಕಾವತಿಯ ತೀರದ ವಿಪುಲ ಸಂಪದ ಜೊತೆಗೆ ಸಾರಸ್ವತದ ನೆಲಮನೆಯಪ್ಪ ★ಬೃಹತ್ ಪ್ರಸ್ಥಾಖ್ಯ ಪುರವರವು। ಸಕಲ ಷಾಷ್ಟಿಕರಿಂಗೆ ನೆಲಮನೆಯಾಗಲೆಂದೇ ವ್ಯಾಸರಾಯರು ತಮ್ಮ ಸ್ವಹಸ್ತದಿಂ ಪ್ರಾಣೇಶನ ಪ್ರತಿಷ್ಠೆಯಗೈದು ಸಹೋದರ ಪುತ್ರಿ ಅರವಿಂದಾಂಬೆ ತತ್ಸುತ ಕೃಷ್ಣನಾಮಕ ಭರ್ತ್ರಸಾಗಪ್ಪಾರ್ಯಗಾಶೀರ್ವಾದಗೈಯ್ಯುತಲಿ ॥

ದೊಡ್ಡಬಳ್ಳಾಪುರದ ನೈರುತ್ಯದಲಿ ಮೆರೆವಾ ಅರಳಮಲ್ಲಿಗೆ ಬಾಗಿಲೆಂಬುದು ವ್ಯಾಸರಾಯರು ವಾಸಗೈದ ನಿವಾಸವಾಗಿಹುದು । ಬಹಳ ಚಲುವಿನ ಮೂರ್ತಿ ಶಾಲಗ್ರಾಮ ಶಿಲೆಯೊಳುಗೈದು ಅಭಿನವ ಜಕಣನೆಂಬುವನು ಕೊಟ್ಟನೈ ಗುರು ವರರ ಸನ್ನಿಧಿಗೆ ॥

ಮೆಚ್ಚಿದರು ಗುರು ವ್ಯಾಸರಾಯರು ಕೊಟ್ಟರಾತಗೆ ಗ್ರಾಮವುಂಬಳಿ ಯಾಗಿ ಪೆಸರದಕಾಯ್ತು ಈಗಲೂ ಪೆಸರು ಜಕಸಂದ್ರ । ಮಗಳು ಅರ ವಿಂದಾಂಬೆ ತತ್ಸುತ ಕೃಷ್ಣಶರ್ಮರಿಗಿತ್ತರೈವುಂಬಳಿಯು ಜಹಗೀರಾಗಿ ಅರಳು ಮಲ್ಲಿಗೆ ನಾಕಸುಂದರ ಮಗಳ ಮಗನಿಗೆ ನಾಗಸಂದ್ರವದೆಂದು ಕರೆಯುವರು ಈಗಲಾವೂರು ॥

ದೊಡ್ಡಬಳ್ಳಾಪುರದ ನಾಡಿಗೆ ಸೇರ್ದ ಸಕಲಾಡಳಿತ ಸ್ವನಾಡಾಯ ಮಂತ್ರಿತ್ವಾದಿ ಅಧಿಕಾರವನು ಪೊಂದಿರ್ದ । ಖ್ಯಾತನಾಗಪ್ಪಾರ್ಯ ಭೈರೇಗೌಡ ಪಾಳೆಯಗಾರ ಅರಸನು ವ್ಯಾಸರಾಯರನನುದಿನವು ಪೂಜೆಯ ಗೈಯ್ಯುತಿರ್ದರು ಏನು ಸುಕೃತಿಗಳೋ ॥

---

ಬೃಹತ್ = ದೊಡ್ಡ. ಪ್ರಸ್ಥ = ಬಳ್ಳ

★ವ್ಯಾಸರಾಯರ ಅಣ್ಣನಿರ್ದನು ಮಧ್ವಪತಿದೇವನು ಆತನ ಕುವರ ವಿಜಯೀಂದ್ರ–ಮೊದಲು ಪೆಸರಾಗಿತ್ತು ವಿಠಲನೆಂದು ಬಾಲ್ಯದಲಿ। ಸೋದರಿಗೆ ಪೆಸರಿತ್ತು ಅರವಿಂದಮ್ಮನೆಂಬುವರವಳ ಮದುವೆಯಗೈದು ಕೊಟ್ಟರು ನಾಗಪ್ಪ ನೆಂಬಾತನಿಗೆ ತನಯನುಪುಟ್ಟಿದನು ಕೃಷ್ಣಪ್ಪನೆಂಬುವನು ॥

ಮೊದಲು ನಾಗಪ್ಪಾರ್ಯರೆಂಬರು ವಾಸಗೈದಾ ಮನೆಯಕೊಟ್ಟರು ಗುರುವರೇಣ್ಯರ ಪಾದಸನ್ನಿಧಿಗಾಗಿ ಕಾಣಿಕೆಯು। ಗುರುಗಳತಿಪ್ರೀತಿಯಲಿ ಸ್ವೀಕರಿಸುತ್ತ ದೇವಾಲಯವ ನಿರ್ಮಿಸಿ ಕೃಷ್ಣನರಹರಿಮೂರ್ತಿಗಳ ಚಕ್ಕಣ್ಣನಲಿ ನಿರ್ಮಿಸಿ ಘನತರದಿ ಪ್ರತಿಷ್ಠೆಯಗೈದು ಕೊಟ್ಟರು ಅರಸ ಭೈರೇಗೌಡ ನಾಗಪ್ಪಾ ರ್ಯರೆಂಬರು ಮೆಚ್ಚುವಂದದಲಿ ॥

ಈ ಎರಡು ದೇವಾಲಯಕೆ ಗ್ರಾಮಗಳ ಜಹಗೀರಾಗಿ ಕೊಟ್ಟರು ವ್ಯಾಸ ರಾಯರು ಅರಸ ಪ್ರತ್ಯೇಕವನು ಪೇಳುವನೆ। ಶಾಸನವ ತಾಬರೆಸಿ ಕೊಟ್ಟನು. ದೊರೆಯು ಭೈರೇಗೌಡ ಶಿವಪುರ ಮುತ್ತುಸಂದ್ರವದೆಂಬ ಗ್ರಾಮಗಳ ॥

ಗುರುವರೇಣ್ಯರು ವ್ಯಾಸರಾಯರು ★ಪಂಚ ನದಿಮೂಲವನು ಅನತಿ ದೂರದಿ ಮೆರೆವ ಅರ್ಕಾವತಿಯ ನದಿ ಸಹಿತ। ಕಲಗಿರಿಯು ಕೇಶವಗಿರಿಯು ನಂದೀಗಿರಿಯು ಬ್ರಹ್ಮನಗಿರಿಯು ಇಭಗಿರಿಯು ಪೆಸರನು ಧರಿಸಿ ಮೆರೆವಾ ಐದು ಪರ್ವತವ ॥

ಇಲ್ಲಿ ದುರ್ವಾಸರ ಮಹಾಶ್ರಮ ಮೆರೆಯುತಿರ್ಪುದು ಇದಕೆ ಹುಲುಕಡಿ ಎಂಬ ಗ್ರಾಮ್ಯದ ಪೆಸರು ಬಂದಿಹುದು। ಇಲ್ಲಿ ತಾವೆರಡೊಂದು ವರ್ಷಕಾಲವ

---

★ಮಧ್ವಪತಿದೇವನಿಗೆ ವಿಠಲದೇವನೆಂಬ ಕುವರನೂ ಅರವಿಂದಮ್ಮ ಮತ್ತು ಭಾರತೀದೇವಿಯರೆಂಬ ಕುವರಿಯರೂ ಇದ್ದರು. ಇವರಲ್ಲಿ ಅರವಿಂದಮ್ಮನನ್ನು ನಾಗಪ್ಪನೆಂಬಾತನಿಗೂ ಭಾರತೀದೇವಿಯನ್ನು ಅಣ್ಣಾಜಿನಾಯಕ (ಸುಧೀಂದ್ರ ಶ್ರೀಪಾದಂ ಗಳವರು)ರಿಗೂ ಕೊಟ್ಟು ವಿವಾಹವಾಗಿದ್ದಿತು. ವಿಠಲದೇವನೇ ಶ್ರೀವಿಜಯೀಂದ್ರತೀರ್ಥ ಶ್ರೀಪಾದಂಗಳವರು

★ಉತ್ತರಪಿನಾಕಿನಿ, ದಕ್ಷಿಣಪಿನಾಕಿನಿ, ಅರ್ಕಾವತಿ, ಕುಮುದ್ವತಿ, ಪಾಲಾರು (ಕ್ಷೀರನದಿ).

ನಿಂದು ಬಾಂಧವ ಜನ ಸಮಾಹಿತರಾಗಿ ಯಾದವಪಾಂಡವರು ಸಮ್ಮಿಳಿತದಲಿ ಶೋಭಿಸಿದಂತೆ ಇರ್ದರು ಹರ್ಷ ಸಾಗರದಿ ||

★ಆಗ ಮೂವತ್ತೆರಡು ಕೆರೆಗಳ ಕಟ್ಟಿಸಿದರು ಶ್ರೀವ್ಯಾಸರಾಯರು "ದ್ವಾತ್ರಿಂಶತ್ತಟಾಕನಿರ್ಮಾಣಘನತರೋದಾರ ದಾತೃತ್ವ ವೈರೋಚಿನಿ ಕರ್ಣ, ದಧೀಚಿ ಶಿಬಿ ಮಾಯೂರಧ್ವಜಾದೀನಾಂ ಶತಾಂಶಾಧಿಕ ವಿಜೃಂಭಿತ ಶೋಭಾಯರೆಂದು" ವರ್ಣಿಸಿ ಸೋಮನಾಥನು ಹೊಗಳಿ ಬರೆದಿಹ ವ್ಯಾಸಯೋಗಿ ಚರಿತ್ರೆ ಎಂಬುವ ಗ್ರಂಥರತುನದಲಿ ||

★ವ್ಯಾಸಯೋಗಿಯ ಚರಿತೆ ಈಗಲೂ ಕುಂಭಕಾಪುರದೊಳಗೆ ಶ್ರೀಜಗನ್ನಾಥಾಖ್ಯತೀರ್ಥರ ದಿವ್ಯಸನ್ನಿಧಿಯ । ಮತ್ತೆ ಸುಮತೀಂದ್ರರಲಿ ಮತ್ತೊಂದಿಹುದು ತಾಳೆಯ ದೇವನಾಗರಿ ಲಿಖಿತವದನಾ ಶೋಧಿಸುತ ದ್ವಿಪ್ರತಿಗೈದು

---

★ವ್ಯಾಸಯೋಗಿಚರಿತ್ರೆಯ ಒಂದು ಪ್ರತಿಯು ತಿರಮಕೂಡ್ಲು (ಮೈಸೂರು ಜಿಲ್ಲೆ) ಗ್ರಾಮದಲ್ಲಿನ ಒಬ್ಬ ಅರ್ಚಕನ ಬಳಿ ಇದು ಇದ್ದುದಾಗಿಯೂ ಅದನ್ನು ಕೀರ್ತಿಶೇಷರಾದ ಬಿ. ವೆಂಕೋಬರಾಯರು ೧೯೩೬ನೆಯ ವರ್ಷದಲ್ಲಿ ಬಂಗಳೂರು ಮುದ್ರಣಾಲಯದಲ್ಲಿ (The Bangalore Press) ಮುದ್ರಿಸಿ ಪ್ರಕಟಿಸಿದ್ದಾಗಿಯೂ ಗೊತ್ತಾಗಿದೆ.

★It is stated at page I Appendix to Sri. Vyasa yogi charitam published by late Sri B. Venkoba Rao that new light has been thrown on vijayanagar history by a palm leaf manuscript in Nagari characters which was found with the family of a brahmin priest of the madhava community who worships at Tirumakudlu in the Mysore district of the Brindhavana of SeshaChandrikacharya who was a swamy of Sri vyasaraya mutt.

ತಂದೆನಪೂರ್ವ ಗ್ರಂಥವು ಬಾಣಭಟ್ಟನ ವಿಮಲ ಕಾದಂಬರಿಯ ಮೀರಿದ ಚಂಪುಕಾವ್ಯವದು.

ಘನತರದ ಶ್ರೀವ್ಯಾಸರಾಯರ ಸಹಿತ ದೂರ್ವಾಸರು ಮಹಾಶಿಷ್ಯರನು ತೋರುತ ವ್ಯಾಸಮುನಿಗಳಿಗೆ । ಇವರು ತಮ್ಮಯ ಶಿಷ್ಯವೃಂದವ ತೋರು ತಿರ್ದರು ಉಭಯ ಗುರುಗಳು ಸೂರ್ಯಚಂದ್ರಮರಂತೆ ಬೆಳಗುತ್ತಿರ್ದರನು ದಿನದಿ ॥

ಹಸ್ತಿನಾವತಿಯೊಳಗೆ ಕೃಷ್ಣನು ಇದ್ದ ತೆರದಿಂ ವ್ಯಾಸರಾಯರು ಬಂಧು ಬಾಂಧವವೃಂದಶಿಷ್ಯರು ಮಿತ್ರರಲ್ಲದೆ ದೂರದೇಶದ ಯಾತ್ರಿಕರು ರಾಜಾಧಿ ರಾಜರು ಯಾಚಕರು ವಿದ್ವಾಂಸಮಂಡಲಿಯು । ಹರಿಭಕುತಿಯುಳ್ಳವರು ಸಹಿತಾಗಿ ದಿವಸಕೆ ಹತ್ತು ಸಾವಿರ ಜನರು ಗುರುಗಳ ನೋಡಿ ಸುಖಿಸುವರು ॥

ರಾಘವೇಂದ್ರ ಕವಿಯು ತನ್ನ ಪ್ರವಾಸ ಕ್ರಮದಲ್ಲಿ ಸೋದೆಯ ಕ್ಷೇತ್ರಕ್ಕೆ ಹೋಗಿದ್ದ ವಿಚಾರವನ್ನು ಈ ರೀತಿ ಹೇಳಿಕೊಂಡಿದ್ದಾನೆ :—

---

ಶ್ರೀ ಬಿ. ವೆಂಕೋಬರಾಯರ ಲೇಖನದಲ್ಲಿ ಉತ್ತಮವಾಗಿರುವ ಈ ಶ್ರೀವ್ಯಾಸ ಯೋಗಿ ಚರಿತೆಯ ಪ್ರತಿಯು ಶ್ರೀಜಗನ್ನಾಥತೀರ್ಥರ ಬಳಿ ಇದ್ದುದೆಂಬುದರಲ್ಲಿ ಸಂಶಯ ಕ್ಕೆಡೆ ಇಲ್ಲ. ಶ್ರೀಭಾಷ್ಯದೀಪಿಕಾಚಾರ್ಯರು, ವಿದ್ಯಾನಗರವೆಂದು ಪ್ರಸಿದ್ಧವಾಗಿದ್ದ ಕುಂಭಕೋಣದಲ್ಲಿಯೇ ವಾಸಮಾಡುತ್ತಿದ್ದರು. ಇದರ ಇನ್ನೊಂದು ಪ್ರತಿಯು ಶ್ರೀಸುಧೀಂದ್ರತೀರ್ಥರಲ್ಲಿಯೂ ಇತ್ತು. ಶ್ರೀಭಾಷ್ಯದೀಪಿಕಾಚಾರ್ಯರು ಕಾವೇರಿನದಿ ತೀರದಲ್ಲಿರುವ ಕುಂಭಕೋಣದಲ್ಲಿಯೇ ವೃಂದಾವನಸ್ಥರಾಗಿದ್ದಾರೆ. ಇದಾದ ಅನತಿ ಕಾಲದಲ್ಲಿ ದಿವಾನ್ ಪೂರ್ಣಯ್ಯನವರು ಮಾಧ್ವಮಠತ್ರಯದ ಪೀಠಾಧಿಪತಿಗಳನ್ನು ಮೈಸೂರಿಗೆ ಬರಮಾಡಿಕೊಂಡು ಸೋಸಲೆ, ನಂಜನಗೂಡು ಮತ್ತು ಹೊಳೆನರಸಿಪುರ ಇವುಗಳಲ್ಲಿ ಇವರಿಗೆ ವಸತಿಗಳನ್ನು ಕಲ್ಪಿಸಿಕೊಟ್ಟರು—ಶೇಷಚಂದ್ರಿಕಾಚಾರ್ಯರ ಅರ್ಚಕರಲ್ಲಿ ಅಕ್ಷರಸ್ಥರಾದವರೊಬ್ಬರು ಈ ಅಮೂಲ್ಯ ಗ್ರಂಥವನ್ನು ಸೋಸಲೆಯ ಮಠದ ಪುಸ್ತಕ ಭಂಡಾರದಿಂದ ತಂದಿರಬೇಕು. ಈ ರಾಘವೇಂದ್ರಕವಿಯು ಗ್ರಂಥ ಸಂಗ್ರಹಣಗಳಲ್ಲಿ ಎಷ್ಟು ಆಸಕ್ತಿಯುಳ್ಳವನಾಗಿದ್ದನೆಂಬುವುದು ಇದರಿಂದ ಗೊತ್ತಾಗು ವುದು.

ರಾಘವಾಂಕನು ಬರೆದ ಗ್ರಂಥದೊಳಾ ಹರಿಶ್ಚಂದ್ರಾಖ್ಯಕಾವ್ಯವು ನನ್ನ ಬಳಿಯೊಳಗಿತ್ತು ಆನವಟ್ಟಿಯೊಳದನು ಕೊಟ್ಟರು ಕೋಟಿಲಿಂಗ ಶಿವಣ್ಣನೆಂಬುವರು, ಅದರಸಹಿತಾಂ ಪೋದೆ ಸೋದೆಗೆ ವ್ಯಾಸರಾಯರ ಘನತರ ಕೃಪಾಕಟಾಕ್ಷವ ಬೀರುತಿಹ ಹುಲಿಕಲ್ಲು ಅನತಿತಾಣದೊಳಿಹುದು ಕಂಡೆನು ಗುರುವರರು ಕಟ್ಟಿಸಿ ಇರುವ ದೇವಾಲಯವು ಧರ್ಮಸತ್ರವು ಎರಡನುಕಂಡೆ ಪಂಡಿತರಲ್ಲಿ ಇದ್ದರು ನಮ್ಮವರು ಭೋಜನಗೈಯ್ಯಲೇಬೇಕೆಂದು ಕರಜೋಡಿಸುತ ನಿಂದರು ಅದಕೆವೊಪ್ಪಿದೆ ಅವರ ವಿಷಯವ ನಿಂತು ಪೇಳಿದರು ||

ನಾವು ಷಾಷ್ಟಿಕರೆಮ್ಮ ಮನೆ ನಾಲ್ಕಿಹುದು ಈ ಊರಿನಲಿ ಶ್ರೀವತ್ಸಗೋತ್ರೋದ್ಭವರು ನಮ್ಮನು ಕರೆಯುವರು ಮಳಖೇಡಿಯವರೆಂತೆಂಬ ಮನೆತನದಿ । ಜಾಮದಗ್ನಿಯಗೋತ್ರ ನಮ್ಮಯ ಗೋತ್ರ ಒಂದೇ ಪ್ರವರದೊಳಗಡಗಿಹುದು ಗುರುವರ ವ್ಯಾಸರಾಯರ ಕಾಲದಿಂ ನಾವಿಲ್ಲಿ ವಾಸಿಪೆವು ||

ಇಲ್ಲಿ ಅರ್ಚಕರಾದ ನಮಗೆಯು ಮಂತ್ರಪುಷ್ಪವ ಪೇಳ್ವ ಜನರಿಗು ಉತ್ತಮವಾದ ದತ್ತಿಗಳಿರುವುವು ಕಾಣಿಕೆಯು ನಿತ್ಯ ಬರುತಿಹದದನು ಭುಂಜಿಸಿ ಗುರುವರರ ಹರಿಸೇವೆಯನು ಮಾಡುತಿಹೆವು ನಾವೆಂದು ಪೇಳಿದರು ||

ಒಂದು ವರ್ಷಕ್ಕೆ ನೂರವರಹದ ಧನದ ಆದಾಯವಿದೆ ಧವಸಧಾನ್ಯಗಳೆಲ್ಲ ವರ್ಷಾಂತ್ಯಗಳ ಸಲಹುವುದು । ನಮ್ಮ ದಾಯಾದ್ಯರುಗಳಲಿ ಹತ್ತೆಂಟು ಮನೆಯವರಿಲ್ಲಿನಿಂ ತೆರಳಿದರು ಮಾಳೂರೆಂಬ ಗ್ರಾಮಕೆ ಅಲ್ಲಿ ಮನೆ ಮಾರುಗಳ ಮಾಡುತಲಲ್ಲಿಯೇ ನಿಂತಿಹರು ಹೈದರ್ ಪ್ರಭುವು ತನ್ನಯತಂದೆಯಾಳಿದ ಸರ್ವಮಾನ್ಯದ ಗ್ರಾಮದ ಕರಣಿಕವ ದಯಗೈದು ಈವರಿಗವರ ಸಲಹಿದನು ||

ಮತ್ತೆರಡು ಮನೆಯವರು ಬಾಂಧವ ಜನಸಹಿತ ಮಳಖೇಡೆಯೊಳು ಇರ್ಪರು ಅಲ್ಲಿ ಟೀಕಾಚಾರ್ಯವರ್ಯರ ಗುರು ಅಕ್ಷೋಭ್ಯತೀರ್ಥರ ಘನ ವೃಂದಾವನವು ತಾನಿಹುದು ನಮ್ಮವರಲ್ಲಿ ಅರ್ಚಕರಾಗಿ ಸುಖದಿಂದಿರ್ಪರೀವರಿಗೆ (ಸನ ೧೮೦೧ ನೆ ಇಸ್ವಿ)

ಗುರುಗಳಿಬ್ಬರು ನಮ್ಮ ಷಾಷ್ಟಿಕರೆಂದು ಹಿರಿಯರು ಪೇಳುತಿರ್ದರು ಈಗ ಗುರು ತಾನಿದ ಕೊಡೆಯರೆನ್ನುತ ಕಳೆದ ಆಷಾಢದಲಿ ಆರಾಧನೆಗೆ ಬಹು ತಡಗೈದು ರಾಜಾಜ್ಞೆಯೊಳು ನಮ್ಮವರರ್ಚನೆಗೆ ಪ್ರತಿಬಂಧಕವ ಗೈವುತ ಬಳಿಕ ಪಂಚಾಯಿತರು ಪೇಳಿದ ತೆರದಿ ರೊಡತನವನೊಪ್ಪುತ ಪತ್ರವ ಬರೆಸಿಕೊಂಡಿಹರು ||

ಎರಡು ತಿಂಗಳ ಹಿಂದೆ ಸ್ವಾಮಿಗಳೆಂದು ಸಂನ್ಯಾಸಿಗಳು ಇಬ್ಬರು ನಮ್ಮ ಊರಿಗೆ ಬಂದು ಇದ್ದರು ಅದರೊಳಗೊಬ್ಬರನು ನಾವ್ ಕಂಡಿಹೆವು ಪ್ರತಿವರ್ಷ ಸೋದೆಗೆ ಬರುತಲಿರವರು ||

ನಾವು ಉಡುಪಿಗೆ ಹೋದಕಾಲದೊಳಿವರು ಅಲ್ಲಿಗೆ ಬರುತಿಹರು ನಮ್ಮ ವಾಸದವೂರು ಕುಂದಾಪುರವದೆಂಬುವರವರು ಬಡವರು । ಜೊತೆಯೊಳಗೆ ಬಂದವರು ದ್ರವ್ಯವ ಗಳಿಸಿ ತಂದವರಂತೆ ತೋರಿತು ಇಬ್ಬರೀವೂರಿನಲಿ ಪಕ್ಷದ್ವಯದೊಳಿದ್ದರು— ಅವರು ಒಕ್ಕಣಿಸಿದರು ನಮ್ಮೊಳಗೆಂದರೀಮಾತ||

ಹೊಸಬರನು ನಾವ್ ಕಂಡದಿನ ಸಮ್ಮುದವ ತೋರ್ದರು ಬಳಿಕ ಗರ ಹೊಡದಂತೆ ಆ ಬಳಿಕ ಮುಖದಲಿ ಭೀತಿಮಾತಿನ ತೊದಲನುಡಿ ಭ್ರಾಂತಿಯಂಭಾವ ಮೂಡಿತ್ತು. ಇದಕೆ ಕಾರಣ ನಮಗೆ ತಿಳಿಯದು ನಾವೀರ್ವರು ಬಿಡಿ ಸಂನ್ಯಾಸಿಗಳು ವ್ಯಾಸರಾಯರ ಕಾಲದಲಿ ಪೂಜೆಗೈಯ್ಯಲೋಸುಗ ಕೆಲವು ಪ್ರತಿಮೆಗಳಿತ್ತಿಹರು ಮನವಲಿದು — ನಮ್ಮಯ ಹಿರಿಯರೆನಿಸಿದ ಗುರು ಪರಂಪರೆಗೆ ||

ವ್ಯಾಸರಾಯರ ಪರಮ ಪುಣ್ಯಸ್ಥಾನವೆನಿಸಿದ ತುಂಗಾದ್ವೀಪದಲಿ ಇರುತಿಹ ನವವೃಂದಾವನವ ದರ್ಶನಗೈದು ದೇವರಪೂಜೆ ನೈವೇದ್ಯಗಳ ಬೋಜನಗೈದು ತೆರುವಾಯ । ರಾತ್ರಿಯೊಳು ಪಂಪಾಕ್ಷೇತ ದೊಳು ವಿಶ್ರಮಿಸಿ ದೇವಾಲಯದ ಬಳಿಯೊಳು ಮಲಗಿರಲು ಸ್ವಪ್ನವಾದಯ್ತು ಆದರಿಂಬಂದೆವಿಲ್ಲಿಗೆ ಎನುತ ಪೇಳಿದರು ||

ಸ್ವಪ್ನ ಹೊಸಬರಿಗಾಯಿತೆಂದರು ಗುರುವ್ಯಾಸರಾಯರ ಮೃತ್ತಿಕೆಯ ಕೊಂಡೈದು ಹುಲಿಕಲ್ಲಿನಲಿ ವೃಂದಾವನ ಪ್ರತಿಷ್ಠೆಯ ಮಾಡಬೇಕೆನುತ ಅದಕೆ ಬಂದೆವು ಸೋದೆ ಸ್ವಾಮಿಗಳಿದಕೆ ಸಮ್ಮತಿ ಕೊಟ್ಟಿಹರು ಭಾಷ್ಯದೀಪಿಕೆ ಬರೆದ ಸ್ವಾಮಿಗಳೆಮಗೆ ಗುರುಗಳು ಶಾಂತಿ ಅವರೊಳಗಾಯ್ತು **ಆಕಾಲದೊಳವರಿಗೆ** ಮೃತಿಯು ಘಟಿಸಿತು ಅದರಿಂದ ನಮ್ಮಯ ಕಾರ್ಯಕೆ ತಾಮಸ ತಾನಾಯ್ತೆಂದು ಪೇಳಿದರು ॥

ಬಂದರಲ್ಲಿಗೆ ಮಂಗಳೂರಿನ ನಮ್ಮ ಷಾಷ್ಟಿಕರೊಳಗೆ ಬಹು ಧನವಂತರೆ ನಿಸಿದ ರತುನಪಡಿ ಬೆಳ್ಳಿ ಬಂಗಾರಗಳ ಜೊತೆಯೊಳು ಬಹಳ ದ್ವೀಪಗಳ। ಮುತ್ತು ಹವಳದ ಬಹಳ ವ್ಯಾಪಾರವನುಮಾಡುವ ನೆಲ್ಲೀಕಾಯಿ ತಿಮ್ಮಪ್ಪ ರೆಂಬರ ಸ್ವಂತ ಕೋರಿಯ ಮುಖ್ಯ ಮೊಕ್ತೇಸರರು ಸೆಂಟಲೂಯಿ ಎಂಬರು ಇವರ ಸಹಕಾರಿ ಗಳು ವಾಮನಪ್ಪೈಗಳೆಂಬುವರು ॥

ಇದನು ಕೇಳಿದ ಸ್ವಾಮಿಗಳು ತಮ್ಮ ವೇಷಗಳ ಬದಲಿಸಿ ಲಿಂಗವಂತರು ಹಳ್ಳಿಹಳ್ಳಿಗೆ ಹೋಗಿ ಮೆಣಸು ಜೀರಿಗೆ ವ್ಯಾಪಾರಮಾಡುವ ನಾವು ಸೋದಬವು ನಮ್ಮ ಸ್ಥಳವೆಂದೆನುತ ಪೇಳುತಲಿ। ಹತ್ತು ಮೈಲಿಯ ದೂರದಲಿ ನಮ್ಮೂರ ವರ ಕಾಣುತ ಹಳ್ಳಕಿಳಿವುತ ಮುಳ್ಳು ತುಳಿವುತ ದಾರಿಗಾಣದೆ—ಅಲೆದು ಪೋಗುತಲಿರ್ದರೆಂಬುದ ಕೇಳಿದೆವು ಕಾರಣ ನಮಗೆ ತಿಳಿಯದು—ಎನುತ ಪೇಳಿದರು ॥

ಆಗಲಾ ನುಡಿಗೇಳಿ ನಿಶ್ಚಯಿಸಿಕೊಂಡೆನು ನನ್ನ ಮನದೊಳು ಇವನೇ ದೇವರ ಕದ್ದು ಕೊಂಡೋಡಿರುವ ಭೀಮಾಚಾರ್ಯನಿರಬಹುದೆಂದು ಊಹೆ ಯೊಳು। ಮುಂದೆ ಸೋದೆಗೆ ಪೋದೆ ಅಲ್ಲಿನ ವಾದಿರಾಜರು ಬಹಳ ಸಂಪದ ಗಳಿಸಿ ತಮ್ಮಯ ಮಠವ ನಿರ್ಮಿಸಿಕೊಂಡಿಹರು ಭೂಧನ ಬಹಳವಿರುತಿದೆ. ಪಚ್ಚೆಯುವಿರಲನ ಪ್ರತಿಮೆಯು ಬಹಳ ಬೆಲೆಬಾಳುವುದು ಹತ್ತುಲಕ್ಷಕೆ ಮೀರಿ ಕೊಂಡಿಹ ಆಸ್ತಿಪಾಸ್ತಿಗಳೆಲ್ಲ ಶೋಭಿಪುದು ॥

ಇಲ್ಲಿ ಗುರುವರವ್ಯಾಸರಾಯರಿಗಗ್ರಪೂಜೆಯು ಮಾಡುತಿಪ್ಪರು ವ್ಯಾಸರಾಯರೆ ಉಡುಪಿಯೊಳಗಿರುತಿರುವ ಕೃಷ್ಣನಪೂಜೆ ದೇವಾಲಯಂವು ಸಹಿತಾಗಿ ವಾದಿರಾಜರ ಕರಕೆ ತಾವೇ ಕೊಟ್ಟರದು ಮೊದಲಾಗಿ ವ್ಯಾಸರಾಯರಿಗಗ್ರ ಪೂಜೆಯು ಉಡುಪಿಯೊಳು ಸೋದೆಯೊಳು ನಡೆವಂದದಲಿ ಶಾಸನ ಬರೆದಿಹರು ಶ್ರೀವಾದಿರಾಜರು ಇವರ ಗುರ್ವಾಜ್ಞೆಯನು ನಿರೂಪವ ವ್ಯಕ್ತವಾಯಿ ಕಡಿತವ ದೆಂದು ಕರೆಯುವರು ||

ವ್ಯಾಸರಾಯರ ವಾರ್ಧಿಕದೊಳವರಪ್ಪಣೆಯು ಪಡೆವುತ ವಾದಿರಾಜರು ಮುಂದೆ ಬಹದುಷ್ಕಾಲದೊಳುಂ ಕೃಷ್ಣ ದೇವರಸೇವೆ ಪೂಜಾದಿಗಳ ಕ್ರಮಂತೆಯೊಳು ನಡೆವತೆರನನು ಮಾಡಿ ಪರ್ಯಾಯಗಳನೇರ್ಪಡಿಸುತ್ತ ಕ್ರಮವಹ ಕಟ್ಟುಪಾಡನು ಮಾಡಿ ದ್ರವ್ಯಸಹಾಯ ಧಾನ್ಯಸಹಾಯವೆಲ್ಲವಗೈದು ಕೊಟ್ಟರು ಈಗಲದು ನಡೆಯುತಿದೆ ನೋಡುವುದು ||

ಈಗನನ್ನೊಳಗಿರುವ ಕಥನವನೆಲ್ಲ ಸಂಕ್ಷೇಪದಲಿ ಪೇಳಿದೆ ಈ ಪುಸ್ತಕದ ಹೊರೆಗಳಿಗೊಂದು ಪ್ರತ್ಯೇಕದಲಿ ಯಾನವಮಾಡಿ ಪೆಟ್ಟಿಗೆಯು ತುಂಬಿಕೊಳ್ಳುತ ಮುಂದೆ ನಡೆಯುತ್ತಿರುವೆ ನಿತ್ಯದಲಿ । ಸೋದೆಯೊಳು ಕೆಲಕೆಲವು ಬೊಂಬೈನಗರದೊಳು ಕೆಲಕೆಲವು ಈ ರೀತಿಯಲಿ ನಾಕಂಡೂರೊಳಗೆ ದೊರೆತ ಅಪೂರ್ವ ಗ್ರಂಥಗಳಾಯ್ದು ಭಂಡಾರವನೆ ಮಾಡಿಹೆನದನು ನಮ್ಮೂರೊಳಗೆ ಸ್ಥಾಪಿಸಿ ಸರ್ವರಿಗೂ ಸುಲಭದಲಿ ದೊರೆವಂತೆ ತಿಳಿವಂತೆ ಮಾಡುವೆನೆಂಬ ಮನಸಿದೆ ಮಂತ್ರಾಲಯದ ಗುರುಗಳಪ್ಪಣೆಯಾದ ತೆರದಿಂದ ನಡೆದುಕೊಳ್ಳುವೆನು ||

★ಹಲವು ಮಾತಿಂದೇನು ನಮ್ಮಯ ಷಾಷ್ಟಿಕರ ವಿವರವನು ಬೇರೇ ಗ್ರಂಥರೂಪದಿ ಬರೆಯಲೇಬೇಕಾಗಿ ಬಂದಿದೆ ಸೋದೆಯೊಳು ದೊರೆಯಿತು

---

''ಮೈಸೂರಿನ ಪ್ರಥಮ ರೆಸಿಡೆಂಟರಾಗಿದ್ದ ಕರ್ನಲ್ ಕ್ಲೋಸ್ ಸಾಹೇಬರು ೧೮೦೧ರಲ್ಲಿ ಪೂನಾಕ್ಕೆ ರೆಸಿಡೆಂಟರಾಗಿ ವರ್ಗವಾಗಿ ಅಲ್ಲಿ ೧೮೧೧ರವರೆವಿಗೂ ಇದ್ದರು.'' ಎಂಬುದಾಗಿ ಮೈಸೂರು ಗೆಜಿಟಿಯರ್ ೧ನೇ ಸಂಪುಟದಲ್ಲಿ ೪೮೯ನೇ ಪುಟದಲ್ಲಿ ಉಕ್ತವಾಗಿದೆ. ಇವರೇ ಪ್ರಥಮ ಜನಗಣತಿಯ ಮುಖ್ಯಾಧಿಕಾರಿಗಳಾಗಿದ್ದರೆಂಬುದನ್ನು ಈ ಮೊದಲೇ ಉಲ್ಲೇಖಿಸಿದ್ದೇವೆ.

ವ್ಯೆಗಣ್ಣ ದೇವನ ರನ್ನಗನ್ನಡಿ ಬೊಂಬೈನಗರವಲಿ ದೊರೆಯಿತು ಶಿಲಾಶಾಸನವು ಈಗಳೀ ಸಂಧಿಯೊಳು ಬಹುಕಥೆ ಪೇಳ್ವ ಸಂಭ್ರಮವಿತ್ತು ಕುಂಫಣಿದೊರೆಯು ಸರ್ದಾರರವರು ಪೂನಾಪಟ್ಟಣಕೆ ಶೀಘ್ರದಿ ಬರುವ ಶಾಸನ ಬರೆದು ಕಳುಹಿದರು ನಮ್ಮ ಪ್ರಧಾನ ಮುಖ್ಯ ಕಚೇರಿಯಲ್ಲಿಹುದು ||

ಮಂಗಳವು ಶ್ರೀಬಾದರಾಯಣ ಗುರುವರೇಣ್ಯಗೆ ಮಂಗಳವು ಶ್ರೀಮಧ್ವ ರಾಯರು ವ್ಯಾಸರಾಯರಿಗೆ। ಮಂಗಳವು ಮಂತ್ರಾಲಯದ ಮನೆಯೊಳು ಯೋಗತಪಸಿನ ಸಿದ್ಧಿಪುರುಷರು ರಾಘವೇಂದ್ರರಿಗೆ ||

ಗುರುಗಳೆಂದರೆ ವ್ಯಾಸರಾಯರೇ ರಾಘವೇಂದ್ರರು ಕೊಟ್ಟರೆನಗಪ್ಪಣೆಯ ಪ್ರಕಟಿಸುವಂತೆ–ಪ್ರಕಟಿಸಿಹೆ || ದೋಷವಿದ್ದರೆ ಅವರೆತಿದ್ದುವರು। ನಾಮ ಮಾತ್ರಕೆ ನಾನು ಪೆಸರಿಪೆ ಗುರುಗಳಿಗಿದು ಸಮರ್ಪಣೆ ಆನಂದತೀರ್ಥರ ನಾಮ ಧಾರಕ ಮಾಳ್ಪ ಬಿನ್ನಹವು ||

ಭದ್ರಂ ; ಶುಭಂ ; ಮಂಗಳಂ.



# ತಪ್ಪು ಒಪ್ಪೋಲೆ

| ಪುಟ | ಸಾಲು | ತಪ್ಪು | ಒಪ್ಪು |
|---|---|---|---|
| x | ೧ | ಪಾನರಾಃ | ಪನರಾಃ |
| ೨ | ೩ | ದುರ್ಲರಭಃ | ದುರ್ಲಭಃ |
| ೬ | ೪ | ಮನೆಗಳ | ಮನೆತನಗಳ |
| ೮ | ೧೪ | ಸ್ವಪ್ಪ | ಸ್ವಪ್ನ |
| ೮ | ೨೩ | ದರ | ದ |
| ೯ | ೨೨ | ಪಣೀತ | ಪ್ರಣೀತ |
| ೧೭ | ೧೬ | ಭಾಸ್ಯರ | ಭಾಸ್ಕರ |
| ೨೧ | ೨೧ | ವಿದಾರಣ್ಯ | ವಿದ್ಯಾರಣ್ಯ |
| ೨೧ | ೨೩ | ಅಕ್ಷೋಭ | ಅಕ್ಷೋಭ್ಯ |
| ೨೨ | ೨ | ಮಿತ | ಮಿತ್ರ |
| ೨೩ | ೧೫ | ಛಿನಕ್ತಿ | ಛಿನತ್ತಿ |
| ೨೪ | ೧೨ | ೧೦೮೩ | ೧೮೦೩ |
| ೨೬ | ೯ | ಮನೆಗಳ | ಮನೆತನಗಳ |
| ೩೩ | ೮ | ಪಿಳಂಬ | ವಿಳಂಬ |
| ೩೩ | ೧೪ | ಬಿಲ್ಹಣಾ | ಬಿಲ್ಹಣ |
| ೪೦ | ೪ | ಅದರೆ | ಆದರೆ |
| ೪೧ | ೨೨ | ಅವಶ್ಯಕ | ಆವಶ್ಯಕ |
| ೪೪ | ೨ | ಪುರಂದರದಾಸ | ಪುರಂದರವಿಠಲ |
| ೫೬ | ೧೪ | ಬರದ | ಬಂದ |
| ೫೬ | ೧೬ | ರವನೆ | ರವರನೆ |
| ೬೩ | ೧೯ | ನಿಮಾತೃ | ನಿರ್ಮಾತೃ |
| ೭೩ | ೧೫ | ಅತ | ಆತ |
| ೭೬ | ೧೭ | ತನ | ತನ್ನ |
| ೭೭ | ೨೭ | ಕೊಂಡನಂಕತೆ | ಕೊಂಡನಂತೆ |
| ೭೭ | ೨೭ | ವಿಕೆಯು | ಕವಿತೆಯು |
| ೮೪ | ೧೩ | ದ್ವೀಪಿಕಾ | ದೀಪಿಕಾ |
| ೮೬ | ೧೧ | ವಶಿಷ್ಠ | ಹರಿತಸ |

| | | | |
|---|---|---|---|
| ೮೬ | ೧೬ | ವಾಸಂಗ | ವ್ಯಾಸಂಗ |
| ೮೬ | ೧೯ | ಶ್ರೀಸುಮತೀ | ಶ್ರೀಸುವ್ರತೀ |
| ೮೬ | ೨೧ | ವಶಿಷ್ಠ | ಹರಿತಸ |
| ೮೬ | ೭ | ವಶಿಷ್ಠ | ಹರಿತಸ |
| ೮೭ | ೧೭ | ಸತ್ಕಾಲಕ್ಷೇಮ | ಸತ್ಕಾಲಕ್ಷೇಪ |
| ೮೮ | ೪ | ನಾಯ | ನ್ಯಾಯ |
| ೯೧ | ೧೬ | ಅಣುವ್ಯಾಖ್ಯಾನ | ಅನುವ್ಯಾಖ್ಯಾನ |
| ೯೧ | ೧೮ | ಯಾವುಪತ್ಯ | ಯಾದುಪತ್ಯ |
| ೯೧ | ೧೯ | ವ್ಯಾಕ್ಯಾರ್ಥ | ವಾಕ್ಯಾರ್ಥ |
| ೯೪ | ೧೧ | ಶ್ರೀಮನ್ನಾಯ | ಶ್ರೀಮನ್ನ್ಯಾಯ |
| ೧೦೧ | ೩ | ಕಾಶ್ಯಪ | ಭಾರದ್ವಾಜ |
| ೧೦೨ | ೧೧ | ಕಾಸ್ಯಪ | ಕಾಶ್ಯಪ |
| ೧೦೬ | ೧೦ | ಸಾಕ್ಷತ್ವ | ಸಾಕ್ಷಾತ್ವ |
| ೧೦೮ | ೭ | ವಶಿಷ್ಠ | ಹರಿತಸ |
| ೧೦೯ | ೧೮ | ಹರಿಕಥಾಂಬೋಧಿ ಚಂದ್ರಮ | ಹರಿಕಥಾಂಬುಧಿ ಚಂದ್ರ |
| ೧೦೯ | ೧೮ | ಸೋದರಸಂಬಂದಿಗಳು | ಚಿಕ್ಕಪ್ಪನವರು |
| ೧೨೦ | ೧೯ | ಕಾಶ್ಯಪ | ಭಾರದ್ವಾಜ |
| ೧೩೫ | ೩ | ಗಧಾದಂ | ಗದಾಧರ |
| ೧೪೦ | ೭ | ಮಿಶ್ರೇಯ | ಮಿಶ್ರೀಯ |
| ೧೪೦ | ೧೨ | ನಮಕ | ನಾಮಕ |
| ೧೪೩ | ೧೨ | ಜಿಜ್ಞಾಸ್ವ | ಜಿಜ್ಞಾಸಸ್ವ |
| ೧೪೫ | ೩ | ಪ್ರಾರ್ಥನೆ | ಪಾರ್ಥನೆ |
| ೧೫೭ | ೧ | ಶ್ರೀನರಸಿಂಹತೀರ್ಥರು | ನರಸಿಂಹತೀರ್ಥ |
| ೧೭೭ | ೧೬ | ಸಂಜನಿ | ಸಂಜನಿಸಿ |
| ೨೦೬ | ೨೨ | ಲೇಖನಿ | ಲೇಖನಿ |
| ೨೦೬ | ೨೪ | ಸಮಾತ | ಸಮಾಗತ |
| ೨೦೬ | ೨೫ | ಯತಿನಾಮಂತೇ | ಯತಿನಾಂತೇ |
| ೨೨೧ | ೬ | ವಧಿಕ | ಪಥಿಕ |

ಬಿಕರಿಗೆ ಸಿದ್ಧವಾಗಿರುವ ಪುಸ್ತಕಗಳು

## ಶ್ರೀಹರಿಕಥಾಮೃತಸಾರ

(ಶ್ಲೋಕಾನುಕ್ರಮಣಿಕೆ ಸಹಿತ)

ಬೆಲೆ: ಹತ್ತು ರೂಪಾಯಿ

## ಶ್ರೀಸುಮಧ್ವವಿಜಯ

(ಶ್ರೀಅಣುಸುಮಧ್ವವಿಜಯ, ಮಧ್ವನಾಮ ಸಹಿತ.)

ಬೆಲೆ: ಐದು ರೂಪಾಯಿ

(ಮೂಲ ಶ್ಲೋಕಗಳು ಮಾತ್ರ—ದಪ್ಪ ಅಕ್ಷರದಲ್ಲಿ)



ಶ್ರೀ ಕೃಷ್ಣಾವಧೂತರಿಂದ

## ಶ್ರೀ ರಾಘವೇಂದ್ರ ತಂತ್ರ

(ದಪ್ಪ ಅಕ್ಷರದಲ್ಲಿ)

ಬೆಲೆ: ಐದು ರೂಪಾಯಿ



ಸದ್ಯದಲ್ಲೇ ಬಿಡುಗಡೆಯಾಗಲಿರುವ ಪುಸ್ತಕಗಳು

## ಶ್ರೀವಿಷ್ಣುಸಹಸ್ರನಾಮ

(ಮೂಲ ಮತ್ತು ಅರ್ಥ ತಾತ್ಪರ್ಯ ಸಹಿತ)

## ಶಾಲಗ್ರಾಮ ಉತ್ಪತ್ತಿ, ಲಕ್ಷಣಗಳು ಮತ್ತು ಮಹಿಮೆ

(ಶ್ಲೋಕ ಮತ್ತು ಅರ್ಥ ತಾತ್ಪರ್ಯ ಸಹಿತ)

ಶ್ರೀಹರಿವಿಠಲಪ್ರಕಾಶನ

2-3, ಮೊದಲನೆ ಮುಖ್ಯರಸ್ತೆ

ನರಸಿಂಹರಾಜ ಕಾಲೊನಿ, ಬೆಂಗಳೂರು-560 019

ದೂರವಾಣಿ: 603412